ನೆಮ್ಮದಿಯ ನಾಳೆ ನಮ್ಮದು

# ಹೊಸತು

ISSN 2319 - 7307

ಮಾರ್ಚ್ ೨೦೧೭

ಬೆಲೆ : ₹ ೨೦




ವಿಶ್ವಮಹಿಳಾ ದಿನದ ರೂವಾರಿ ಕ್ಲಾರಾ ಜೆಟ್ಕಿನ್




204 ಪುಟಗಳು 48 ಛಾಯಾಚಿತ್ರಗಳು
(ಎಂ. ಎಸ್. ಕೃಷ್ಣನ್ ಸ್ಮರಣ ಸಂಸ್ಥೆ ಪ್ರಕಟಣೆ)

₹ 175

# ನವಕರ್ನಾಟಕದ ರೂವಾರಿ ಶ್ರೀ ಆರ್. ಎಸ್. ರಾಜಾರಾಮ್ ಅವರ ಕುರಿತು ಇದೀಗ ಪ್ರಕಟವಾದ ಎರಡು ಕೃತಿಗಳು

ರಾಜಾರಾಮ್ ಅವರು ನಡೆಸಿದ ವಿವಿಧ ಚಟುವಟಿಕೆಗಳ, ಎದುರಿಸಿದ ತೊಡಕುಗಳ ಮತ್ತು ಮಾಡಿದ ಸಾಧನೆಗಳ ಸ್ಥೂಲ ಪರಿಚಯ ನೀಡುವ ಅಪೂರ್ವ ಕೃತಿಗಳು 'ಸೃಷ್ಟಿಯ ಸೆಲೆ – ಆರ್. ಎಸ್. ರಾಜಾರಾಮ್' ಮತ್ತು 'ನವಕರ್ನಾಟಕದ ಆರ್. ಎಸ್. ರಾಜಾರಾಂ.




56 ಪುಟಗಳು
(ಕನ್ನಡ ಸಂಘ, ಕಾಂತಾವರ ಪ್ರಕಟಣೆ)

₹ 45

ಮೊದಲನೆಯ ಕೃತಿಯ ಲೇಖಕರು ಶ್ರೀ ಪರಂಜ್ಯೋತಿ. ಇದರಲ್ಲಿ 48 ಛಾಯಾಚಿತ್ರಗಳೂ ಸೇರಿದಂತೆ 204 ಪುಟಗಳಿವೆ. ಬೆಲೆ ರೂ. 175. ಎರಡನೆಯ ಕೃತಿಯ ಲೇಖಕರು ಶ್ರೀ ಸಿ. ಆರ್. ಕೃಷ್ಣರಾವ್. 56 ಪುಟಗಳು, ಬೆಲೆ ರೂ. 45.

ನವಕರ್ನಾಟಕ ಪ್ರಕಾಶನ ಸಂಸ್ಥೆಯ ರೂವಾರಿಯಾದ ಆರ್. ಎಸ್. ರಾಜಾರಾಮ್ 'ಪುಸ್ತಕಗಳ ಮೂಲಕ ಮನುಕುಲದ ಸೇವೆ' ಎಂಬ ಉದಾತ್ತ ಧ್ಯೇಯವಾಕ್ಯದ ತೋರು ಬೆಳಕಿನಲ್ಲಿ ಮುನ್ನಡೆದವರು. ಒಂದು ಪುಸ್ತಕವೆಂದರೆ ಬಿಳಿಯ ಹಾಳೆಯ ಮೇಲೆ ಅಚ್ಚು ಮಾಡಿದ ಅಕ್ಷರಗಳು ಮಾತ್ರವಲ್ಲ; ಪುಸ್ತಕಕ್ಕೆ ಒಂದು ಹೃದಯವಿದೆ, ಪುಸ್ತಕ ಮನುಷ್ಯನ ಅತ್ಯುತ್ತಮ ಸಂಗಾತಿಯಾಗಬಲ್ಲದು. ಜ್ಞಾನ ಪ್ರಸಾರದ ಪರಿಣಾಮಕಾರಿ ಸಾಧನವೂ ಆಗಬಲ್ಲದು ಎಂಬ ತಿಳಿವಳಿಕೆ ಅವರದು.

ಪ್ರಕಾಶನ ಸಂಸ್ಥೆಯ ಮುಖ್ಯ ಗುರಿ ಲಾಭಗಳಿಕೆಯೊಂದೇ ಅಲ್ಲ. ಅದಕ್ಕೊಂದು ನೈತಿಕ ಆಯಾಮವಿದೆ, ಮಾನವೀಯತೆಯ ಮುಖವಿದೆ, ಜೊತೆಗೆ ಅದಕ್ಕೆ ಸಾಮಾಜಿಕ ಹೊಣೆಗಾರಿಕೆಯೂ ಇದೆ ಎಂದು ನಂಬುತ್ತಾರೆ ಅವರು. ಇದಕ್ಕೆ ಅವರು ಅನುಸರಿಸಿದ ಶಿಸ್ತು, ಶ್ರದ್ಧೆ ಹಾಗೂ ನಿಯಮಗಳು ಮತ್ತು ಈ ವರ್ಷಗಳಲ್ಲಿ ಅವರು ಪ್ರಕಟಿಸಿರುವ ಸಾವಿರಾರು ವೈವಿಧ್ಯಮಯ ಪುಸ್ತಕಗಳು ನಿದರ್ಶನವಾಗಿವೆ.

ತಮ್ಮ ಕೆಲಸದಲ್ಲಿ ಸಂಪೂರ್ಣ ತೊಡಗಿಕೊಳ್ಳುವುದು ಮತ್ತು ಸಂಬಂಧಪಟ್ಟ ಎಲ್ಲರನ್ನು ತೊಡಗಿಕೊಳ್ಳುವಂತೆ ಪ್ರೇರೇಪಿಸುವುದು ಅವರ ಕಾರ್ಯ ವೈಶಿಷ್ಟ್ಯ. ಎಲ್ಲ ಲೇಖಕರೊಂದಿಗೆ ಸೌಹಾರ್ದ ಸಂಬಂಧವಿರಿಸಿಕೊಳ್ಳುವುದು ಅಂಥ ವೈಶಿಷ್ಟ್ಯಗಳಲ್ಲೊಂದು. ಈ ಕಾರಣದಿಂದ ನವಕರ್ನಾಟಕ ದೊಡ್ಡ ಲೇಖಕರ ಬಳಗವನ್ನು ಹೊಂದಲು ಸಾಧ್ಯವಾಯಿತು. ತಾವು ಸಾಧಿಸಿರುವ ಯಶಸ್ಸು ಎಲ್ಲರ ದುಡಿಮೆಯ ಫಲ ಎಂಬುದು ಅವರ ವಿನೀತ ಭಾವ.




# ಹೊಸತು

ಒಳಗೇನಿದೆ?

## ನೆಮ್ಮದಿಯ ನಾಳೆ ನಮ್ಮದು




**ಚಿತ್ರಗಳು :** ನಾಮದೇವ ಕಾಗದಗಾರ, ವಿ. ಗೋಪಾಲ್,
ಗೋಪಿ ಹಿರೇಬೆಟ್ಟು, ಜಿ. ಎಂ. ಬೊಮ್ನಳ್ಳಿ
**ಮುಖಪುಟ :** ವಿಶ್ವ ಮಹಿಳಾ ದಿನದ ರೂವಾರಿ ಕ್ಲಾರಾ ಜೆಟ್ಕಿನ್
**ವಿನ್ಯಾಸ :** ನವಕರ್ನಾಟಕ ವಿನ್ಯಾಸ
**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ಕೆಲದಿನಗಳಿಂದ ರಾಜ್ಯ ಕಾಂಗ್ರೆಸ್ಸಿನ ಹಿರಿಯ ನಾಯಕ ಎನಿಸಿಕೊಂಡಿದ್ದ ಎಸ್. ಎಂ. ಕೃಷ್ಣ ತೆಪ್ಪಗಿದ್ದಾರೆ. ಎಂಬತ್ತು ದಾಟಿರುವ ಈತ ಕಾಂಗ್ರೆಸ್ಸಿಗನಾಗಿ ಎಲ್ಲ ಅಧಿಕಾರವನ್ನು ಅನುಭವಿಸಿದ್ದಾರೆ. ಮುಖ್ಯಮಂತ್ರಿ, ಸ್ಪೀಕರ್, ಕೇಂದ್ರದಲ್ಲಿ ಸಚಿವ ಸ್ಥಾನ, ಇತ್ಯಾದಿ ಎಲ್ಲ ಆಗಿದ್ದವರು. ಈಗ ಏಕದಮ್ ಕಾಂಗ್ರೆಸ್ಸಿನ ಸದಸ್ಯತ್ವಕ್ಕೆ ರಾಜೀನಾಮೆ ನೀಡಿ ನನ್ನನ್ನು ಕಾಂಗ್ರೆಸ್ ನಾಯಕತ್ವ ಕಡೆಗಣಿಸಿದೆ ಎಂದು ಆಪಾದಿಸಿದ್ದಾರೆ. ಇಷ್ಟು ವರ್ಷ ರಾಜಕೀಯದಲ್ಲಿ ಮೆರೆದ ಈತ ವಯಸ್ಸಾದ ನಂತರ ನಿವೃತ್ತರಾಗಿ ಆರಾಮವಾಗಿರುವುದು ಬಿಟ್ಟು ಇನ್ನೂ ಬಯಕೆಗಳನ್ನಿರಿಸಿಕೊಂಡಿರುವುದು ಸೋಜಿಗದ ಸಂಗತಿ. ಅದರಲ್ಲೂ ಕಾಂಗ್ರೆಸ್ ಪಕ್ಷ ದುರ್ಬಲಗೊಂಡಿರುವ ಕಾಲದಲ್ಲಿ, ಪಕ್ಷದಿಂದ ಎಲ್ಲ ಲಾಭಗಳನ್ನು ಪಡೆದುಕೊಂಡಂಥ ಕೃಷ್ಣನಂಥವರು ದ್ರೋಹ ಬಗೆದಿರುವುದು ಅಕ್ಷಮ್ಯ. ಅವರು ಈಗ ಪ್ರಬಲವಾಗಿರುವ, ಕೇಂದ್ರದಲ್ಲಿ ಅಧಿಕಾರ ಹಿಡಿದಿರುವ ಭಾಜಪಗೆ ಸೇರುತ್ತಾರೆಂಬ ವದಂತಿ ದಟ್ಟವಾಗಿ ಹರಡಿತ್ತು. ಇನ್ನೇನೂ ಭಾಜಪದ ರಾಜ್ಯಾಧ್ಯಕ್ಷ ಯಡಿಯೂರಪ್ಪನವರನ್ನು ಭೆಟ್ಟಿಯಾಗಿ ಮಾತುಕತೆ ನಡೆಸಲಿದ್ದಾರೆಂಬ ಸುದ್ದಿ ಕೂಡ ಮಾಧ್ಯಮಗಳಲ್ಲಿ ಹಾರಾಡಿತು. ಈಗ ಸದ್ಯಕ್ಕೆ ಎಲ್ಲ ತಣ್ಣಗಾಗಿದೆ. ಕೃಷ್ಣ ವಿವೇಕ ತಂದುಕೊಂಡು ಸುಮ್ಮನಾಗಿದ್ದಾರೋ ಇಲ್ಲ ಕಾದುನೋಡುವ ತಂತ್ರಗಾರಿಕೆ ನಡೆಸುತ್ತಿದ್ದಾರೋ ನೋಡಬೇಕು. ರಾಜಕಾರಣಿಗಳ ಅಧಿಕಾರ ದಾಹ ಎಷ್ಟಿರುತ್ತದೆಂಬುದಕ್ಕೆ ಹಲವು ಉದಾಹರಣೆಗಳು ಇವೆ. ಅವರಲ್ಲಿ ಕೃಷ್ಣ ಒಬ್ಬರು. ಮುಪ್ಪಡರುತ್ತಿರುವಾಗ ಪಕ್ಷಾಂತರ ಮಾಡಹೊರಟಿರುವುದು ನಾಚಿಕೆಗೇಡು. ಕಾಂಗ್ರೆಸ್ ಪಕ್ಷ ತೊರೆಯುವುದು ಅವರ ಸ್ವಂತ ವಿಷಯ. ಪಕ್ಷಾಂತರ ಮಾಡುವುದು ಕಾಂಗ್ರೆಸ್ಸಿಗರಿಗೆ, ಭಾಜಪದವರಿಗೆ ಹೊಸದೇನಲ್ಲ. ಬಹುಶಃ ಬಲಪಂಥೀಯ ರಾಜಕಾರಣಿಗಳಿಗೆ ಸಂದರ್ಭ ಸಾಧಕತನ ಪಕ್ಷಾಂತರ ಒಂದು ಬಗೆಯ ಕ್ಯಾನ್ಸರ್ ರೋಗದಂತೆ ಸುಪ್ತವಾಗಿರುತ್ತದೆಂದು ತೋರುತ್ತದೆ. ಬೆಂಗಳೂರು ನಗರವನ್ನು ಸಿಂಗಾಪುರ ಮಾಡಲು ಹೊರಟ ಕೃಷ್ಣ ಮಣ್ಣು ಮುಕ್ಕಿದ್ದು ರಾಜಕುಮಾರ್ ಅಪಹರಣ ಕಾಲದಲ್ಲಿ ಕಾಡುಗಳ್ಳ ವೀರಪ್ಪನ್‌ಗೆ ರೇಡಿಯೋ ಸಂದೇಶ ಕಳಿಸಿ ಮೊರೆಯಿಟ್ಟದ್ದು ಮರೆಯಲು ಸಾಧ್ಯವೇ?

✴ ✴ ✴

ಚೆನ್ನೈನ ಸೇಂಟ್ ಫೋರ್ಟ್ ಜಾರ್ಜ್ ಕೋಟೆಯಲ್ಲಿ ದರ್ಬಾರು ನಡೆಸುವ ಕನಸು ಕಾಣುತ್ತಿದ್ದ ಶಶಿಕಲಾ ಪೋಯಿಸ್ ಗಾರ್ಡನ್ ನಿವಾಸದಿಂದ ಬೆಂಗಳೂರಿನ ಪರಪ್ಪನ ಅಗ್ರಹಾರದ ಕೋಣೆ ಸೇರಿದ್ದಾರೆ. ದಶಕಗಳ ಕಾಲ ತಮಿಳುನಾಡಿನ ರಾಜಕೀಯ ಸೂತ್ರ ಹಿಡಿದಿದ್ದ 'ಕ್ರಾಂತಿ ನಾಯಕಿ' (ಪುರಚ್ಚಿ ತಲೈವಿ) ಮುಖ್ಯಮಂತ್ರಿ ಗಾದಿಯಲ್ಲಿದ್ದಾಗಲೇ ನಿಧನ ಹೊಂದಿದ ತಿಂಗಳಲ್ಲಿ ಏನೆಲ್ಲ ಬೆಳವಣಿಗೆಗಳಾದವು ಎಂಬುದು ಎಲ್ಲರಿಗೂ ತಿಳಿದಿರುವ ಸಂಗತಿ. ಮಾಧ್ಯಮಗಳಿಗಂತೂ ಊಹಾಪೋಹಗಳನ್ನು, ವದಂತಿಗಳನ್ನು ಹರಡುವುದಕ್ಕೆ ಸುಗ್ಗಿಯೇ ಸುಗ್ಗಿ. ಈ ರಾಜಕೀಯ ಪಗಡೆಯಾಟದಲ್ಲಿ ಕೇಂದ್ರ ಸರಕಾರದ ಏಜೆಂಟರಾಗಿ ರಾಜ್ಯಪಾಲ ಸುಧಾಕರ ರಾವ್ ವಹಿಸಿದ ನಿಧಾನಗತಿಯ ಪಾತ್ರ ಮೆಚ್ಚುವಂಥದ್ದೇನಲ್ಲ. ಈ ಹುದ್ದೆಯ ನಿರರ್ಥಕತೆಯನ್ನು ಸಾಬೀತುಪಡಿಸಲು ಇದು ಇನ್ನೊಂದು ಉದಾಹರಣೆ. ಮೊದಲಿನಿಂದಲೂ ಸಂವಿಧಾನದತ್ತವಾದ ರಾಜ್ಯಪಾಲರ ಹುದ್ದೆ ವಿವಾದಾತ್ಮಕವೇ, ರಾಜಕೀಯವಾಗಿ ಎಲ್ಲ ರೀತಿಯಲ್ಲೂ ದುರುಪಯೋಗವಾಗುತ್ತಿರುವ ಜೊತೆ ದುಬಾರಿ ಖರ್ಚಿನ ಬಾಬತ್ತೂ ಆಗಿದೆ. ಅದು ಬೇರೆಯೇ ವಿಷಯ. ತಮಿಳುನಾಡಿನ ರಾಜಕೀಯಕ್ಕೆ ಮರಳೋಣ.

ಈ ರಾಜ್ಯದಲ್ಲಿ ಪ್ರಾರಂಭದಿಂದಲೂ ಪ್ರಮುಖ ವ್ಯಕ್ತಿಗಳದ್ದೆ ದರ್ಬಾರು. ರಾಜಗೋಪಾಲಾಚಾರಿ, ಕಾಮರಾಜ ನಾಡಾರ್, ಅಣ್ಣಾದೊರೈ, ಕರುಣಾನಿಧಿ, ಎಂ. ಜಿ. ರಾಮಚಂದ್ರನ್, ಜಯಲಲಿತಾ ಎಲ್ಲ ಏಕವ್ಯಕ್ತಿ ಕೇಂದ್ರಿತ ನಾಯಕರೆ.

(೬ನೇ ಪುಟಕ್ಕೆ )




ಸಂಪುಟ-೧೮ ಸಂಚಿಕೆ-೮ ಮಾರ್ಚ್ ೨೦೧೭

■ **ಗೌರವ ಸಂಪಾದಕ**

ಜಿ. ರಾಮಕೃಷ್ಣ

■ **ಸಂಪಾದಕ-ಮುದ್ರಕ-ಪ್ರಕಾಶಕ**

ಸಿದ್ದನಗೌಡ ಪಾಟೀಲ

■ **ಸಹಸಂಪಾದಕರು**

ಇಂದಿರಾ ಕುಮಾರಿ

ಸಿ. ಆರ್. ಕೃಷ್ಣರಾವ್

ಎನ್. ಗಾಯತ್ರಿ

ಕೆ. ಎಲ್. ಗೋಪಾಲಕೃಷ್ಣಯ್ಯ

ರಾಮಲಿಂಗಪ್ಪ ಟಿ. ಬೇಗೂರು

ಎಸ್. ಸುರೇಂದ್ರ

■ **ವ್ಯವಸ್ಥಾಪಕ**

ಎ. ರಮೇಶ ಉಡುಪ

■ **ಮುದ್ರಣ**

**ಶ್ರೀ ವಿನಾಯಕ ಪ್ರಿಂಟರ್ಸ್**
೭೩೮/೧೦, ೬೦ನೇ ಅಡ್ಡರಸ್ತೆ
೫ನೇ ಬ್ಲಾಕ್, ರಾಜಾಜಿನಗರ
ಬೆಂಗಳೂರು - ೫೬೦ ೦೧೦

■ **ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೨೨೫೯೨೪೭೩, ೨೨೨೦೩೫೮೨
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**




# ಸಂಪಾದಕೀಯ

## ಕ್ಲಾರಾ ಮತ್ತು ಮಹಿಳಾ ದಿನ

**ಮಾ**ರ್ಚ್ ೮, ವಿಶ್ವ ಮಹಿಳಾ ದಿನ. ವಿಶ್ವ ಮಹಿಳಾ ದಿನಾಚರಣೆಯ ಪರಿಕಲ್ಪನೆಯನ್ನು ರೂಪಿಸಿ, ಅದರ ಅನುಷ್ಠಾನಕ್ಕಾಗಿ ಒತ್ತಾಯಿಸಿ, ವಿಶ್ವ ಮಹಿಳಾ ಚಳುವಳಿಯ ಕನಸನ್ನು ಸಾಕಾರಗೊಳಿಸಿದ ಕ್ಲಾರಾ ಜೆಟ್ಕಿನ್ ಹತ್ತೊಂಭತ್ತನೇ ಶತಮಾನದ ಜರ್ಮನಿಯ ಅಪ್ರತಿಮ ಕಮ್ಯುನಿಸ್ಟ್ ನಾಯಕಿ. ವಿಶ್ವ ಮಹಿಳಾ ದಿನದ ರೂವಾರಿಯಾದ ಈಕೆ, ನೂರ ಆರು ವರ್ಷಗಳ ಹಿಂದೆ ಮಹಿಳಾ ದಿನವನ್ನು ದುಡಿಯುವ ಮಹಿಳೆಯರ ಸಂಘಟಿತ ಆಚರಣೆಯ ದಿನವನ್ನಾಗಿ ರೂಪಿಸಿದಳು; ಮಹಿಳಾ ಪ್ರಶ್ನೆಗಳನ್ನು ಮತ್ತು ಸಮಸ್ಯೆಗಳನ್ನು ರಾಜಕೀಯ ಅಜೆಂಡಾ ಮಾಡಲು ಬಳಸಿಕೊಂಡಳು.

೧೯೧೦ರ ಆಗಸ್ಟ್‌ನಲ್ಲಿ ಡೆನ್ಮಾರ್ಕ್‌ನ ಕೋಪನ್‌ಹೇಗನ್‌ನಲ್ಲಿ ಎರಡನೆಯ ಅಂತರರಾಷ್ಟ್ರೀಯ ಸೋಷಿಯಲಿಸ್ಟ್ ಮಹಿಳಾ ಸಮ್ಮೇಳನದಲ್ಲಿ ಚರಿತ್ರಾರ್ಹ ಸಭೆಯೊಂದು ನಡೆಯಿತು. ಅಲ್ಲಿನ ಕಾರ್ಮಿಕರ ಅಸೆಂಬ್ಲಿ ಹಾಲ್‌ನಲ್ಲಿ ಸುಮಾರು ನೂರು ಮಹಿಳೆಯರು ಭಾಗವಹಿಸಿದ್ದರು. ೧೭ ದೇಶಗಳ ಪ್ರತಿನಿಧಿಗಳು ಮತ್ತು ಅಮೆರಿಕೆಯ ಹಲವಾರು ಕಾರ್ಮಿಕ ಸಂಘಟನೆಗಳ ನಾಯಕಿಯರು, ಸಾರ್ವತ್ರಿಕ ಮಹಿಳಾ ಮತದಾನವನ್ನು ಹಾಗೂ ದುಡಿಯುವ ಮಹಿಳೆಯರಿಗೆ ಎಂಟು ಗಂಟೆ ದುಡಿಮೆ, ಹೆರಿಗೆ ರಜೆ ಮತ್ತು ಆರೋಗ್ಯ ವಿಮೆಯನ್ನು ಬೆಂಬಲಿಸುವ ಹಲವಾರು ಮಹಿಳಾ ಸಂಘಟನೆಗಳು ಮತ್ತು ಸೋಷಿಯಲಿಸ್ಟ್ ಪಕ್ಷಗಳು ಈ ಸಮ್ಮೇಳನದಲ್ಲಿ ನೆರೆದಿದ್ದವು. ಈ ಸಮ್ಮೇಳನದಲ್ಲಿ ಸಶಕ್ತವಾದ ಜರ್ಮನಿಯ ಸಮಾಜವಾದಿ ಪಕ್ಷ ಮತ್ತು ಅದರಲ್ಲಿದ್ದ ಮಹಿಳಾ ಹಕ್ಕುಗಳ ಪ್ರತಿಪಾದಕರಿಂದಾಗಿ ಅಂತರರಾಷ್ಟ್ರೀಯ ಸಮಾಜವಾದಿ ಚಳುವಳಿಯ ಮೇಲೆ ಗಾಢ ಪರಿಣಾಮ ಬೀರಲು ಸಾಧ್ಯವಾಯಿತು. ಅದರಲ್ಲಿ ಪ್ರಮುಖಳು ಕ್ಲಾರಾ ಜೆಟ್ಕಿನ್. ಈ ಸಮ್ಮೇಳನದಲ್ಲಿದ್ದವರೆಲ್ಲಾ ಸರ್ವಾನುಮತದಿಂದ ವಾರ್ಷಿಕವಾಗಿ ಒಂದು ದಿನವನ್ನು ವಿಶ್ವ ಮಹಿಳಾ ದಿನವನ್ನಾಗಿ ಆಚರಿಸಬೇಕೆಂದು ನಿರ್ಣಯ ಮಂಡಿಸಿದರು. ಜಗತ್ತಿನ ಎಲ್ಲೆಡೆಯೂ ನಡೆಯುತ್ತಿರುವ ಮಹಿಳಾ ಹೋರಾಟಗಳನ್ನು ಗುರುತಿಸಿ, ಪರಸ್ಪರ ಸೌಹಾರ್ದ ಸಂಪರ್ಕವನ್ನು ಬಲಪಡಿಸುವ ಮತ್ತು ಮಹಿಳಾ ಹಕ್ಕುಗಳನ್ನು ಗುರುತಿಸಿ ವಿಜೃಂಭಿಸುವ ದಿನವನ್ನಾಗಿ ಮಹಿಳಾ ದಿನವನ್ನು ಆಚರಿಸಬೇಕೆಂಬ ನಿರ್ಣಯವನ್ನು ಈ ಸಭೆಯಲ್ಲಿ ತೆಗೆದುಕೊಳ್ಳಲಾಯಿತು. ೧೯೦೮ರಲ್ಲಿ ನ್ಯೂಯಾರ್ಕಿನ ಪಟ್ಟಣದಲ್ಲಿ ವಲಸೆ ಬಂದ ಮಹಿಳೆಯರು ನಡೆಸಿದ ಪ್ರತಿಭಟನೆ ಮತ್ತು ೧೯೦೯ರಲ್ಲಿ ಸಿದ್ಧ ಉಡುಪುಗಳ ಕಾರ್ಖಾನೆಯ ೨೦,೦೦೦ ಮಹಿಳೆಯರು ಉತ್ತಮ ದುಡಿಯುವ ಸೌಕರ್ಯದ ಬೇಡಿಕೆಗಾಗಿ ಮೂರು ತಿಂಗಳುಗಳ ಕಾಲ ನಡೆಸಿದ ಮುಷ್ಕರವು ಇಂತಹದೊಂದು ನಿರ್ಣಯವನ್ನು ಕೈಗೊಳ್ಳುವುದಕ್ಕೆ ಅವರಿಗೆ ಸ್ಫೂರ್ತಿಯ ಸೆಲೆಯಾಗಿತ್ತು.

ಸಾರ್ವತ್ರಿಕ ಮಹಿಳಾ ಮತದಾನದ ಬೇಡಿಕೆಯನ್ನಿಟ್ಟುಕೊಂಡು ೧೯೧೧ರಲ್ಲಿ ಅಂತರರಾಷ್ಟ್ರೀಯ ಮಹಿಳಾ ದಿನವನ್ನು ಆಚರಿಸಲಾಯಿತು. "ಮತದಾನದ ಹಕ್ಕು ಮಹಿಳೆಯರ ಶಕ್ತಿಯನ್ನು ಬಲಪಡಿಸಿ ಸಮಾಜವಾದದ ಹೋರಾಟಕ್ಕೆ ನೆರವಾಗುತ್ತದೆ," ಎಂಬುದು ಈ ದಿನಾಚರಣೆಯ ಗುರಿಯಾಗಿತ್ತು. ಜರ್ಮನಿ ಮತ್ತು ಆಸ್ಟ್ರಿಯಾಗಳಲ್ಲಂತೂ ಹಲವಾರು ರೀತಿಯಲ್ಲಿ ಬೃಹತ್ ಸಂಖ್ಯೆಯಲ್ಲಿ ಮಹಿಳೆಯರು ಈ ದಿನವನ್ನು ಆಚರಿಸಿದರು. ರಷ್ಯಾದ ಮಹಿಳಾ ನಾಯಕಿ ಅಲೆಕ್ಸಾಂಡ್ರಾ ಕೊಲಂತೈ ೧೯೧೧ರಲ್ಲಿ ನಡೆದ ಅಂತರರಾಷ್ಟ್ರೀಯ ಮಹಿಳಾ ದಿನಾಚರಣೆಯನ್ನು ಹೀಗೆ ವರ್ಣಿಸಿದ್ದಾಳೆ: "ಜರ್ಮನಿ ಮತ್ತು ಆಸ್ಟ್ರಿಯಾದಲ್ಲಿ ಒಂದು ಅಗಾಧವಾದ ಭೋರ್ಗರೆಯುವ ಮಹಿಳಾ ಸಾಗರವೇ ನೆರೆದಿತ್ತು. ಸಭೆ, ಸಮಾರಂಭಗಳು ಚಿಕ್ಕ ಹಳ್ಳಿ, ಪಟ್ಟಣಗಳನ್ನೂ ಸೇರಿದಂತೆ ಎಲ್ಲೆಲ್ಲೂ ಚಟುವಟಿಕೆಯ ವಾತಾವರಣ ಏರ್ಪಟ್ಟಿತ್ತು. ಸಭಾಂಗಣಗಳು ಕಿಕ್ಕಿರಿದು, ಕೆಲವೊಮ್ಮೆ ಪುರುಷರು ತಾವೆದ್ದು ಮಹಿಳೆಯರಿಗೆ ಸ್ಥಳಮಾಡಿ ಕೊಡುತ್ತಿದ್ದರು. ಇದಂತೂ ಮಹಿಳೆಯರು ಒಟ್ಟಾಗಿ ತೋರಿಸಿದ ಮೊಟ್ಟಮೊದಲನೆಯ ಕ್ರಾಂತಿಕಾರಿ ಚಟುವಟಿಕೆಯಾಗಿತ್ತು. ಅಪರೂಪಕ್ಕೆ ಗಂಡಸರು ಮಕ್ಕಳೊಂದಿಗೆ ಮನೆಯಲ್ಲಿದ್ದು ತಮ್ಮ ಪತ್ನಿಯರನ್ನು ಗೃಹಬಂಧನದಿಂದ ಬಿಡುಗಡೆಗೊಳಿಸಿದ್ದರು. ಅಂದು ನಡೆದ ಮೆರವಣಿಗೆಯಲ್ಲಿ ಸುಮಾರು ೩೦,೦೦೦ ಮಹಿಳೆಯರು ಭಾಗವಹಿಸಿದ್ದರು. ಪೊಲೀಸರು ಪ್ರತಿಭಟನಾಕಾರರ ಬ್ಯಾನರ್‌ಗಳನ್ನು ಕಿತ್ತೊಗೆಯಲು ಪ್ರಯತ್ನಿಸಿದಾಗ, ಮಹಿಳೆಯರು ಅವರನ್ನು ಹಿಮ್ಮೆಟ್ಟಿಸಿ ಅಚಲವಾಗಿ ನಿಂತರು. ಪಾರ್ಲಿಮೆಂಟಿನಲ್ಲಿ ಸಮಾಜವಾದಿ ಡೆಪ್ಯುಟಿಗಳ ಪ್ರಯತ್ನದಿಂದಾಗಿ ಆಗ ಉಂಟಾದ ಸಂಘರ್ಷದಲ್ಲಿ ನಡೆಯಬಹುದಾಗಿದ್ದ ರಕ್ತಪಾತವನ್ನು ತಡೆಯಲಾಯಿತು." ಯೂರೋಪಿನ ಎಲ್ಲೆಡೆಯೂ ೧೯೧೧ರ ಮಹಿಳಾ ದಿನದಂದು ಒಂದು ಮಿಲಿಯನ್ ಮಹಿಳೆಯರು ತಮ್ಮ ಉದ್ಯೋಗದ ಹಕ್ಕುಗಳಿಗಾಗಿ ಮತ್ತು ದುಡಿಮೆಯ ಕ್ಷೇತ್ರದಲ್ಲಿನ ಲಿಂಗತಾರತಮ್ಯವನ್ನು ಪ್ರತಿಭಟಿಸಿ ಮೆರವಣಿಗೆ ಮಾಡಿದರು. ಹೀಗೆ ಕ್ಲಾರಾಳ ಕಾರ್ಯವ್ಯಾಪ್ತಿ ಕೇವಲ ಜರ್ಮನಿಗೆ ಸೀಮಿತವಾಗಿರಲಿಲ್ಲ. ಅವಳು ಇಡೀ ವಿಶ್ವವನ್ನೇ ಒಂದು ಮನೆಯಂತೆ ಭಾವಿಸಿ ಅದರ ಒಳಿತಿಗಾಗಿ ಶ್ರಮಿಸಿದಳು.

ಹೀಗೆ ನೂರು ವರ್ಷಗಳಿಗಿಂತ ಹೆಚ್ಚಿನ ಇತಿಹಾಸವಿರುವ ಈ ಮಹಿಳಾ ದಿನಾಚರಣೆಯನ್ನು ಭಾರತದಲ್ಲಿ ೧೯೭೫ರ ನಂತರ ಅತ್ಯಂತ ಗಮನಾರ್ಹ ರೀತಿಯಲ್ಲಿ ಆಚರಿಸಲಾಗುತ್ತಿದೆ. ವಿವಿಧ ಮಹಿಳಾ ಸಂಘಟನೆಗಳು, ರಾಜಕೀಯ ಪಕ್ಷಗಳ ಮಹಿಳಾ ಘಟಕಗಳು ಮತ್ತು ಸರ್ಕಾರವೂ ಸೇರಿದಂತೆ ಭಿನ್ನ ರೀತಿಯಲ್ಲಿ ಆಚರಿಸುತ್ತಾ ಬಂದಿದ್ದಾರೆ. ಶತಮಾನಗಳ ಇತಿಹಾಸವಿರುವ ಭಾರತದ ಮಹಿಳಾ ಹೋರಾಟವು ಇಂದು ಸಂದಿಗ್ಧ ಸ್ಥಿತಿಯಲ್ಲಿದೆ.

ದೀರ್ಘಕಾಲದ ಹೋರಾಟಗಳ ಮೂಲಕ ಗಳಿಸಿಕೊಂಡ ಪ್ರತಿಯೊಂದು ಮಹಿಳಾ ಹಕ್ಕು ಜಾಗತೀಕರಣದ ಬಿರುಗಾಳಿಯಲ್ಲಿ ಅಪಹಾಸ್ಯಕ್ಕೆ ಗುರಿಯಾಗುತ್ತಿದೆ. ಆರಂಭದಲ್ಲಿ ಮಹಿಳಾದಿನದ ಆರಂಭಕ್ಕೆ ಕಾರಣಕರ್ತರಾದ ಗಾರ್ಮೆಂಟ್ ಮಹಿಳಾ ಕಾರ್ಮಿಕರು ಇಂದಿಗೂ ಕೂಡ ದುಸ್ಥಿತಿಯಲ್ಲೇ ಜೀವನ ಸವೆಸುತ್ತಿದ್ದಾರೆ. ಜಾಗತೀಕರಣದ ಹೆಸರಿನಲ್ಲಿ ಸರ್ಕಾರಿ ಉದ್ಯೋಗಗಳೆಲ್ಲ ಖಾಸಗಿಯವರ ಪಾಲಾಗಿವೆ, ಇಲ್ಲವೆ ಸರ್ಕಾರವೇ ಅದನ್ನು ಗುತ್ತಿಗೆದಾರರಿಗೆ ಕೈಯೆತ್ತಿ ಕೊಟ್ಟಿವೆ. 'ಸೇವೆಗೆಂದೇ ಹುಟ್ಟಿರುವಂತೆ' ಹೆಣ್ಣುಗಳು ಮಾಡುವ ಅಂಗನವಾಡಿ, ಬಿಸಿಯೂಟ ಮತ್ತು ಆಶಾ ಕೆಲಸಗಳು ಅವರಿಗೆ ಕಾರ್ಯಕರ್ತೆಯರೆಂಬ ಪಟ್ಟ ಕೊಟ್ಟಿದೆಯೇ ಹೊರತು ಅವರನ್ನು ಉದ್ಯೋಗಿಗಳೆನಿಸಿಲ್ಲ. ಹೀಗಾಗಿ ಉದ್ಯೋಗಿಗಳಿಗೆ ಸಿಕ್ಕುವ ಯಾವ ಭತ್ಯೆ, ಸೌಕರ್ಯಗಳ ಹಕ್ಕು ಅವರಿಗೆ ಕೊಡಲಾಗಿಲ್ಲ. ಆರ್ಥಿಕ ಸಬಲೀಕರಣದ ಘೋಷಣೆಯನ್ನು ಮಾಡುತ್ತಲೇ ಮಹಾತ್ಮ ಗಾಂಧಿ ರಾಷ್ಟ್ರೀಯ ಉದ್ಯೋಗ ಖಾತ್ರಿಯಂತಹ ಯೋಜನೆಗಳನ್ನು, ಕಲ್ಯಾಣಕಾರಿ ಸೌಲಭ್ಯಗಳನ್ನು ನಿಲ್ಲಿಸಲಾಗುತ್ತಿದೆ. ಮಹಿಳೆಯರು, ದಲಿತರು ಮತ್ತು ಆದಿವಾಸಿಗಳ ಕಲ್ಯಾಣಕ್ಕೆಂದು ಮೀಸಲಿಡುವ ಸಹಾಯಧನವನ್ನು ಸೂಕ್ತವಾಗಿ ಬಳಸದೆ ಹಿಂತಿರುಗಿಸಲಾಗುತ್ತಿದೆ. ಆರೋಗ್ಯ, ಉದ್ಯೋಗ ಮತ್ತು ಶಿಕ್ಷಣಕ್ಕೆ ಬಜೆಟ್‌ನಲ್ಲಿ ಮೀಸಲಿಡುವ ಹಣ ಕಡಿತಗೊಳ್ಳುತ್ತಿದೆ. ಪೌರ ಕಾರ್ಮಿಕರು, ಅಂಗನವಾಡಿ ಕಾರ್ಯಕರ್ತೆಯರು, ಮನೆಗೆಲಸದವರು, ಆಶಾ ಕಾರ್ಯಕರ್ತೆಯರು, ಬಿಸಿಯೂಟದ ಕಾರ್ಯಕರ್ತೆಯರು, ಕಟ್ಟಡ ಕಾರ್ಮಿಕರು, ಗಾರ್ಮೆಂಟ್ ಮಹಿಳೆಯರು, ಬೀದಿ ಬದಿ ಅಂಗಡಿಯ ಕಾರ್ಮಿಕರು, ಕೃಷಿ ಕೂಲಿಗಾರರು– ಇನ್ನಿತರ ಅಸಂಘಟಿತ ವಲಯದ ಮಹಿಳೆಯರು ದುಡಿಮೆಯ ಶೇಕಡ ೯೨.೩ರಷ್ಟಿದ್ದಾರೆ. ದೇಶದ ಜಿಡಿಪಿಗೆ ಅವರ ಕೊಡುಗೆ ಶೇಕಡ ೬೦. ಆದರೆ ವಿರಾಮ, ರಜೆಗಳಿಲ್ಲದೆ, ನೀರು, ಶೌಚಾಲಯದಂತಹ ಮೂಲಸೌಕರ್ಯಗಳಿಲ್ಲದೆ ಅತಿಯಾದ ದುಡಿತಕ್ಕೆ ಒಳಗಾಗಿದ್ದಾರೆ. ಬೇಕಾಬಿಟ್ಟಿಯಾಗಿ ಕೆಲಸದಿಂದ ತೆಗೆದು ಹಾಕುವ ಮಾಲೀಕರ ಪ್ರವೃತ್ತಿಯಿಂದಾಗಿ ಅವರುಗಳು ಸದಾ ಆತಂಕದಲ್ಲೇ ಬದುಕುತ್ತಿದ್ದಾರೆ. ಇತ್ತೀಚಿನ ನೋಟು ಅಮಾನ್ಯೀಕರಣದಿಂದಾಗಿ ಬಡ ಹೆಣ್ಣು ಮಕ್ಕಳ ಬದುಕು ಮೂರಾಬಟ್ಟೆಯಾಗಿದೆ. ಈ ಮಹಿಳೆಯರು ತಮ್ಮ ಮೇಲೆ ನಡೆಯುತ್ತಿರುವ ದೌರ್ಜನ್ಯದ ವಿರುದ್ಧ ಹೋರಾಟ ನಡೆಸಲು ಈ ಮಹಿಳಾ ದಿನಾಚರಣೆ ವೇದಿಕೆಯಾಗಬೇಕಿದೆ.

ಹಣಕಾಸು ಮಾರುಕಟ್ಟೆಯ ಆರ್ಥಿಕತೆಗೆ ಲಾಭವೇ ಮುಖ್ಯ ಉಸಿರು. ಈ ಲಾಭಬಡುಕ ಸಂಸ್ಕೃತಿಗೆ ಹೆಣ್ಣು ಒಂದು ಸರಕು ಮಾತ್ರ. ಈ ಸರಕು ಆರ್ಥಿಕತೆಗೆ ಕೋಮುವಾದಿ ರಾಜಕಾರಣವೂ ಸೇರಿಕೊಂಡು ಮಹಿಳೆಯರ ಮೇಲಿನ ದಾಳಿ ವಿಭಿನ್ನ ಸ್ವರೂಪಗಳನ್ನು ತಳೆದಿವೆ. ಮಹಿಳೆಯರು ಉಡುವ ಬಟ್ಟೆ, ತೊಡುವ ರೀತಿ, ತಿನ್ನುವ ಆಹಾರ, ಸಾರ್ವಜನಿಕ ಭಾಗವಹಿಸುವಿಕೆ – ಎಲ್ಲದಕ್ಕೂ ನೀತಿನಿಯಮಾವಳಿಗಳನ್ನು ಹೊರಿಸಿ, ಅವರ ಸ್ವಾತಂತ್ರ್ಯವನ್ನು ಅಪಹರಣ ಮಾಡಲಾಗುತ್ತಿದೆ. ದಲಿತ, ಆದಿವಾಸಿ, ಅಲ್ಪಸಂಖ್ಯಾತ, ಲಿಂಗಾಂತರಿಗಳ ಮೇಲೆ ತೀವ್ರತರ ಹಲ್ಲೆ, ಹಿಂಸೆಗಳು ನಡೆಯುತ್ತಿವೆ. ಅವರ ಬದುಕುವ ಹಕ್ಕನ್ನು ಕಿತ್ತುಕೊಳ್ಳಲಾಗುತ್ತಿದೆ. ಇಂದು ರಾಜಾರೋಷವಾಗಿ ಹಾಡು ಹಗಲಿನಲ್ಲೇ ವಯಸ್ಸಿನ ಭೇದವಿಲ್ಲದೆ ಹೆಣ್ಣುಗಳ ಮೇಲೆ ಆಕ್ರಮಣ, ಅತ್ಯಾಚಾರ, ಹಿಂಸೆ ನಡೆಯುವುದು ಸರ್ವೇ ಸಾಮಾನ್ಯವಾಗಿ ಹೋಗಿದೆ. ಇಂತಹ ಘಟನೆಗಳು ನಡೆದಾಗ ಮಂತ್ರಿ ಮಹೋದಯರಿಂದ ಹಿಡಿದು ಮಠದ ಸಂನ್ಯಾಸಿಗಳವರೆಗೂ ಲಂಗುಲಗಾಮಿಲ್ಲದೆ ಹರಿಬಿಡುವ ನಾಲಿಗೆಗೆ ಮಹಿಳೆಯರು ಗುರಿಯಾಗುತ್ತಿದ್ದಾರೆ. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಅವರನ್ನು ರಕ್ಷಿಸುವ ನೆಪ ಹೂಡಿ ಅವಳ ಬದುಕಿನ ಆಯ್ಕೆಯ ಸ್ವಾತಂತ್ರ್ಯ ಮತ್ತು ಸಾರ್ವಜನಿಕ 'ಸ್ಪೇಸ್'ಗೆ ಲಕ್ಷ್ಮಣ ರೇಖೆಗಳನ್ನು ಎಳೆಯಲಾಗುತ್ತಿದೆ. ಶಾಸನ ಸಭೆಯಲ್ಲಿ ಮಹಿಳಾ ಮೀಸಲಾತಿ ಇನ್ನೂ ನೆನೆಗುದಿಗೆ ಬಿದ್ದಿದೆ. ಇವೆಲ್ಲವನ್ನು ಎದುರಿಸುವುದು ಇಂದಿನ ಮಹಿಳಾ ಚಳುವಳಿಯ ಗಂಭೀರ ಸವಾಲುಗಳಾಗಿವೆ.

ಇಂದು ಅಸ್ಮಿತೆಯ ಚಳುವಳಿಗಳು ಗಟ್ಟಿಯಾಗುತ್ತಿವೆ. ಸಮಾಜದ ಅಂಚಿಗೆ ದೂಡಲ್ಪಟ್ಟ, ಇಲ್ಲವೆ ಹೊರಕ್ಕಿಟ್ಟ ಅಲಕ್ಷಿತ, ಅಸ್ಪೃಶ್ಯರೆಂದು ತಳ್ಳಲ್ಪಟ್ಟ ಗುಂಪಿನ ಮಹಿಳೆಯರು ವಿದ್ಯೆ, ಜಾಗೃತಿ ಮತ್ತು ಹೋರಾಟಗಳ ಮೂಲಕ ತಮ್ಮ ಅಸ್ತಿತ್ವವನ್ನು ಕಂಡುಕೊಳ್ಳುತ್ತಿದ್ದಾರೆ. ತಮ್ಮ ಹಕ್ಕುಗಳಿಗಾಗಿ ಹೋರಾಡುತ್ತಿದ್ದಾರೆ. ದಲಿತ, ಆದಿವಾಸಿ, ಲಿಂಗಾಂತರಿ ಮತ್ತು ತೃತೀಯ ಲಿಂಗಿ ಹಾಗೂ ಅಲ್ಪಸಂಖ್ಯಾತ ಧರ್ಮೀಯರ ಸಮುದಾಯಕ್ಕೆ ಸೇರಿದವರ ಹೋರಾಟಗಳು ಮಹಿಳಾ ಹೋರಾಟವೇ. ಆದರೆ ಮಾನವ ಹಕ್ಕುಗಳ ಹೋರಾಟವಾದ ಅಸ್ಮಿತೆಯ ಹೋರಾಟವು ಸಮಾಜದಲ್ಲಿ ದ್ವೀಪಗಳನ್ನು, ಅಡ್ಡಗೋಡೆಗಳನ್ನು ಸೃಷ್ಟಿಸದೆ ಸ್ನೇಹದ ಸೇತುವೆಗಳಾಗುವಂತೆ ಎಚ್ಚರವಹಿಸಬೇಕಾದ್ದು ಮಹಿಳಾ ಚಳುವಳಿಯ ಮುಖ್ಯ ಸವಾಲು. ಈ ಎಲ್ಲ ಸಮಸ್ಯೆ, ಸವಾಲುಗಳನ್ನು ಎದುರಿಸುವ ದಿಕ್ಕಿನಲ್ಲಿ ರಾಷ್ಟ್ರಾದ್ಯಂತ ಹಲವಾರು ಮಹಿಳಾ ಗುಂಪುಗಳು ರಾಜಕೀಯವಾಗಿ ಮತ್ತು ರಾಜಕೀಯೇತರವಾಗಿ ಕಾರ್ಯಪ್ರವೃತ್ತವಾಗಿವೆ. ಇಂತಹ ಸಂದರ್ಭದಲ್ಲಿ ಬಹುತ್ವ ಮತ್ತು ಸಮಗ್ರತೆಯ ಗುಣವನ್ನು ಮಹಿಳಾ ಚಳುವಳಿಯು ರೂಢಿಸಿಕೊಳ್ಳ ಬೇಕಾಗಿದೆ. ಈ ಎಲ್ಲದರ ಪ್ರಾಮುಖ್ಯತೆಯನ್ನು ಮಹಿಳಾ ದಿನಾಚರಣೆಯು ಒಳಗೊಳ್ಳಬೇಕಾಗಿದೆ.

ಭಾರತೀಯ ಮಹಿಳಾ ಹೋರಾಟ ನಡೆದು ಬಂದ ಹಾದಿಯನ್ನು ಅವಲೋಕಿಸಿದಾಗ ಅಕ್ಷರದ ದೀಪ ಹಚ್ಚಿ ಜಾತಿ, ವರ್ಗ ಮತ್ತು ಲಿಂಗ ಅಸಮಾನತೆಯ ವಿರುದ್ಧ ಹೋರಾಡಿದ ಸಾವಿತ್ರಿಬಾಯಿ ಫುಲೆ, ಪಂಡಿತ ರಮಾಬಾಯಿ ಯಂತಹ ಧೀರಮಹಿಳೆಯರ ಪರಂಪರೆ ಅದರ ಬೆನ್ನಿಗಿದೆ. ಹಾಗೆಯೇ ಇಂದು ಸಂಘಟಿತ ಕ್ಷೇತ್ರದಲ್ಲಿ ದುಡಿಯುವ ಮಹಿಳೆಯರು ಅನುಭವಿಸುತ್ತಿರುವ ಆರ್ಥಿಕ ಸುಭದ್ರತೆ ಮತ್ತು ಸೌಕರ್ಯಗಳು ದೀರ್ಘ ಹೋರಾಟದಿಂದ ದೊರಕಿದ್ದು ಎಂಬುದನ್ನು ಮರೆಯಲಾಗದು. ಅದಕ್ಕಾಗಿ ತ್ಯಾಗ, ಹೋರಾಟ ಮಾಡಿದ ನಾಯಕಿಯರನ್ನು ಸ್ಮರಿಸಿಕೊಳ್ಳುವ ಮತ್ತು ಅವರು ಆರಂಭಿಸಿದ ಹೋರಾಟದ ಪಂಜನ್ನು ಮುಂದಕ್ಕೊಯ್ದು, ಸಮಾಜದ ಉಳಿದ ಅವಕಾಶ ವಂಚಿತ ಮಹಿಳೆಯರೂ ಈ ಸೌಲಭ್ಯವನ್ನು ಪಡೆಯಲು ಹೋರಾಟ ಮಾಡುವ ಸಾಮಾಜಿಕ ಸಂಕಲ್ಪ ತೊಡುವ ದಿನಾಚರಣೆ ಇದಾಗಬೇಕು.

ಗಾಯತ್ರಿ. ಎಸ್.






■ ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ₹ ೨೦/- |
| ವಾರ್ಷಿಕ ಚಂದಾ | ₹ ೨೫೦/- |
| ಮೂರು ವರ್ಷಕ್ಕೆ | ₹ ೫೦೦/- |

■ ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦–೨೨೨೫೧೩೮೨

ಕೆಂಪೇಗೌಡ ರಸ್ತೆ
ಬೆಂಗಳೂರು – ೫೬೦ ೦೦೯
✆ : ೦೮೦–೨೨೨೦೩೧೦೬

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪–೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪–೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧–೨೪೨೪೦೯೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨–೨೨೪೩೦೨

*(ಈ ತಿಂಗಳು ೩ನೇ ಪುಟದಿಂದ)*

ಕಳೆದ ಶತಮಾನದ ನಲವತ್ತರ ದಶಕದಲ್ಲಿ ಪೆರಿಯಾರ್ ರಾಮಸ್ವಾಮಿ ನಾಯಕರ್ ನೇತೃತ್ವದಲ್ಲಿ ಪ್ರಾರಂಭವಾದ ದ್ರಾವಿಡ ಚಳವಳಿ ಒಂದು ಹಂತದಲ್ಲಿ ನಿರೀಶ್ವರವಾದಿಯೂ ಆಗಿತ್ತು. ದ್ರಾವಿಡ ಕಳಗಂ ಹೋಳಾದದ್ದು ೧೯೫೨ರಲ್ಲಿ ಚುನಾವಣೆಗಳಲ್ಲಿ ಭಾಗವಹಿಸುವ ವಿಚಾರದಲ್ಲಿ ಭಿನ್ನಾಭಿಪ್ರಾಯ ತಲೆದೋರಿದ್ದರಿಂದ ಆಗ ಹುಟ್ಟಿಕೊಂಡದ್ದೇ ದ್ರಾವಿಡ ಮುನ್ನೇತ್ರ ಕಳಗಂ (ಡಿಎಂಕೆ). ೧೯೬೭ರಲ್ಲಿ ಅಧಿಕಾರ ಗ್ರಹಣ ಮಾಡಿದ ಈ ಪಕ್ಷ ಮತ್ತೆ ಒಡೆದದ್ದು ೧೯೭೦ರ ದಶಕದಲ್ಲಿ. ಆಗಿನಿಂದ ಅಧಿಕಾರ ಮಾತ್ರ ದ್ರಾವಿಡ ಪಕ್ಷಗಳು ಡಿಎಂಕೆ, ಎಐಡಿಎಂಕೆ ಹಿಡಿತದಲ್ಲೇ ಇದೆ. ಡಿಎಂಕೆ ಕುಟುಂಬ ರಾಜಕಾರಣದಲ್ಲಿ ತೊಳಲುತ್ತಿದ್ದರೆ, ಜಯಲಲಿತ ನಿಧನದ ನಂತರ ಛಿದ್ರಗೊಳ್ಳುವ ಹಾದಿಯಲ್ಲಿದೆ. ಆಕೆ ಬದುಕಿದ್ದರೆ ಕಾರಾಗೃಹ ಸೇರುತ್ತಿದ್ದರು. ಅಕ್ರಮ ಆಸ್ತಿ ಗಳಿಕೆ ಮೊಕದ್ದಮೆ ಎರಡು ದಶಕಗಳಿಗೂ ಹೆಚ್ಚು ಕಾಲ ತೆಗೆದುಕೊಂಡಿದೆ. ಸರ್ವೋಚ್ಚ ನ್ಯಾಯಾಲಯದ ತೀರ್ಪು ರಾಜಕಾರಣಿಗಳು, ಭ್ರಷ್ಟ ಅಧಿಕಾರಿಗಳಿಗೆ, ಎಚ್ಚರಿಕೆಯ ಗಂಟೆಯಾಗಿ ಪರಿಣಮಿಸಿದರೆ ಸಾಕು. ಆದರೂ ನ್ಯಾಯಾಂಗ ಇನ್ನೂ ಚುರುಕುಗೊಳ್ಳಬೇಕಾಗಿದೆ. ವಿಶೇಷ ನ್ಯಾಯಾಲಯ ಭ್ರಷ್ಟರ ವಿಚಾರಣೆಗೆ ಸ್ಥಾಪನೆಗೊಂಡು ನಿಗದಿಯಾದ ಅವಧಿಯಲ್ಲಿ ಮುಗಿದರೆ ಉತ್ತಮ. ತಮಿಳುನಾಡು ಒಂದೇ ಅಲ್ಲ ಎಲ್ಲ ರಾಜ್ಯಗಳಲ್ಲೂ ಭ್ರಷ್ಟಾಚಾರ ತಾಂಡವವಾಡುತ್ತಿದೆ.

* * *

ಅಧಿಕಾರಕ್ಕೆ ಬಂದ ಒಂದು ತಿಂಗಳಲ್ಲೇ ಅಮೆರಿಕ ಅಧ್ಯಕ್ಷ ಡೊನಾಲ್ಡ್ ಟ್ರಂಪ್ ಹಿನ್ನಡೆ ಅನುಭವಿಸಿದ್ದಾರೆ. ಅವರಿಗೆ ಆಪ್ತರಾಗಿದ್ದ, ರಾಷ್ಟ್ರೀಯ ಭದ್ರತೆಯ ಸಲಹೆಗಾರರಾಗಿದ್ದ ಮೈಕೇಲ್ ಫ್ಲಿನ್ ರಾಜಿನಾಮೆ ಸಲ್ಲಿಸಿದ್ದಾರೆ. ರಷ್ಯಾದೊಂದಿಗೆ ನಿಕಟ ಸಂಪರ್ಕ ಇರಿಸಿಕೊಂಡಿದ್ದುದು ಆಪಾದನೆ. ಇದು ಆದೇಶದೊಂದಿಗೆ ಸಂಬಂಧಗಳ ಮೇಲೂ ಪರಿಣಾಮ ಬೀರುವ ಸಾಧ್ಯತೆ ಇದೆ. ಟ್ರಂಪ್‌ಗೆ ಆದ ಇನ್ನೊಂದು ಹಿನ್ನಡೆ ಎಂದರೆ ಅವರೇ ನೇಮಕ ಮಾಡಿದ್ದ ಸುಪ್ರೀಮ್ ಕೋರ್ಟ್‌ನ ನ್ಯಾಯಾಧೀಶರು ಕೂಡ ಮುಸ್ಲಿಮ್ ರಾಷ್ಟ್ರಗಳ ವಲಸೆಗಾರರ ಮೇಲೆ ನಿರಾಶ್ರಿತರ ಮೇಲೆ ವಿಧಿಸಿದ್ದ ನಿರ್ಬಂಧವನ್ನು ವಿರೋಧಿಸಿದ್ದು. ಟೈವಾನ್ ಅಧ್ಯಕ್ಷರ ಜೊತೆ ಮಾತುಕತೆ ನಡೆಸಿ ಎರಡು ಚೀಣಾ ನೀತಿ ಅನುಸರಿಸುವರೇನೋ ಟ್ರಂಪ್ ಎಂಬ ಗುಮಾನಿ ಇತ್ತು. ಆದರೆ ಚೀಣಾದ ಅಧ್ಯಕ್ಷರನ್ನು ಸಂಪರ್ಕಿಸಿದ ನಂತರ ಅವರು ತಮ್ಮ ಚೀಣಾ ನೀತಿಯನ್ನು ತಿದ್ದುಕೊಂಡಿದ್ದಾರೆ. ಆದರೂ ಈತ ಯಾವಾಗ ಬೇಕಾದರೂ ಬದಲಾಗಬಹುದು. ಇರಾನಿನ ಮೇಲೆ ವಿಧಿಸಿರುವ ನಿರ್ಬಂಧಗಳೂ ಸಹ ಆದೇಶದೊಂದಿಗೆ ಸಂಬಂಧಗಳನ್ನು ಬಿಗಡಾಯಿಸಿದೆ. ಅಂತೂ ಟ್ರಂಪ್ ಅಧಿಕಾರ ವಹಿಸಿಕೊಂಡ ಮೇಲೆ ಅನಿಶ್ಚಿತತೆ ಅಮೆರಿಕದ ನಾಗರಿಕರನ್ನು ಕಾಡುತ್ತಿದೆ.

* * *

ಕೇಂದ್ರ ಸರಕಾರದ ಬಜೆಟ್ ಮಂಡನೆಯ ದಿನಾಂಕದ ಬದಲಾವಣೆ, ರೈಲ್ವೆ ಆಯವ್ಯಯವನ್ನು ಸಾಮಾನ್ಯ ಬಜೆಟ್‌ನೊಂದಿಗೆ ಸೇರ್ಪಡೆ ಮಾಡಿದ್ದು ಬಿಟ್ಟರೆ ಭಾಜಪದ ಹಣಕಾಸು ಸಚಿವ ಅರುಣ್ ಜೇಟ್ಲಿ ಮಂಡಿಸಿದ ೨೦೧೭–೧೮ರ ಬಜೆಟ್‌ನಲ್ಲಿ ಹೊಸದೇನಿಲ್ಲ. ಅಧಿಕ ಮೌಲ್ಯದ ನೋಟುಗಳ ಚಲಾವಣೆ ರದ್ದುಗೊಳಿಸಿದ ನಂತರ ಮಂಡಿಸಲಾದ ಬಜೆಟ್‌ನಲ್ಲಿ ಹಲವು ನಿರೀಕ್ಷೆಗಳನ್ನು ಇರಿಸಿಕೊಂಡಿದ್ದ ಜನರಿಗೆ ನಿರಾಶೆ ಉಂಟುಮಾಡಿದೆ. ನೋಟು ರದ್ದತಿಯನ್ನು ಸಮರ್ಥಿಸಿಕೊಂಡು ಸಾಕಷ್ಟು ಶಬ್ದಾಡಂಬರ ಮೆರೆದರೂ ಅಂಕಿಅಂಶಗಳನ್ನು ನೀಡದೇ ಹೋದದ್ದು ಜೇಟ್ಲಿಯವರ ಜಾಣತನ. ಪ್ರಧಾನಿ ಮೋದಿಯ ಆಪ್ತ ವಲಯದಲ್ಲಿ ಒಬ್ಬರಾಗಿರುವ ಜೇಟ್ಲಿ ಅವರಂತೆಯೇ ತುಟಿಗೆ ತುಪ್ಪ ಸವರುವ ಕಸುಬನ್ನು ರೂಢಿಸಿಕೊಂಡಿದ್ದಾರೆ. ಆದಾಯ ತೆರಿಗೆ ವಿಚಾರದಲ್ಲಿ ಅವರು ತೋರಿರುವ ರಿಯಾಯಿತಿಗಳು ಅದಕ್ಕೆ ನಿದರ್ಶನ. ಚುನಾವಣೆಗಳನ್ನು ಮುಖ್ಯವಾಗಿ ಉತ್ತರ ಪ್ರದೇಶ, ಪಂಜಾಬ್‌ಗಳನ್ನು ಗಮನದಲ್ಲಿರಿಸಿಕೊಂಡು ಹೆಣೆದಿರುವ ಬಜೆಟ್ ತೇಪೆ ಹಾಕುವ ಕೆಲಸ ಮಾಡಿದೆ. ಕಪ್ಪು ಹಣ ಹೊರಹಾಕುವುದಕ್ಕೆ ಬದ್ಧತೆಯನ್ನು ಮತ್ತೆ ಮತ್ತೆ ಒತ್ತಿಹೇಳಿರುವ ಹಣಕಾಸಿನ ಸಚಿವರು ಯಾವುದೇ ಅಂಕಿಅಂಶಗಳನ್ನು ನೀಡಲು ಹಿಂದೇಟು ಹಾಕಿದ್ದಾರೆ. ನೋಟು ರದ್ದತಿಯಿಂದಾಗಿ ಅಸ್ತವ್ಯಸ್ತಗೊಂಡಿರುವ ಅರ್ಥವ್ಯವಸ್ಥೆಯ ಕುರಿತು ಯಾವುದೇ ಕ್ರಮಗಳನ್ನು ಬಜೆಟ್‌ನಲ್ಲಿ ಸೂಚಿಸಲಾಗಿಲ್ಲ. ರಾಜಕೀಯ ಪಕ್ಷಗಳ ದೇಣಿಗೆಗೆ ಮಿತಿ ಹಾಕಿರುವುದನ್ನು ಬಿಟ್ಟರೆ ಪಾರದರ್ಶಕತೆಗೆ ಹಿಂಜರಿದಿದ್ದಾರೆ. ಹಾಗೆಯೇ ನಗದು ವ್ಯವಹಾರಗಳಿಗೆ ವಿಧಿಸಿರುವ ಮಿತಿ ಕೂಡ ಯಾವುದೇ ರೀತಿಯಲ್ಲಿ ಕಪ್ಪುಹಣದ ಚಲಾವಣೆಯನ್ನು ತಡೆಯದು. ನಗದು ರಹಿತ ವಹಿವಾಟು ಎಂಬ ಮೋದಿ–ಜೇಟ್ಲಿ ಹಗಲುಗನಸು ನನಸಾಗುವುದು ಯಾವತ್ತೂ ಸಾಧ್ಯವಾಗದು. ಅಂತೂ ಜೇಟ್ಲಿ ಬಜೆಟ್ ಎಲ್ಲ ನಿರೀಕ್ಷೆಗಳನ್ನು ಹುಸಿಯಾಗಿಸಿದೆ.

* * *

ಮುಂದಿನ ವರ್ಷವೇ ರಾಜ್ಯದಲ್ಲಿ ಚುನಾವಣೆ. ಅದಕ್ಕಾಗಿ ಎಲ್ಲ ರಾಜಕೀಯ ಪಕ್ಷಗಳೂ ಈಗಿನಿಂದಲೇ ತಯಾರಿ ಮಾಡಿಕೊಳ್ಳುತ್ತಿವೆ. ಅಧಿಕಾರ ಹಿಡಿಯುವ ಕನಸು ಕಾಣುತ್ತಿರುವ ಭಾಜಪ, ಜೆಡಿಎಸ್ ಹಾಗೂ ಆಡಳಿತದಲ್ಲಿರುವ ಕಾಂಗ್ರೆಸ್ ಪಕ್ಷ ಈಗಾಗಲೇ ಪರಸ್ಪರ ಆರೋಪ, ಪ್ರತ್ಯಾರೋಪಗಳಲ್ಲಿ ತೊಡಗಿವೆ. ಅವೆಲ್ಲ ಮಾಮೂಲಿಯೇನೋ ಸರಿ. ಆದರೆ ಈಗೆಲ್ಲ ಸಾವಿರಾರು ಕೋಟಿ ರೂ.ಗಳದ್ದೇ ಕಾರುಬಾರು. ಭ್ರಷ್ಟಾಚಾರದ ಆರೋಪಗಳಲ್ಲಿ ಮುಖ್ಯಮಂತ್ರಿ ಗಾದಿಯ ಮೇಲೆ ಕಣ್ಣಿರಿಸಿರುವ ಯಡಿಯೂರಪ್ಪ, ಸಿದ್ದರಾಮಯ್ಯ ಸಾವಿರ ಕೋಟಿ ರೂ.ಗಳ ಕಪ್ಪ ಸಲ್ಲಿಸಿದ್ದಾರೆ ಎಂದು ಆಪಾದಿಸಿದ್ದಾರೆ. ರಾಜಕೀಯ ನಿವೃತ್ತಿಯ ಸವಾಲು ಹಾರಾಡುತ್ತಿವೆ ಇಬ್ಬರ ಮಧ್ಯೆ. ಆದರೆ ಇವೆಲ್ಲ ಗಾಳಿ ಸಮಾಚಾರದ ಹಾಗೆ ಉದುರಿ ಹೋಗುವಂಥವೆ. ಕರ್ನಾಟಕ ರಾಜ್ಯದಲ್ಲಿ ಅಧಿಕಾರದ ಗದ್ದುಗೆಗೇರುವ ಸಂಭವವಿರುವ ಕಾಂಗ್ರೆಸ್, ಜೆಡಿಎಸ್, ಭಾಜಪಗಳಲ್ಲಿ ಒಳಜಗಳಗಳು ಬಿಗಡಾಯಿಸಿವೆ. ಮುಖಂಡರ ಮಧ್ಯೆ ಜಟಾಪಟಿ ನಡೆಯುತ್ತಿದೆ. ಪರಿಣಾಮ ಏನಾಗುತ್ತೆ ಮುಂದಿನ ವಿಚಾರ.

* * *

ಬೇರೇನೇ ಕೊರತೆಗಳಿರಲಿ ನಮ್ಮ ದೇಶದಲ್ಲಿ ವಿಶೇಷಗಳಿಗೆ ಕೊರತೆ ಇಲ್ಲ. ಜಯಲಲಿತಾ ಸ್ಥಾನಕ್ಕೆ ಯಾರು, ಶರದ್ ಪವಾರ್ ಮತ್ತು ಸಂಗ್ಮಾ ಮಹಾಶಯರಿಗೆ ಪದ್ಮಭೂಷಣ ಪ್ರಶಸ್ತಿಗಳನ್ನೇಕೆ ಕರುಣಿಸಲಾಯಿತು, ಮಾನ್ಯ ಎಸ್. ಎಂ. ಕೃಷ್ಣ ಇದ್ದಕ್ಕಿದ್ದಂತೆ ಅವರ ಪಕ್ಷದಲ್ಲಿ ಪಟಾಕಿ ಸಿಡಿಸಿದ್ದೇಕೆ, ಆದಾಯ ತೆರಿಗೆ ಇಲಾಖೆಯು ಪಾದರಸದಂತೆ ಚುರುಕಾಗಿ ಒಂದು ಪಕ್ಷದವರ ಆಸ್ತಿ ತನಿಖೆ ಆರಂಭಿಸಿರುವುದೇಕೆ, ಹೀಗೆ ಕುತೂಹಲ ಕೆರಳಿಸುವ ಸಂಗತಿಗಳು ಸರಣಿರೂಪದಲ್ಲಿ ಜರುಗುತ್ತಿರುತ್ತವೆ. ಆಶ್ಚರ್ಯವೆಂದರೆ, ಇವೆಲ್ಲಾ ರಾಜಕೀಯ ಪಗಡೆ ಆಟದ ನಡೆಗಳು; ರಾಜಕೀಯ ಆರ್ಥಿಕತೆಯೆಂಬ ನೆಲೆಯಲ್ಲಿ ಇವಕ್ಕೆ ವಿಶ್ಲೇಷಣೆ ನೀಡುವುದು ದುಸ್ಸಾಹಸವಾಗುತ್ತದೆ. ಪ್ರಧಾನ ಮಂತ್ರಿಯವರ ಅದ್ಭುತವೂ 'ವಿರೋಚಿತ'ವೂ ಆದ ನಗದು ರದ್ದತಿಗೆ ಸಹ 'ರಾಜಕೀಯ ಆರ್ಥಿಕತೆ'ಯ ನೆಲೆಯಲ್ಲಿ ಅರ್ಥ ಕಂಡುಕೊಳ್ಳಲು ಹೆಣಗಿ ಸೋತಿರುವವರೆಷ್ಟು! ಅಷ್ಟೇಕೆ, ಪ್ರೊಫೆಸರ್ ಬರಗೂರು ರಾಮಚಂದ್ರಪ್ಪನವರ ನೇತೃತ್ವದಲ್ಲಿ ಶಾಲಾ ಪಠ್ಯಪುಸ್ತಕಗಳ ರಚನೆಯಾಗಿರುವಾಗ, ಎಲ್ಲ ಪುಸ್ತಕಗಳನ್ನೂ ಸಾರ್ವಜನಿಕ ಚರ್ಚೆಗೆ ಒಳಪಡಿಸಬೇಕೆಂಬ ಅಸಾಧಾರಣ ಕೂಗು ಎದ್ದಿರುವುದೇಕೆ? ಹಿಂದೆಂದೂ ಇಡೀ ಪಠ್ಯಪುಸ್ತಕಗಳ ಪುಟಪುಟವೂ ಹೀಗೆ ಸಾರ್ವಜನಿಕ ಚರ್ಚೆಯ ನಂತರ ಅಧಿಕೃತ ಪಠ್ಯಗಳಾದದ್ದು ನೆನಪಿಲ್ಲವಲ್ಲ ಎಂದು ಶಾಸಕರಿಗೆ ತೋಚುವುದಿಲ್ಲವಲ್ಲ, ಏಕೆ? ಅಂದರೆ ಇವೆಲ್ಲಾ ಹೊಸ ಮಾದರಿಯ ಕ್ಷುಲ್ಲಕ ರಾಜಕಾರಣದ ದಾಳಗಳು ಎನಿಸುವುದಿಲ್ಲವೆ?

ಶರದ್ ಪವಾರ್ ಮತ್ತು ಸಂಗ್ಮಾ ಜೋಡಿಯನ್ನು ನೋಡಿ. ಜೊತೆಜೊತೆಯಲ್ಲೇ ಮಹಾರಾಷ್ಟ್ರ ಮತ್ತು ಅರುಣಾಚಲ ಪ್ರದೇಶ ಈ ಎರಡು ರಾಜ್ಯಗಳ ರಾಜಕೀಯ ವಿದ್ಯಮಾನಗಳನ್ನು ನೋಡಿ. ಶಿವಸೇನೆಯು ಮುಂಬೈ ನಗರ ಪಾಲಿಕೆಯ ಚುನಾವಣೆಯ ಸಂದರ್ಭದಲ್ಲಿ ಹಿತಶತ್ರು ಭಾರತೀಯ ಜನತಾ ಪಕ್ಷದ ಜೊತೆ ಮೈತ್ರಿಯನ್ನು ಕಡಿದುಕೊಂಡಿದೆ. ಮುಂದಿನ ಇತರ ಚುನಾವಣೆಗಳಲ್ಲೂ ಹಳೆಯ ಸಖ್ಯಕ್ಕೆ ಮನ್ನಣೆ ಇರುವುದಿಲ್ಲವೆಂಬ ಸೂಚನೆಯನ್ನು ಉದ್ಧವ ಉರುಫ್ ಉದ್ಧಟ ಠಾಕ್ರೆ ನೀಡಿದ್ದಾನೆಂಬುದು ಫಡ್ನವೀಸ್ ಮತ್ತು ಮೋದಿಯವರಿಗೆ ಅರಿವಾಗಿದೆ. ಹಾಗಿದ್ದರೆ ಶಿವಸೇನೆಯನ್ನು ಎದುರಿಸಲು ಯಾವುದಾದರೂ ಬಲವಾದ ಪಕ್ಷದ ಆಸರೆಯ ಅಗತ್ಯ ಭಾಜಪಕ್ಕಿದೆಯಲ್ಲವೆ? ಹಿಂದೆಲ್ಲಾ ಅವಹೇಳನಗಳಿಗೆ ಗುರಿಯಾಗಿದ್ದ ಶರದ್ ಪವಾರ್ ಈಗ ಚಿನ್ನದ ಮಣಿಯಂತೆ ಶೋಭಿಸಲು ಅದೇ ಕಾರಣ. ಪವಾರ್ ಸಹ ಸ್ವತಂತ್ರವಾಗಿ ಗೆದ್ದುಬರುವ ಸಾಮರ್ಥ್ಯ ಪಡೆದಿಲ್ಲ. ಪವಾರ್–ಫಡ್ನವೀಸ್ ಜೋಡಿ ಎತ್ತುಗಳು ನೇಗಿಲಿನ ನೊಗ ಹೊತ್ತು ಮಹಾರಾಷ್ಟ್ರದ ಭೂಮಿಯನ್ನು ಉಳಬಲ್ಲವೆಂಬ ನಿರೀಕ್ಷೆಗೆ ಆಧಾರವಿದೆ.

ಭಾಜಪದ ಬೈಗುಳಗಳ ನೆರೆಗೆ ಸಿಲುಕಿ ಕೊಚ್ಚಿಹೋಗುತ್ತಿದ್ದ ಪವಾರ್ ಈಗ ಭಾಜಪಕ್ಕೆ ಮಿತ್ರನಾಗಬೇಕು. 'ಪದ್ಮವಿಭೂಷಣ' ಎಂಬ ಪದವಿಯನ್ನು ನೀಡಿದರೆ ಓಲೈಕೆಯು ಫಲಪ್ರದವಾಗಬಹುದಲ್ಲವೆ ? ಅಂತಹ ಪದವಿಗೆ ಆತ ಯೋಗ್ಯನೋ ಅಲ್ಲವೋ ಎಂಬ ಪ್ರಶ್ನೆಯು ಗೌಣವಾಗಿ, ರಾಜಕೀಯ ದಾಳಗಳಿಂದ ಅಪೇಕ್ಷಿತ ಗರ ಬೀಳುವಂತೆ ಮಾಡುವ ಕೆಟ್ಟ ಜಾಣತನವನ್ನು ಪ್ರದರ್ಶಿಸಲಾಗಿದೆ. ಮಾನ್ಯ ಪ್ರಧಾನಿಯವರು ಭ್ರಷ್ಟಾಚಾರದ ವಿರುದ್ಧ ಯುದ್ಧ ಘೋಷಿಸಿದ್ದಾರೆ; ಆದ್ದರಿಂದ ಪವಾರ್‌ಗೆ ಪದ್ಮಪ್ರಶಸ್ತಿ ನೀಡುವುದರ ಹಿಂದೆ ಭ್ರಷ್ಟ ಲೆಕ್ಕಾಚಾರವೇನೂ ಇಲ್ಲವೆಂದು ನಾವು ಭಾವಿಸಬೇಕು. ಹೇಗೂ ಪವಾರ್ ಮರಾಠಾ ವೀರ; ಆದ್ದರಿಂದ ಅವರೊಡನೆ ಸಖ್ಯವು ಭಾಜಪಕ್ಕೆ ಲಾಭದಾಯಕ.

ಸಂಗ್ಮಾ ಕತೆಯೂ ಇಂಥದೇ. ಅರುಣಾಚಲ ಪ್ರದೇಶದಲ್ಲಿ ಕಾಂಗ್ರೆಸ್ ಮುಖ್ಯಮಂತ್ರಿಯಾಗಿದ್ದವರು ಆತ್ಮಹತ್ಯೆ ಮಾಡಿಕೊಳ್ಳುವಷ್ಟು ಮುಜುಗರಕ್ಕೆ ತುತ್ತಾಗಿದ್ದರು. ಅಂತಹ ವಿಷಮ ತೀರ್ಮಾನ ಕೈಗೊಂಡಿದ್ದೇಕೆ ಎಂಬುದನ್ನು ನಲವತ್ತು ಪುಟಗಳಲ್ಲಿ ಬರೆದಿಟ್ಟು ಹೋಗಿದ್ದಾರೆಂದು ವರದಿಯಾಗಿದೆ. ಅದರಲ್ಲಿ ಸೋನಿಯಾ ಅವರೂ ಒಳಗೊಂಡಂತೆ ಅನೇಕ ಪ್ರಮುಖ ಕಾಂಗ್ರೆಸ್ ನಾಯಕರ ಜನ್ಮ ಜಾಲಾಡಿದ್ದಾರೆ ಎಂದು ಹೇಳಲಾಗಿದೆ. ಮುಖ್ಯಮಂತ್ರಿಯಾಗಿದ್ದವರ ಈ 'ಮೃತ್ಯುಲೇಖನ' ಮಾಧ್ಯಮಗಳಿಗೆ ಲಭ್ಯವಾಗಿದೆ. ಅರುಣಾಚಲ ಪ್ರದೇಶದ ಕಾಂಗ್ರೆಸ್ ಶಾಸಕರೆಲ್ಲಾ ಭಾಜಪಕ್ಕೆ ಹೋದರು, ಆದರೆ ಅಲ್ಲಿ ಸ್ಥಿರವಾಗಿ ನಿಲ್ಲುವ ಮನಸ್ಸು ಮಾಡಿಲ್ಲ. ಆದ್ದರಿಂದ ಆ ರಾಜ್ಯದಲ್ಲಿ ಕಾಂಗ್ರೆಸ್ ಸರ್ಕಾರ, ಭಾಜಪ ಸರ್ಕಾರ, ರಾಷ್ಟ್ರಪತಿ ಆಳ್ವಿಕೆ, ಎಲ್ಲಾ ಸರದಿಯಂತೆ ಬಂದುಹೋಗಿವೆ. ಸಂಗ್ಮಾಗೆ ಪದ್ಮಪ್ರಶಸ್ತಿ ನೀಡಿ ಅರುಣಾಚಲದಲ್ಲಿ ಭಾಜಪದ ಪದ್ಮವು ಅರಳುವಂತೆ ಮಾಡುವ "ಸ್ವಚ್ಛ" ಪ್ರಯತ್ನ ಜಾರಿಯಲ್ಲಿದೆ. ಇದರಿಂದಾಗಿ ಪದ್ಮ ಪ್ರಶಸ್ತಿಗಳನ್ನು ಪಡೆದ ಅನೇಕ ಇತರರು ಎಷ್ಟು ಕಸಿವಿಸಿ ಅನುಭವಿಸುತ್ತಿದ್ದಾರೋ ಬಲ್ಲವರಾರು ! ನಿರಾತಂಕವಾಗಿ ಎಲ್ಲಾ ಪದ್ಮಪ್ರಶಸ್ತಿ ಭಾಜನರಿಗೂ ಅಭಿನಂದನೆಗಳನ್ನು ತಿಳಿಸಿ ಹರ್ಷಿಸೋಣ.

✳ ✳ ✳

ಮಾಜಿ ಮುಖ್ಯಮಂತ್ರಿ, ದೇಶದ ಮಾಜಿ ವಿದೇಶಾಂಗ ಮಂತ್ರಿ, ಮಹಾರಾಷ್ಟ್ರ ಮಾಜಿ ರಾಜ್ಯಪಾಲ, ಹೀಗೆ ಅನೇಕ ಮಾಜಿಗಳ ಸರಮಾಲೆಯನ್ನು ಧರಿಸಿರುವ ಮಾನ್ಯ ಶ್ರೀ. ಎಸ್. ಎಂ. ಕೃಷ್ಣ ಅವರಿಗೆ ತಮ್ಮ ಘನತೆಯ ಬಗ್ಗೆ, ಕಾರ್ಯದಕ್ಷತೆ ಹೊಂದಿರುವ ನಾಯಕರಾದ ತಮ್ಮನ್ನು ಕಾಂಗ್ರೆಸ್ ಪಕ್ಷವು ಗೌರವದಿಂದ ನಡೆಸಿಕೊಳ್ಳದಿರುವ ಬಗ್ಗೆ, ವ್ಯಗ್ರತೆ ಮೂಡಿದೆ. ಆದ್ದರಿಂದ ಕಡೆಗೀಗ ಮಾಜಿ ಕಾಂಗ್ರೆಸ್ ನಾಯಕರಾಗುವ ತೀರ್ಮಾನವನ್ನು ಪ್ರಕಟಿಸಿದ್ದಾರೆ. ಸಾಮಾನ್ಯವಾಗಿ ಪಕ್ಷಗಳ ನಾಯಕರು ಬೇರೆ ಕಾರ್ಯಕರ್ತರಿಗೆ ಕೆಲಸ ಹೇಳಿ ಮಾರ್ಗದರ್ಶನ ನೀಡುತ್ತಾರೆ; ಆದರೆ ಕಾಂಗ್ರೆಸ್ ಪಕ್ಷದ ನಾಯಕರು ಸ್ವತಂತ್ರವಾಗಿ ಕಾರ್ಯಕ್ಷೇತ್ರಕ್ಕೆ ಇಳಿಯುವಂತಿಲ್ಲವೆಂದು ತೋರುತ್ತದೆ. ಅವರಿಗೆ ಪಕ್ಷದ ಅಧಿನಾಯಕರು ಗೌರವ, ಸ್ಥಾನಮಾನ, ಮುಂತಾದುವನ್ನು ನೀಡಿ ಪಕ್ಷದಲ್ಲಿ ಅವರನ್ನು ತೊಡಗಿಸಿಕೊಳ್ಳಬೇಕೆಂಬ ಪದ್ಧತಿಯನ್ನು ಅನುಸರಿಸಲಾಗುತ್ತದೆ. ನಮ್ಮ ರಾಜ್ಯದಲ್ಲಿ ಬರದ ಪರಿಸ್ಥಿತಿ ಇದೆ, ಕಾವೇರಿ ನೀರಿನ ಹಂಚಿಕೆ ಸಮಸ್ಯೆಯಿಂದಾಗಿ ಮಂಡ್ಯ ಜಿಲ್ಲೆಯಲ್ಲಿ ಜನ ಹೋರಾಟಕ್ಕಿಳಿದಿದ್ದರು, ಭಾರತೀಯ ಜನತಾ ಪಕ್ಷವು ವಿರೋಧ ಪಕ್ಷವಾಗಿ ಕಾಂಗ್ರೆಸ್ ಆಡಳಿತವನ್ನು ಇಕ್ಕಟ್ಟಿಗೆ ಸಿಲುಕಿಸುತ್ತಿದೆ. ಇನ್ನು ಬೇರೆ ಸಮಸ್ಯೆಗಳೂ ಇವೆ. ಈ ಸಂದರ್ಭಗಳಲ್ಲಿ ಸ್ವತಃ ಶ್ರೀ. ಕೃಷ್ಣ ಅವರು ತಮ್ಮ ಪಕ್ಷದ ಪರವಾಗಿ ಕಣಕ್ಕಿಳಿಯಲು ಯಾರಾದರೂ ಅಡ್ಡಿಪಡಿಸುತ್ತಿದ್ದರೆ ? ಅವರು ನಾಯಕತ್ವ ನೀಡುವ ಹಿರಿತನ ಉಳ್ಳವರಾಗಿ ಬೇರೆ ಯಾರೋ ದೆಹಲಿಯ ಮಂದಿ ಅವರಿಗೆ ನಾಯಕತ್ವ ನೀಡಬೇಕೆಂದು ಕಾದು ಕುಳಿತಿರಬೇಕೆ ? ಪಕ್ಷದ ನಾಯಕತ್ವ ಮತ್ತು ಪಕ್ಷದಲ್ಲಿ ಗೌರವ ಎಂದರೆ ಯಾವುದೋ ಪದವಿಯಲ್ಲಿದ್ದು ಸೇವೆ ಸಲ್ಲಿಸಬೇಕೆಂದು ಅರ್ಥವೆ ? ಆದಾಯ ತೆರಿಗೆ ಇಲಾಖೆಯು ತನಿಖೆ ನಡೆಸುವುದಾದರೆ ಶ್ರೀ. ಕೃಷ್ಣ ಅವರ ಅಳಿಯನ ತನಿಖೆ ನಡೆಸಬಹುದು, ಮಾನ್ಯ ಕೃಷ್ಣ ಅವರ ತನಿಖೆಯನ್ನಲ್ಲ. ಆದ್ದರಿಂದ ತರಾತುರಿಯಿಂದ ಶ್ರೀ. ಕೃಷ್ಣ ಅವರು ಭಾರತೀಯ ಜನತಾ ಪಕ್ಷದ ಕಚೇರಿಯ ಕದ ತಟ್ಟುವ ತುರ್ತೇನೂ ಇಲ್ಲ. ದೆಹಲಿಯಿಂದ ಕಾಂಗ್ರೆಸ್ ಪಕ್ಷವನ್ನು ಆಳುತ್ತಿರುವವರಿಗೆ ಜನತೆಯ ತಕ್ಷಣದ ಪ್ರಶ್ನೆಗಳಾಗಲಿ, ಮತ್ತೊಮ್ಮೆ ಪಾರ್ಲಿಮೆಂಟಿನಲ್ಲಿ ಬಹುಮತವಾಗುವಷ್ಟು ಮಂದಿ ಪಕ್ಷದಿಂದ ಚುನಾಯಿತರಾಗಬೇಕೆಂಬ ಕಾಳಜಿಯಾಗಲಿ ಇರುವುದರ ಸೂಚನೆ ಇಲ್ಲ. ಆತ್ಮಹತ್ಯೆ ಮಾಡಿಕೊಂಡ ಅರುಣಾಚಲ ಪ್ರದೇಶದ ಮುಖ್ಯಮಂತ್ರಿ ಬರೆದಿಟ್ಟುಹೋಗಿರುವ ಮೃತ್ಯುಪತ್ರವನ್ನು ಕಣ್ಣಾಡಿಸಿ ನೋಡಿದರೆ ಇದು ಖಾತರಿಯಾಗುತ್ತದೆ. ಅಂತಹ ದೆಹಲಿ ನಾಯಕತ್ವಕ್ಕೆ ಶ್ರೀ. ಕೃಷ್ಣ ಅವರು ಕಿವಿ ಹಿಂಡುವ ಕೆಲಸ ಮಾಡಬೇಕಿತ್ತು. ಹಾಗಿರುವಾಗ ಸ್ವತಃ ತಾವೇ ಅಳಲು ತೋಡಿಕೊಳ್ಳುವ ಹಂತಕ್ಕಿಳಿದಿರುವುದು ಆಶ್ಚರ್ಯಕರವಾಗಿದೆ, ಸ್ವಲ್ಪ ಹಾಸ್ಯಾಸ್ಪದವೂ ಆಗಿದೆ.

✳ ✳ ✳

ರಾಷ್ಟ್ರೀಯ ಭದ್ರತಾ ಮಂಡಲಿಯ ಮುಖ್ಯಸ್ಥರಾಗಿದ್ದ ಎಂ. ಕೆ. ನಾರಾಯಣನ್ 'ದಿ ಹಿಂದು' ಪತ್ರಿಕೆಯಲ್ಲಿ ಒಂದು ಲೇಖನ ಪ್ರಕಟಿಸಿದ್ದರು. "ತಮಿಳು ಸಂಸ್ಕೃತಿ" ಅದರ ಮುಖ್ಯ ವಿಷಯ. ಜಲ್ಲಿಕಟ್ಟು ಸಂಬಂಧ ಚೆನ್ನೈನಲ್ಲಿ ನಡೆದ ಪ್ರತಿಭಟನಾ ಜಾತ್ರೆಯನ್ನು ಕುರಿತು ಬರೆಯುತ್ತಾ ತಮಿಳುನಾಡಿನ ಜನತೆಯು ಕಾವೇರಿ ನೀರಿನ


Statement about ownership and other particulars about newspaper

**FORM IV**

| | | |
|---|---|---|
| 1. Place of publication | : | Bengaluru |
| 2. Periodicity of its publication | : | Monthly |
| 3. Printer's Name | : | Dr. Siddanagouda Patil |
| Nationality | : | Indian |
| Address | : | Navakarnataka Publications (P) Ltd. Embassy Centre, Crescent Road P. B. No. 5159, Bengaluru - 560 001 |
| 4. Publisher's Name | : | Dr. Siddanagouda Patil |
| Nationality | : | Indian |
| Address | : | Navakarnataka Publications (P) Ltd. Embassy Centre, Crescent Road P. B. No. 5159, Bengaluru - 560 001 |
| 5. Editor's Name | : | Dr. Siddanagouda Patil |
| Nationality | : | Indian |
| Address | : | Navakarnataka Publications (P) Ltd. Embassy Centre, Crescent Road P. B. No. 5159, Bengaluru - 560 001 |
| 6. Name and address of individuals who own the newspaper and partners and shareholders holding more than one percent of the total capital | : | Navakarnataka Publications (P) Ltd., Embassy Centre, Crescent Road P. B. No. 5159 Bengaluru - 560 001 (Sole Proprietors) |

**I, Dr. Siddanagouda Patil, hereby declare that the particulars given above are true to the best of my knowledge and belief.**

Sd/-
Dr. Siddanagouda Patil
Publisher

Date : 28-2-2017

ಹಂಚಿಕೆ ವಿಷಯದಲ್ಲಿ ಕೇಂದ್ರ ಸರ್ಕಾರವು ತೋರಿದ ನಿರಾಸಕ್ತಿಯ ವಿರುದ್ಧ ಸೆಣಸುವುದು ಸಹ ಜಲ್ಲಿಕಟ್ಟು ಉದ್ವಿಗ್ನತೆಯ ಒಂದು ಭಾಗವಾಗಿತ್ತೆಂದು ಹೇಳಿದ್ದಾರೆ. ಕಾವೇರಿಯಲ್ಲಿ ತೊಟ್ಟು ನೀರಿಲ್ಲ ದಿದ್ದರೂ ತಮಿಳುನಾಡಿಗೆ ನೀರನ್ನು ಹರಿಸಬೇಕೆಂದು ಅದರರ್ಥ. ಕೇಂದ್ರ ಸರ್ಕಾರಕ್ಕೆ ಪ್ರಮುಖ ಸಲಹೆಗಾರ ರಾಗಿದ್ದವರು ಇಂತಹ ಮೂರ್ಖತನದ ಮಾತನ್ನು ಹೇಳಿದರೆ ಅದಕ್ಕೆ ಹೇಗೆ ಪ್ರತಿಕ್ರಿಯಿಸಬೇಕು? ಜನವರಿಯ ಆದಿಭಾಗದಲ್ಲಿ ತ್ಯಾಗರಾಜರ ಆರಾಧನೆ ಏರ್ಪಾಟಾಗಿತ್ತು. ಅದು ತಿರುವಯ್ಯಾರಿನಲ್ಲಿ ಪ್ರತಿವರ್ಷ ನಡೆಯುತ್ತದೆ. ಪಂಚರತ್ನ ಕೃತಿಗಳನ್ನು ಸಾಮೂಹಿಕವಾಗಿ ಹಾಡಿದ್ದನ್ನು ದೂರದರ್ಶನದಲ್ಲಿ ಪ್ರಸಾರ ಮಾಡಲಾಗಿತ್ತು. ಸಮಾರಂಭವು ಕಾವೇರಿ ತೀರದಲ್ಲಿಯೇ ನಡೆಯುತ್ತದೆ. ಆದ್ದರಿಂದ ಟಿ.ವಿ. ಪ್ರಸಾರದಲ್ಲಿ ಕಾವೇರಿಯೂ ಕಂಡು ಬಂದಳು. ನೀರು ಧಾರಾಳವಾಗಿ ಹರಿಯುತ್ತಿದ್ದುದನ್ನು ಎಲ್ಲರೂ ನೋಡಿರುತ್ತಾರೆ. ನಾರಾಯಣನ್‌ಗೆ ಅದು ಕಾಣಲಿಲ್ಲ. ಕಳ್ಳನಿಗೊಂದು ಪಿಳ್ಳೆ ನೆವ ಎನ್ನುವಂತೆ ಜಲ್ಲಿಕಟ್ಟು ಸಂಬಂಧ ನಡೆದ ಹಿಂಸಾಚಾರಕ್ಕೆ ನಾರಾಯಣನ್ ಕಾವೇರಿಯನ್ನು ಎಳೆದುತಂದಿದ್ದಾರೆ. ಸರ್ವೋಚ್ಚ ನ್ಯಾಯಾಲಯವು ಕಾವೇರಿಯಲ್ಲಿ ನೀರು ಸೃಷ್ಟಿಸಿ ದಿನಕ್ಕೆ ೨೦೦೦ ಕ್ಯೂಸೆಕ್ಸ್‌ಗಳಂತೆ ಕರ್ನಾಟಕವು ತಮಿಳುನಾಡಿಗೆ ಹರಿಸಬೇಕೆಂದು ಹೇಳುವುದಕ್ಕೂ ನಾರಾಯಣನ್ ಹೇಳಿರುವುದಕ್ಕೂ ತಾಳೆ ಇದೆ. ಎರಡರಲ್ಲೂ ಪರಿಣತಿಯ ಅಭಾವ ಮತ್ತು ವಾಸ್ತವದ ಅಜ್ಞಾನ ತುಂಬಿದೆ.

* * *

ಕರ್ನಾಟಕದ ರಾಜ್ಯಪಾಲರು ಗುಜರಾತ್‌ನವರು. ರಾಜಭವನದಲ್ಲಿ "ಗುಜರಾತ್ ದಿನ"ವನ್ನು ಸಂಭ್ರಮದಿಂದ ಆಚರಿಸುವ ಮಹಾಮಹಿಮ ಇವರು. ನಮ್ಮ ರಾಜ್ಯದ ಸರ್ಕಾರ ಹಾಗೂ ಧೀಮಂತರು ಅದನ್ನು ಖಂಡಿಸುವ ಗೋಜಿಗೆ ಹೋಗುವುದಿಲ್ಲ. ಇದೇ ರಾಜ್ಯಪಾಲರು ಶಾಸನಸಭೆಯ ಜಂಟಿ ಅಧಿವೇಶನವನ್ನು ಉದ್ಘಾಟಿಸಿ ಹಿಂದಿಯಲ್ಲಿ ಭಾಷಣ ಜಡಿದರು. ನಮ್ಮ ಶಾಸಕರು ಮಹಾ ಮೂಕಪ್ರಾಣಿಗಳು: ಸೊಲ್ಲೆತ್ತದೆ ಹಿಂದಿಯ ಭೀಕರ ಭಾಷಣವನ್ನು ಶಾಂತವಾಗಿ ಆಲಿಸಿದರು. ಸರ್ಕಾರವೇ ರಾಜ್ಯಪಾಲರಿಗೆ ಭಾಷಣವನ್ನು ಹಿಂದಿಯಲ್ಲಿ ಬರೆದುಕೊಟ್ಟಿತೋ ಏನೋ. ಬೇಕಾದರೆ ಗುಜರಾತಿಯಲ್ಲಿ ಬರೆದುಕೊಂಡು ಕನ್ನಡದ ಭಾಷಣವನ್ನು ಓದಲು ಹೇಳಬೇಕಾಗಿತ್ತು. ಹಿಂದಿಯಲ್ಲಿ ಒಂದು ಗಂಟೆ ಮಾತನಾಡಿದರೆ ಹತ್ತು ಶಾಸಕರಾದರೂ ಮೇಜು ಕುಟ್ಟಿ "ಮಹಾಸ್ವಾಮಿ, ಸಾಕುಮಾಡಿ" ಎಂದು ಹೇಳಬಾರದಿತ್ತೆ? ಇಂತಹ ಶಾಸಕರು ನಮ್ಮ ಕನ್ನಡ ಮತ್ತು ಕನ್ನಡನಾಡನ್ನು ರಕ್ಷಿಸುತ್ತಾರೆಂಬ ಭ್ರಾಂತಿಯನ್ನು ಇಟ್ಟುಕೊಳ್ಳಬೇಕೆ ? ಹಿಂದಿಯನ್ನು ಹೇರುವ ಪ್ರಣಾಲಿಕೆಯನ್ನು ಇಟ್ಟುಕೊಂಡಿರುವಂತಹ ರಾಜ್ಯಪಾಲರು ನಮಗೆ ಬೇಕೆ ? ಜಿಲ್ಲೆಗೊಂದು ಕನ್ನಡ ಸಾಹಿತ್ಯ ಪರಿಷತ್ತಿದೆ, ವಾರ್ಷಿಕ ಸಮ್ಮೇಳನ ನಡೆಯುತ್ತದೆ, ಕೋಟಿಗಟ್ಟಲೆ ಹಣ ಖರ್ಚು ಮಾಡುತ್ತೇವೆ. ಆದರೆ ಅತ್ಯಂತ ಪ್ರಮುಖ ಶಾಸಕಾಂಗದ ಸಭೆಯಲ್ಲಿ ಹಿಂದಿ ಭಾಷಣದ ತುತ್ತೂರಿ ಊದುತ್ತಾರೆ. ಶಾಸ್ತ್ರೀಯ ಭಾಷೆಗೆ ಇದೇ ಶಾಸ್ತಿ ಏನು ?

* * *

ಈ ಬಾರಿಯ ಮಾಧ್ವ ನವಮಿಯಂದು ಉಡುಪಿಯ ಅಷ್ಟಮಠದ ಸ್ವಾಮಿಗಳೆಲ್ಲಾ ಜೊತೆಯಾಗಿ ಕೂತು ಮಾಧ್ವ ಸಿದ್ಧಾಂತವನ್ನು 'ಅತ್ಯಂತ ಸಮಗ್ರವಾಗಿ ತಿಳಿದಿರುವ' ಮಾನ್ಯ ಪ್ರಧಾನಿಯವರ ಉಪನ್ಯಾಸವನ್ನು ಕೃಷ್ಣ ದೇವಸ್ಥಾನದಲ್ಲಿ ಕೇಳಿ ಪುನೀತರಾದರು. "ಮಧ್ವರು ಮಹಾ ತತ್ತ್ವದರ್ಶಿ" ಎಂದು ಪ್ರಧಾನಿ ಯವರು ಉಪದೇಶಿಸಿದರಂತೆ. ಅದು "ವೀಡಿಯೋ ಕಾನ್‌ಫರೆನ್ಸ್" ಉಪನ್ಯಾಸವಾಗಿತ್ತು. ನ್ಯಾಯಸುಧೆಯನ್ನು ಅಧ್ಯಯನ ಮಾಡುವ ಈ ಎಂಟು ಸ್ವಾಮಿಗಳಿಗೆ ಮಧ್ವಾಚಾರ್ಯರ ದಾರ್ಶನಿಕ ಕಾಣ್ಕೆಗಳನ್ನು ಪ್ರಧಾನಿ ಮೋದಿಯವರು ವಿವರಿಸಿ ಹೇಳಬೇಕಾಗಿ ಬಂದಿದ್ದು ಒಂದು ಮೋಜಿನ ಸಂಗತಿ. ಮುಂದಿನ ವರ್ಷ ನೇರ ಉಡುಪಿಗೇ ಬಂದು ಆಶೀರ್ವಾದ ಪಡೆಯುವುದಾಗಿ ಪ್ರಧಾನಿಯವರು ಹೇಳಿದರೆಂದು ವರದಿಯಾಗಿದೆ. ಮಹಾನ್ ಆದರ್ಶಗಳ ಮೂರ್ತಿಗಳೆನ್ನಲಾದ ಅಷ್ಟ ಮಠಾಧೀಶರಿಗೆ ಮಧ್ವಾಚಾರ್ಯರಿಗಿಂತಲೂ ಮೋದಿ ಆಚಾರ್ಯರು ಶ್ರೇಷ್ಠರಾಗಿಬಿಟ್ಟರಲ್ಲ. ಇದು ಸೈಬರ್ ಯುಗದ ಮಹಾತ್ಮೆ.

* * *

ಕನ್ನಡ ಅಭಿವೃದ್ಧಿ ಪ್ರಾಧಿಕಾರವು ಡಾ॥ ಸರೋಜಿನಿ ಮಹಿಷಿ ವರದಿಗೆ ಅಗತ್ಯವಾದ ತಿದ್ದುಪಡಿಗಳನ್ನು ಮಾಡಿ ಎರಡು ಕಿರುಹೊತ್ತಿಗೆಗಳನ್ನು ಹೊರತಂದಿದೆ. ರಾಜ್ಯ ಸರ್ಕಾರವು ನೇರವಾಗಿ ಅನುಷ್ಠಾನಕ್ಕೆ ತರಬಹುದಾದ ಮತ್ತು ತರಬೇಕಾದ ಶಿಫಾರಸುಗಳು ಮತ್ತು ಕೇಂದ್ರ ಸರ್ಕಾರಕ್ಕೆ ಸಲಹೆ ನೀಡಿ ಅದರಂತೆ ಉದ್ಯೋಗದ ಅವಕಾಶಗಳನ್ನು ನಮ್ಮ ರಾಜ್ಯದವರಿಗೆ ಹೆಚ್ಚಿಸುವ ವಿಧಾನ, ಇವು ಕಿರುಹೊತ್ತಿಗೆಗಳಲ್ಲಿ ಅಡಕಗೊಂಡಿರುವ ವಿಚಾರಗಳು. ಬೇರೆ ರಾಜ್ಯಗಳು ಸೂಕ್ತ ಶಾಸನಗಳ ಮೂಲಕ ಸರ್ಕಾರಿ ಮತ್ತು ಖಾಸಗಿವಲಯಗಳಲ್ಲಿ ತಮ್ಮ ರಾಜ್ಯದ ಯುವಕ–ಯುವತಿಯರಿಗೆ ಉದ್ಯೋಗಾವಕಾಶಗಳನ್ನು ಕಲ್ಪಿಸಿ ಕೊಡುವುದರಲ್ಲಿ ಸಾಕಷ್ಟು ಪ್ರಗತಿ ಸಾಧಿಸಿವೆ. ನಮ್ಮ ರಾಜ್ಯದಲ್ಲಿ ನಮ್ಮ ಭಾಷೆಗೆ ಉಂಟಾಗಿರುವ ದುಃಸ್ಥಿತಿಯು ನಮ್ಮ ಉದ್ಯೋಗಾವಕಾಶಗಳಿಗೂ ಇದೆ. ನಮ್ಮ ರಾಜ್ಯದಿಂದ ಭೂಮಿ, ವಿದ್ಯುತ್ತು, ತೆರಿಗೆ ವಿನಾಯಿತಿ, ಮುಂತಾದ ಸೌಲಭ್ಯಗಳನ್ನು ಪಡೆದು ಕೊಂಡು ನಮ್ಮ ರಾಜ್ಯದವರಿಗೆ ಉದ್ಯೋಗ ಕೊಡುವುದರಲ್ಲಿ ವಂಚನೆ ಮಾಡುತ್ತಿರುವ ಉದ್ಯಮಗಳು ನಮ್ಮಲ್ಲಿವೆ. ಮಾರುಕಟ್ಟೆ ಬೆಲೆಗಿಂತ ಕಡಿಮೆ ಬೆಲೆಗೆ ಭೂಮಿಯನ್ನು ಪಡೆದ ಉದ್ಯಮಗಳು ಭೂಮಿಯನ್ನು ಕಳೆದುಕೊಂಡವರಿಗೆ ಸಹ ಉದ್ಯೋಗಗಳನ್ನು ನಿರಾಕರಿಸುವ ಸನ್ನಿವೇಶವು ತೀರಾ ನಾಚಿಕೆಗೇಡಿನ ಮೋಸ. ಇದು ಸರ್ಕಾರಿ ಮತ್ತು ಖಾಸಗಿವಲಯ ಗಳೆರಡಕ್ಕೂ ಅನ್ವಯವಾಗುತ್ತದೆ. ರಾಜ್ಯ ಸರ್ಕಾರವು ಮನಸ್ಸು ಮಾಡಿದರೆ ಎಷ್ಟು ಉದ್ಯೋಗ ಸೌಲಭ್ಯಗಳನ್ನು ಆಯಾ ರಾಜ್ಯಗಳವರಿಗೆ ದೊರಕಿಸಿಕೊಡಬಹುದು ಎಂಬುದಕ್ಕೆ ಪುರಾವೆಯಾಗಿ ಅನೇಕ ರಾಜ್ಯ ಸರ್ಕಾರಗಳ ಆಜ್ಞೆಗಳನ್ನು ಈ ಕಿರುಹೊತ್ತಿಗೆಗಳಲ್ಲಿ ದಾಖಲು ಮಾಡಲಾಗಿದೆ. ಎರಡೂ ಕಿರುಹೊತ್ತಿಗೆಗಳನ್ನು ನಮ್ಮ ಸರ್ಕಾರವು ಗಂಭೀರವಾಗಿ ಪರಿಗಣಿಸಿ ತನ್ನ ಪರಿಧಿಯಲ್ಲಿರುವ ಸಂದರ್ಭಗಳಲ್ಲಿ ಕೂಡಲೆ ಹೊಸ ಆಜ್ಞೆಗಳನ್ನು ಹೊರಡಿಸಬೇಕು ಮತ್ತು ಕೇಂದ್ರದ ಪರಿಧಿಗೆ ಸಂಬಂಧಿಸಿದ ವಿಷಯಗಳಲ್ಲಿ ಕೇಂದ್ರದಿಂದ ಸೂಕ್ತ ಆಜ್ಞೆಗಳಿಗಾಗಿ ಒತ್ತಾಯಿಸಬೇಕು. ಕನ್ನಡ ಅಭಿವೃದ್ಧಿ ಪ್ರಾಧಿಕಾರವು ಕೇವಲ ಅಲಂಕಾರಕ್ಕಾಗಿ ಇರುವುದಲ್ಲ, ಅದರ ಸಲಹೆಗಳನ್ನು ಕಾರ್ಯಗತ ಗೊಳಿಸುವ ಜವಾಬ್ದಾರಿ ತನ್ನದೆಂಬ ತಿಳಿವಳಿಕೆ ಸರ್ಕಾರಕ್ಕಿರಬೇಕು. ನಮ್ಮ ರಾಜ್ಯದವರಿಗೆ ತಮ್ಮದೇ ರಾಜ್ಯದಲ್ಲಿ ಉದ್ಯೋಗಗಳನ್ನು ನಿರಾಕರಿಸಿ ಇತರ ರಾಜ್ಯಗಳವರಿಗೆ ಮಣೆ ಹಾಕುವುದು ಸರಿಯಲ್ಲ. ವಿಶೇಷ ಪರಿಣತಿ ಅಗತ್ಯವಿರುವಂತಹ ಉದ್ಯೋಗಗಳನ್ನು ಹೊರತುಪಡಿಸಿ ಸಾಮಾನ್ಯಮಟ್ಟದ ಉದ್ಯೋಗಗಳನ್ನು ತನ್ನದೇ ರಾಜ್ಯದವರಿಗೆ ಕೊಡುವುದಕ್ಕೆ ಕಾನೂನು ಅಡ್ಡಬರುವುದಿಲ್ಲ. ರೈಲ್ವೇ, ಬ್ಯಾಂಕು, ಮುಂತಾದ ಕ್ಷೇತ್ರಗಳಲ್ಲಿ ಇದನ್ನು ಆಗುಮಾಡಬೇಕು. ಈ ನಿಟ್ಟಿನಲ್ಲಿ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಸಲಹೆ–ಸೂಚನೆಗಳು ಸ್ವಾಗತಾರ್ಹವಾಗಿವೆ.

* * *

ಇಸ್ಪೀಟಾಟದಲ್ಲಿ ಟ್ರಂಪ್ ಕಾರ್ಡ್‌ಗೆ ಇರುವ ಮಹತ್ವದ ಸ್ಥಾನವನ್ನು ಅಮೆರಿಕಾದ ಅಧ್ಯಕ್ಷ ರೊನಾಲ್ಡ್ ಟ್ರಂಪ್ ಪಡೆಯುವುದರಲ್ಲಿ ಸೋತಿದ್ದಾರೆ. ಆದರೂ ತಮ್ಮ ರಕ್ಷಣಾ ಕಾರ್ಯದರ್ಶಿ (ಮಂತ್ರಿ)ಯನ್ನು ಆಗಲೆ ಭಾರತಕ್ಕೆ ಕಳಿಸಿದ್ದಾರೆ. ವ್ಯಾಪಾರ ವ್ಯವಹಾರಗಳಲ್ಲಿ ನಿಸ್ಸೀಮನಾದ್ದರಿಂದ ವ್ಯಾಪಾರ ಕುದುರಿಸುವುದಕ್ಕೆ ಅವರ ಮೊದಲ ಆದ್ಯತೆ. ಕೇಂದ್ರ ಸರ್ಕಾರದ ರಕ್ಷಣಾ ಸಚಿವರು ಟ್ರಂಪ್ ಪ್ರತಿನಿಧಿಯ ಗಾಳಕ್ಕೆ ಬೀಳಲು ಕಾತುರರಾಗಬಾರದೆಂಬುದು ದೇಶದ ನಿರೀಕ್ಷೆ. ಪರಿಕ್ಕರ್ ನಿರೀಕ್ಷೆ ಬೇರೆಯೇ ಇರಬಹುದು, ಹಾಗೇನಾದರೂ ಇದ್ದರೆ ಅದು ನಮ್ಮ ದೇಶಕ್ಕೆ ಮಾರಕವಾಗಿರುತ್ತದೆ. ಟ್ರಂಪ್ ಮಹಾಶಯ ದೊಡ್ಡ ಗೂಳಿಯಂತೆ ಪ್ರಪಂಚದ ಎಲ್ಲ ದೇಶಗಳಿಗೂ ನುಗ್ಗಿ ದಾಂಧಲೆ ನಡೆಸಲು ಸಿದ್ಧವಾಗಿದ್ದಾನೆ. ಹೇಗೋ ಚುನಾವಣೆಯಲ್ಲಿ ವಿಜಯಿಯಾದ ಟ್ರಂಪ್ ತನ್ನ ದೇಶದ ಜನತೆಯ ಮನಸ್ಸನ್ನು ಗೆದ್ದಿಲ್ಲ. ಸ್ವಚ್ಛಂದತೆಯು ಆತನ ಪ್ರಮುಖ ಲಕ್ಷಣ. ಕಾನೂನು, ನ್ಯಾಯಾಲಯ, ಅಭಿವ್ಯಕ್ತಿ ಸ್ವಾತಂತ್ರ್ಯ, ಇವು ಯಾವುವೂ ಟ್ರಂಪ್‌ಗೆ ಆದರಣೀಯವಲ್ಲ. ದಿನಬೆಳಗಾದರೆ ಆತನ ವಿರುದ್ಧ ಪ್ರತಿಭಟನೆಗಳು ಅಮೆರಿಕಾದ ಎಲ್ಲೆಡೆ ಜರುಗುತ್ತಿವೆ.

ನಮ್ಮ ದೇಶವು ಅಮೆರಿಕಾದೊಡನೆ ಬಾಂಧವ್ಯ ಬೆಳೆಸುವಾಗ ಇದನ್ನು ಚೆನ್ನಾಗಿ ಮನನ ಮಾಡಿಕೊಳ್ಳಬೇಕು. ಹಗುರವಾದ ಮಾತು ಮತ್ತು ಹಗುರವಾದ ಆಜ್ಞೆಗಳು ಟ್ರಂಪ್‌ಗೆ ಸಹಜ. ಚುನಾವಣೆ ಸಂದರ್ಭದಲ್ಲಿ ಒಬ್ಬ ಮಹಿಳೆ ಆತನ ವಿರುದ್ಧವಾಗಿ ತನ್ನ ಅಭಿಪ್ರಾಯವನ್ನು ತಿಳಿಸಿದಾಗ ಒಬ್ಬ ಧೂರ್ತನಂತೆ ಈತ ಪ್ರತಿಕ್ರಿಯಿಸಿದ್ದ: "ಅವಳು ನನ್ನ ಪ್ರಥಮ ಆಯ್ಕೆಯಲ್ಲ" ಎಂದು. ಇಂತಹ ಉದ್ಧಟತನದ

ಮಾತುಗಳನ್ನು ಎಲ್ಲ ದೇಶಗಳ ಬಗೆಗೂ ಟ್ರಂಪ್ ಹೇಳಬಹುದು. ಅಂತಹ ಸ್ವೈರಿ ಆತ. ನಮ್ಮ ದೇಶದಲ್ಲಿ ಹತ್ತನೆಯ ಶತಮಾನದಲ್ಲಿ ಶ್ರೀಹರ್ಷನೆಂಬ ಒಬ್ಬ ರಾಜನಿದ್ದ (ಕಾನ್ಯಕುಬ್ಜದ ಶ್ರೀಹರ್ಷನಲ್ಲ, ಇವನು ಕಾಶ್ಮೀರದ ರಾಜನಾಗಿದ್ದವನು). ಅವನು ಸ್ವೈರಿ, ಕಾಮುಕ ಮತ್ತು ಜನಾನುರಾಗ ಇಲ್ಲದವನು. ಕಲ್ಹಣನ "ರಾಜತರಂಗಿಣಿ"ಯಲ್ಲಿ ಅವನನ್ನು ಕುರಿತ ವಿವರಗಳು ವಿಪುಲವಾಗಿ ದಾಖಲಾಗಿವೆ. ಅವನು ಸತ್ತು ಬದುಕಿದ ರಾಜ; ಅಷ್ಟೊಂದು ಮಂದಿ ವೈರಿಗಳು ಅವನ ಸುತ್ತಲೂ ಇದ್ದರು. ಒಮ್ಮೆ ಕಾರಾಗೃಹದಲ್ಲೂ ಇರಿಸಲ್ಪಟ್ಟಿದ್ದ. ಅವನ ಸಭೆಯಲ್ಲಿ ಕುಬೇರ ಮತ್ತು ಯಮ ಸದಾ ಇರುತ್ತಿದ್ದರಂತೆ. ರೊನಾಲ್ಡ್ ಟ್ರಂಪ್ ಆ ಹರ್ಷನ ಪ್ರತಿರೂಪವೇ. ಹರ್ಷನ ಆಸ್ಥಾನದಲ್ಲಿ ಲೋಷ್ಟಧರನೆಂಬ ವಿಟನಿದ್ದ. ಅವನೊಮ್ಮೆ ಹೇಳಿದನಂತೆ, "ಕಲಶೇಶ್ವರ ಮಂದಿರದಲ್ಲಿ ಇರುವ ಚಿನ್ನ ಸಂಪತ್ತನ್ನೆಲ್ಲಾ ತಂದು ಕೊಟ್ಟಲ್ಲಿ ವಿತಸ್ತಾ ನದಿಗೊಂದು ಸೇತುವನ್ನು ನಾನು ಕಟ್ಟಿಸಿಬಿಡುತ್ತೇನೆ," ಎಂದು. ಟ್ರಂಪ್ ಮಹಾಶಯನ ಶೂರತ್ವ ಮತ್ತು ಉಡಾಫೆ ಅಂತಹುದು. ಮೆಕ್ಸಿಕೋದಿಂದ ಅಲ್ಲಿಯ ಜನ ಅಮೆರಿಕಾಕ್ಕೆ ಬಂದು ತುಂಬಿಕೊಳ್ಳುತ್ತಾರಾದ್ದರಿಂದ ಒಂದು ದೊಡ್ಡ ಗೋಡೆ ಕಟ್ಟಿ ಅವರನ್ನು ನಿರ್ಬಂಧಿಸುವ ಯೋಜನೆಯನ್ನೀತ ಕೈಗೊಳ್ಳುತ್ತಾನಂತೆ. ಗೋಡೆ ಕಟ್ಟುವ ಖರ್ಚನ್ನು ಮೆಕ್ಸಿಕೋ ಭರಿಸಬೇಕಂತೆ! ಭರಿಸದಿದ್ದರೆ ಯುದ್ಧ ಹೂಡುವ ಮಾತನ್ನಿನ್ನೂ ಆಡಿಲ್ಲ; ಆಡಿದರೆ ಆಶ್ಚರ್ಯ ಏನೂ ಇಲ್ಲ. ಆದರೆ ಕಾನೂನುಬಾಹಿರವಾಗಿ ಅಮೆರಿಕಾ ಪ್ರವೇಶಿಸಿರುವ ಮೆಕ್ಸಿಕೋದ ಜನರನ್ನು ಹೊರದಬ್ಬಿದರೆ ತನ್ನ ದೇಶದ ಕೃಷಿ ನೆಲ ಕಚ್ಚುತ್ತದೆಂಬುದು ಟ್ರಂಪ್‌ಗೆ ತಿಳಿದಿದೆ. ಕೃಷಿಕ್ಷೇತ್ರದ ದುಡಿಮೆಗಾರರಲ್ಲೇ ಅವರೇ ಬಹುಸಂಖ್ಯಾತರು. ಅಮೆರಿಕಾದಲ್ಲೇ ಇದ್ದು ಹೊರಗೆ ಪ್ರವಾಸ ಹೋಗಿರುವವರನ್ನು ಮತ್ತೆ ಅಮೆರಿಕಾಕ್ಕೆ ಬರದಂತೆ ತಡೆಯಬೇಕೆಂಬ ಆಜ್ಞೆಯೊಂದನ್ನು ಟ್ರಂಪ್ ಹೊರಡಿಸಿದ್ದಾರೆ. ಅದು ಏಳು ಅರಬ್ ರಾಷ್ಟ್ರಗಳಿಗೆ ಅನ್ವಯವಾಗಬೇಕೆಂಬುದು ಆಜ್ಞೆ. ಅಮೆರಿಕಾದ ನ್ಯಾಯಾಲಯ ಆ ಆಜ್ಞೆಗೆ ತಡೆಯೊಡ್ಡಿದೆ ಯಾದ್ದರಿಂದ ನ್ಯಾಯಾಲಯದ ವಿರುದ್ಧ ಟ್ರಂಪ್ ಅಬ್ಬರಿಸಿದ್ದಾರೆ. ವೀಸಾ ನೀಡುವ ಪ್ರಕ್ರಿಯೆಗೆ ತಿದ್ದುಪಡಿ ತಂದು ಅಮೆರಿಕಾದ ಪ್ರಜೆಗಳಿಗೆ ಉದ್ಯೋಗಾವಕಾಶ ಹೆಚ್ಚಿಸುವುದಾಗಿ ಹೇಳುವ ಟ್ರಂಪ್‌ಗೆ ತನ್ನ ದೇಶದ ಶಿಕ್ಷಣ ವ್ಯವಸ್ಥೆಯ ಪರಿಚಯವೇ ಸಾಲದು. ಇನ್ನೂ ಎಂತೆಂತಹ ಆಜ್ಞೆಗಳನ್ನು ಹೊರಡಿಸಿ ಭಾರತವೂ ಸೇರಿದಂತೆ ಅನೇಕ ದೇಶಗಳಿಗೆ ಈತ ಉಪದ್ರವಿ ಯಾಗುತ್ತಾನೋ, ಹೇಳಬರುವುದಿಲ್ಲ. ಕಲ್ಹಣನು ಹರ್ಷನ ಬಗ್ಗೆ ಹೇಳುವ ಮಾತೊಂದಿದೆ: "ದೇವತೆಗಳು, ಋಷಿಗಳು ಪೂಜಿಸುತ್ತಿದ್ದ ಕಶ್ಮೀರ ಮಂಡಲದ ವಿನಾಶಕ್ಕಾಗಿ ಹರ್ಷನ ರೂಪದಿಂದ ರಾಕ್ಷಸನೇ ಅವತರಿಸಿದನೆನ್ನಬಹುದು." ಹರ್ಷನು ಕಾಶ್ಮೀರಕ್ಕೆ ಕುತ್ತು ತಂದ. ಟ್ರಂಪ್ ಅಮೆರಿಕಾಕ್ಕೆ ಮತ್ತು ಬೇರೆ ಹಲವು ದೇಶಗಳಿಗೆ ಕುತ್ತು ತರುವ ವ್ಯಕ್ತಿ. ಭಾರತವು ಎಚ್ಚರದಿಂದಿರಬೇಕಾದ್ದು ಅತಿಮುಖ್ಯ; ಇಲ್ಲವಾದರೆ ಟ್ರಂಪ್ ತೆಕ್ಕೆಯಲ್ಲಿ ಸಿಲುಕುವ ನಮ್ಮ ದೇಶಕ್ಕೆ ಶತ್ರುಗಳೂ ಹೆಚ್ಚುವ ಸಾಧ್ಯತೆಯೇ ಹೆಚ್ಚು. ಹರ್ಷನು ಕೊನೆಗೆ "ಕಾಲಚಕ್ರಕ್ಕೆ ವಶೀಭೂತನಾಗಿ ಓಡಿಹೋಗಿ ಪ್ರಾಣ ಕಳೆದು ಕೊಳ್ಳುವ ಪ್ರಸಂಗ ಬಂದಿತು" ಎನ್ನುತ್ತಾನೆ ಕಲ್ಹಣ. ಟ್ರಂಪ್‌ಗೆ ಅಂತಹ ಪ್ರಸಂಗ ಇರುವುದಿಲ್ಲ; ಬೇರೆ ದೇಶಗಳಿಗೆ ಅಂತಹ ಪ್ರಸಂಗ ಉಂಟಾಗುವಂತಹ ವ್ಯೂಹ ರಚಿಸಿಯಾನು!

* * *

ಮುಂದೊಂದು ದಿನ ತಾನು ವಿಶ್ವ ಚೆಸ್ ಆಟಗಾರ್ತಿಯಾಗಿ ಪ್ರಥಮ ಸ್ಥಾನ ಪಡೆಯುವ ಭರವಸೆ ಹೊಂದಿರುವುದಾಗಿ ಹರಿಕಾ ಹೇಳಿದ್ದಾರೆ. ವಿಶ್ವನಾಥನ್ ಆನಂದ್ ಪುರುಷರ ವಿಭಾಗದಲ್ಲಿ ಆ ಸಾಧನೆಯನ್ನು ಮಾಡಿದ್ದುದು ಹೆಮ್ಮೆಯ ವಿಷಯ. ಹರಿಕಾ ಗ್ರ್ಯಾಂಡ್‌ಮಾಸ್ಟರ್ ಆಗಿ ಈಗಾಗಲೆ ಅನೇಕ ಪ್ರಶಸ್ತಿಗಳನ್ನು ಗೆದ್ದಿದ್ದಾರೆ ಮತ್ತು ಸದ್ಯದಲ್ಲಿ ಇರಾನ್‌ನಲ್ಲಿ ವಿಶ್ವ ಚಾಂಪಿಯನ್ ಪಂದ್ಯಗಳಲ್ಲಿ ಭಾಗವಹಿಸಿದ್ದಾರೆ. ಎರಡು ಬಾರಿ ಸೆಮಿ ಫೈನಲ್ ತಲುಪಿದ್ದ ಈಕೆ ಈ ಬಾರಿ ಇನ್ನೂ ಮೇಲೇರುವ ಸಾಧ್ಯತೆ ಇದೆ. ಕ್ರಿಕೆಟ್, ಫುಟ್‌ಬಾಲ್, ಟೆನಿಸ್, ಮುಂತಾದ ಆಟಗಳಲ್ಲಿ ಪುರುಷರ ಮತ್ತು ಮಹಿಳೆಯರ ವಿಭಾಗಗಳು ಏಕೆ ಪ್ರತ್ಯೇಕವಾಗಿವೆ. ನಾವೂ ಐದು ಸೆಟ್ ಆಡಲು ಸಿದ್ಧ ಎಂದು ಹಲವು ಮಹಿಳಾ ಟೆನಿಸ್ ಆಟಗಾರ್ತಿಯರು ಸವಾಲೆಸೆದಿದ್ದಾರೆ. ಈ ಆಟಗಳಲ್ಲಿರುವಂತೆ ಚೆಸ್ ಆಟದಲ್ಲಿ ಪುರುಷ–ಮಹಿಳಾ ವಿಭಾಗಗಳು ಪ್ರತ್ಯೇಕ ವಾಗಿರಬೇಕು? ಹಾರ್ವರ್ಡ್ ವಿಶ್ವವಿದ್ಯಾಲಯದ ಪ್ರೆಸಿಡೆಂಟ್ ಆಗಿದ್ದ ಧೂರ್ತ ಅರ್ಥಶಾಸ್ತ್ರಜ್ಞ ಲಾರೆನ್ಸ್ ಸಮರ್ಸ್ ಮಹಿಳೆಯರ ಮಿದುಳು ಪುರುಷರ ಮಿದುಳಿಗಿಂತಲೂ ಭಿನ್ನವಾದ್ದರಿಂದ ಮಹಿಳೆಯರಿಗೆ ಗಣಿತಶಾಸ್ತ್ರದಂತಹ ಶಿಸ್ತುಗಳಲ್ಲಿ ಅಗ್ರಮಾನ್ಯತೆ ಸಾಧ್ಯವಾಗದೆಂದು ಒಮ್ಮೆ ಹೇಳಿದ್ದ. ಇದು ಶರೀರ ಶಾಸ್ತ್ರದ ವಾಸ್ತವಿಕ ತಿಳಿವಳಿಕೆಗೆ ತೀರಾ ಹೊರತಾದದ್ದು ಎಂಬುದಕ್ಕೆ ಇತಿಹಾಸದಲ್ಲಿ ನೂರಾರು ದೃಷ್ಟಾಂತಗಳಿವೆ. ಸಮರ್ಸ್ ಹೇಳಿಕೆ ನೀಡಿದ ಮಾರನೆಯ ದಿನವೇ ಹಾರ್ವರ್ಡ್‌ನ ಮಹಿಳಾ ಪ್ರಾಧ್ಯಾಪಕರು ಮತ್ತು ವಿದ್ಯಾರ್ಥಿನಿಯರು ರೊಚ್ಚಿಗೆದ್ದು ಪ್ರತಿಭಟಿಸಿ ಸಮರ್ಸ್ ಅಧ್ಯಕ್ಷ ಪದವಿಯಿಂದ ನಿರ್ಗಮಿಸುವಂತೆ ಮಾಡಿದ್ದರು. ಈ ವರ್ಷದ ಮಹಿಳಾ ದಿನದಂದು ನಾವೊಂದು ಸಂಕಲ್ಪ ಮಾಡಬೇಕು: ಭಾರತದಲ್ಲಿ ಇನ್ನುಮುಂದೆ ಚೆಸ್ ಆಟಗಾರರಲ್ಲಿ ಪುರುಷ ಮತ್ತು ಮಹಿಳೆ ಎಂಬ ಭಿನ್ನ ಪ್ರಕಾರಗಳು ಬೇಡ, ಎಂದು. ಹರಿಕಾ ಬೇಕಾದರೆ ವಿಶ್ವನಾಥನ್ ಆನಂದ್‌ನನ್ನು ಎದುರಿಸಿ ಚೆಸ್ ಪಂದ್ಯದಲ್ಲಿ ಗೆದ್ದಾಳು ಸಹ.






ಕನ್ನಡ ಸಂಘ, ಕಾಂತಾವರ, ಇವರು ದಿನಾಂಕ ೧೯–೦೨–೨೦೧೭ರಂದು ಆಯೋಜಿಸಿದ್ದ 'ಮುದ್ದಣ ಸಾಹಿತ್ಯೋತ್ಸವ – ೨೦೧೭' ಸಂದರ್ಭದಲ್ಲಿ ಲೋಕಾರ್ಪಣೆಗೊಂಡ 'ನಾಡಿಗೆ ನಮಸ್ಕಾರ ಮಾಲಿಕೆ'ಯ ೧೪ ಪುಸ್ತಕಗಳಲ್ಲಿ ಶ್ರೀ ಸಿ. ಆರ್. ಕೃಷ್ಣರಾವ್ ರಚಿಸಿರುವ 'ನವಕರ್ನಾಟಕದ ಆರ್. ಎಸ್. ರಾಜಾರಾಂ' ಪುಸ್ತಕವೂ ಲೋಕಾರ್ಪಣೆಗೊಂಡಿತು.

ವೇದಿಕೆಯಲ್ಲಿ ಶ್ರೀ ಸತೀಶ್ ಕಾಮತ್, ಪ್ರೊ॥ ಟಿ. ಯಲ್ಲಪ್ಪ, ಶ್ರೀ ಹರಿಕೃಷ್ಣ ಪುನರೂರು, ಡಾ॥ ಎಂ. ಜಗನ್ನಾಥ ಶೆಣೈ, ಶ್ರೀ ಕಿಶೋರ ಆಳ್ವ, ಶ್ರೀ ಕೆ. ಎಂ. ಉಡುಪ, ಶ್ರೀ ಎಂ. ಜೆ. ನಾಗರಾಜ, ಶ್ರೀ ಜನಾರ್ದನ ಭಟ್ ಹಾಗೂ ಡಾ॥ ನಾ. ಮೊಗಸಾಲೆ ಉಪಸ್ಥಿತರಿದ್ದರು.




✉ ೨೦೧೭ನೇ 'ಹೊಸತು' ಜನವರಿ ಸಂಚಿಕೆ ವರ್ಣರಂಜಿತ ಪ್ರಕಟಣೆ ಓದುಗರನ್ನು ಆಕರ್ಷಿಸಿ ಚೇತನ ನೀಡಿದೆ. ಕರ್ನಾಟಕಕ್ಕೆ ಜ್ಞಾನದ ಅರಿವು ಬೆಳಕು ಚೆಲ್ಲಿದೆ. ವಿವಿಧ ಲೇಖನ, ಭಾವಚಿತ್ರ, ಸಂಗೀತ ಕಲೆಗಾರರು, ವಚನಕಾರರು, ಕಲೆ ಸಾಹಿತ್ಯ ಮತ್ತು ಸೃಜನಶೀಲ ವ್ಯಕ್ತಿಗಳ ಪರಿಚಯ ನಮಗೆ ನೀಡಿದ್ದಾರೆ.

೨೦೧೬ರ ವರ್ಷ ಅನಿರೀಕ್ಷಿತ, ಅನಿಶ್ಚಿತತೆಯ ಆಗರವಾಗಿರುವುದು ನಿಶ್ಚಿತ. ಪರಿಸ್ಥಿತಿ ಬಗ್ಗೆ ಲೇಖನ ಬರವಣಿಗೆ ನಿಜ! ಆದರೆ ಸಾಮಾಜಿಕ ಪರಿಸರ ವಾಸ್ತುಸ್ಥಿತಿ ಇರುವುದು ಸ್ವಾಭಾವಿಕ. ಅಮೇರಿಕದ ಕ್ಯೂಬಾ ದ್ವೀಪದಲ್ಲಿ ಅಧಿಕಾರಕ್ಕೇರಿದ ಕ್ರಾಂತಿಕಾರಿ ಫಿಡೆಲ್ ಕ್ಯಾಸ್ಟ್ರೋ, ೨೦೧೬ ನವೆಂಬರ್ ೨೬ರಂದು ತಮ್ಮ ತೊಂಬತ್ತನೇ ವಯಸ್ಸಿನಲ್ಲಿ ನಿಧನ ಹೊಂದಿದ್ದು ಅಂತರರಾಷ್ಟ್ರೀಯ ಸಮಾಜವಾದಿ ಚಳವಳಿಗೆ ತುಂಬಲಾರದ ನಷ್ಟ ಹೌದು. ಇವರ ಬದುಕು ಸಾಧನೆ, ಸಂಕಷ್ಟಗಳ ಮಾಹಿತಿಯನ್ನು ಲೇಖಕರು ಸೂಕ್ತರೀತಿ ನೀಡಿ, ಯುವಕರಿಗೆ ಸ್ಫೂರ್ತಿ, ಪ್ರೇರಣೆ ನೀಡಿದ್ದಾರೆ.

ಅಮೇರಿಕದ ಉಗ್ರಬಲಪಂಥೀಯರ ಅಧ್ಯಕ್ಷೀಯ ಚುನಾವಣೆಯಲ್ಲಿ ರಿಪಬ್ಲಿಕನ್ ಪಕ್ಷದ ಡೊನಾಲ್ಡ್ ಟ್ರಂಪ್‌ನ ಅನಿರೀಕ್ಷಿತ ಜಯ, ಭಾರತೀಯ ಜನತಾ ಪಕ್ಷದ ನರೇಂದ್ರ ಮೋದಿಯ ಸಾರ್ವತ್ರಿಕ ಚುನಾವಣೆ ಭಾಷಣದ ಹುಸಿ ಭರವಸೆಗಳಿಗೆ ನಿದರ್ಶನ.

ಓದುಗರ ವೇದಿಕೆಯಲ್ಲಿ "ದೇಶಪ್ರೇಮ ಕುರಿತು" ವಿವಿಧ ಲೇಖಕರು ತಮ್ಮ ಅನಿಸಿಕೆ ವ್ಯಕ್ತಪಡಿಸಿರುವುದು ದೇಶದ ಜನತೆಗೆ ಚೇತನ ನೀಡಿದೆ. ನಾನು ಓದಿದ ಪುಸ್ತಕ, ಹೊಸ ಓದು, ಚುಟುಕಗಳು, ಕ್ಷ-ಕಿರಣ, ಮುಖಪುಟ ಫಿಡೆಲ್ ಕ್ಯಾಸ್ಟ್ರೋ ವಿಶೇಷ ಸಂಚಿಕೆಯ ಮೆರುಗು.

ಚೌಡಾಪುರ **_ಮರಿದೇವರ ಸಿದ್ದಪ್ಪ_**

## ಐದು ಅಮೂಲ್ಯ ಪ್ರಶ್ನೆಗಳು

ಒಂದೂರಿನಲ್ಲಿ ಒಬ್ಬ ರಾಜನಿದ್ದ. ಅವನ ಆಸ್ಥಾನಕ್ಕೆ ಒಮ್ಮೆ ಸುಜ್ಞಾನಿ ಎಂಬ ಪಂಡಿತ ಬಂದ. ಅವನು ರಾಜನನ್ನು ಕುರಿತು, "ಮಹಾರಾಜರೇ, ನಿಮ್ಮ ಆಸ್ಥಾನದ ಪಂಡಿತರು ಕೇಳಿದ ಯಾವುದೇ ಪ್ರಶ್ನೆಗೆ ತೃಪ್ತಿಕರ ಉತ್ತರ ನೀಡುವೆ. ನಿಮಗೆ ಸರಿ ಎನಿಸಿದರೆ ತಕ್ಕ ಕಾಣಿಕೆ ನೀಡಿ" ಎಂದು ಬೇಡಿಕೊಂಡನು.

ರಾಜನ ಒಪ್ಪಿಗೆಯ ಮೇರೆಗೆ ಸಭೆ ಕರೆಯಲಾಯಿತು. ಒಬ್ಬ ಆಸ್ಥಾನದ ಪಂಡಿತನು ಸುಜ್ಞಾನಿಯನ್ನು ಕುರಿತು. "ಸಕಲ ಮಾನವ, ಪಕ್ಷಿ, ಪ್ರಾಣಿ, ಕ್ರಿಮಿ ಕೀಟಗಳು ಹಾಗೂ ಗಿಡ ಮರಗಳನ್ನು ಕಾಪಾಡುವ ಕರುಣಾಮಯಿ ತಾಯಿ ಯಾರು ? ಎಂದು ಕೇಳಿದನು. ಸುಜ್ಞಾನಿ ಪಂಡಿತನು. "ಭೂಮಿ ತಾಯಿ. ಮಾನವನಿಗೆ ಮನೆ ಕಟ್ಟಲು ಕಲ್ಲು-ಮಣ್ಣು, ಕಟ್ಟಿಗೆ ಕೊಡುವವಳು ಭೂಮಿ ತಾಯಿ. ಜೋಳ-ಗೋಧಿ ಮುಂತಾದ ಆಹಾರ ಧಾನ್ಯ ಬೆಳೆಯುವವಳು ಅವಳು. ಗಿಡಗಳ ಮೂಲಕ ಹಣ್ಣು, ಕಾಯಿ ನೀಡುವಳು. ಹೊಳೆ, ಕೆರೆ, ಸರೋವರ ಮೂಲಕ ನೀರು ಕೊಡುವವಳು ಭೂಮಿ ತಾಯಿಯೇ" ಎಂದು ಉತ್ತರಿಸಿದನು.

ಎರಡನೆಯ ಪಂಡಿತನು, "ಸಕಲಜೀವಿಗಳನ್ನು ರಕ್ಷಣೆ ಮಾಡುವ ನಿಜವಾದ ರಾಜನು ಯಾರು" ಎಂದು ಪ್ರಶ್ನಿಸಿದನು. ಸುಜ್ಞಾನಿ ಪಂಡಿತನು "ನಿಜವಾದ ರಾಜನೆಂದರೆ ಮಳೆರಾಜನೆ. ಮಳೆರಾಜನು ಸುರಿಸುವ ಮಳೆ ನೀರಿನಿಂದಲೇ ರೈತ ಆಹಾರ ಧಾನ್ಯ ಬೆಳೆಯುತ್ತಾನೆ. ಲತೆಗಳು ಹೂ ಕೊಡುವವು. ಗಿಡಗಳು ಹಣ್ಣು ಕೊಡುವವು. ಹೊಳೆ-ಕೆರೆಗಳು ನೀರು ಕೊಡುವುದು ಮಳೆ ರಾಜನ ಕೃಪೆಯಿಂದಲೇ. ಈ ರೀತಿಯಲ್ಲಿ ಸಕಲಜೀವಿಗಳನ್ನು ರಕ್ಷಿಸುವ ರಾಜನೆಂದರೆ ಮಳೆರಾಜನೆ" ಎಂದು ಉತ್ತರಿಸಿದನು.




ಮೂರನೆಯ ಪಂಡಿತನು. "ಮಾನವ ಶರೀರವನ್ನು ಆರೋಗ್ಯಪೂರ್ಣವಾಗಿ ಬೆಳವಣಿಗೆ ಮಾಡುವ ಎರಡು ಮುಖ್ಯ ವಸ್ತುಗಳು ಯಾವುವು ?" ಎಂದು ಪ್ರಶ್ನಿಸಿದನು. ಸುಜ್ಞಾನಿ ಪಂಡಿತನು. "ನಮ್ಮ ಶಾರೀರಿಕ ಆರೋಗ್ಯ ಚೆನ್ನಾಗಿರಲು ಒಳ್ಳೆಯ ಶುಚಿಯಾದ ಆಹಾರ ಹಾಗೂ ಸ್ವಚ್ಛ ನೀರೇ ಬೇಕು. ಅನುಭವಿಗಳು ಇದನ್ನೇ "ಕೂಳು ಕುತ್ತು, ನೀರು ಪಿತ್ತು" ಅಂದಿದ್ದಾರೆ. ಅಂದರೆ ಅಶುದ್ಧ ಆಹಾರ ಹಾಗೂ ಹೊಲಸು ನೀರು ನಮ್ಮ ಶರೀರವನ್ನು ರೋಗಮಯ ಮಾಡುತ್ತವೆ. ಸತ್ವಯುತ ಬಿಸಿ ಬಿಸಿ ಹಿತಮಿತವಾದ ಆಹಾರ ಹಾಗೂ ಪರಿಶುದ್ಧವಾದ ನೀರು ಆರೋಗ್ಯಪೂರ್ಣ ಬೆಳವಣಿಗೆಯ ಎರಡು ಮುಖ್ಯ ವಸ್ತುಗಳಾಗಿವೆ" ಎಂದು ಉತ್ತರಿಸಿದನು.

ನಾಲ್ಕನೆಯ ಆಸ್ಥಾನ ಪಂಡಿತನು, "ನಿಸರ್ಗದಲ್ಲಿ ಜೀವಿಸುವ ಪಕ್ಷಿ, ಪ್ರಾಣಿ, ಮನುಷ್ಯ, ಸಸ್ಯ, ಕ್ರಿಮಿ ಕೀಟಾದಿಗಳಿಗೆ ನಿಜವಾದ ದೇವರು ಯಾರು ?" ಎಂದು ಕೇಳಿದನು. ಸುಜ್ಞಾನಿಯು, "ಆಹಾರವಿಲ್ಲದೆ - ನೀರಿಲ್ಲದೆ ಯಾವ ಜೀವಿಯು ಬದುಕಲಾರದು. ಆಹಾರ ಧಾನ್ಯಗಳು ಹುಲುಸಾಗಿ ಬೆಳೆಯಲು ಸೂರ್ಯನ ಬಿಸಿಲು, ಬೆಳಕು ಅವಶ್ಯಕ. ಸೂರ್ಯನ ಪ್ರಖರ ಕಿರಣಗಳಿಂದ ಸಮುದ್ರದ ನೀರು ಕಾಯ್ದು ಉಗಿಯಾಗಿ, ಆರ್ದ್ರವಾಗಿ ಮೇಲೆ ಹೋಗುತ್ತದೆ. ಆ ಉಗಿಗೆ ತಂಪು ತಗುಲಿದಾಗ, ಮೋಡಗಳಿಂದ ಮಳೆ ಸುರಿಯುತ್ತದೆ. ಈ ರೀತಿ ಸುರಿದ ಮಳೆಯಿಂದ ಬೆಳೆಗಳು ಬೆಳೆದು ನಮ್ಮ ಆಹಾರವಾಗಿ ಜೀವಿಸಲು ನೆರವಾಗುತ್ತವೆ. ಮಳೆಯಿಂದ ಪಡೆದ ನೀರು ಕುಡಿಯಲು ಉಪಯೋಗವಾಗುತ್ತದೆ. ಹೀಗೆ ನಮ್ಮನ್ನು ಕಾಪಾಡುವ ನಿಜವಾದ ದೇವರೆಂದರೆ ಸೂರ್ಯದೇವನೆ" ಎಂದು ವಿವರಿಸಿದನು.

ರಾಜನೂ, ಆಸ್ಥಾನ ಪಂಡಿತರೂ ಸುಜ್ಞಾನಿ ಪಂಡಿತನ ವಾಕ್ ಚಾತುರ್ಯವನ್ನು ತುಂಬ ಮೆಚ್ಚಿಕೊಂಡರು. ಅವನಿಗೆ ಯೋಗ್ಯ ಕಾಣಿಕೆ ನೀಡಿ ಗೌರವಿಸಿದರು.

ಬೆಂಗಳೂರು **_ಹನುಮಂತ ಭಟ್ ಬಿ._**

'ಹೊಸತು' ಜನವರಿ ಸಂಚಿಕೆಯಲ್ಲಿ ಮಾನ್ಯ ಎಂ. ಎಸ್. ಪ್ರಭಾಕರ ಅವರನ್ನು ಔಪಚಾರಿಕವಾಗಿ ಸಂದರ್ಶಿಸದಿದ್ದಾಗ್ಯೂ 'ಸಂದರ್ಶನ' ಎಂಬ ಶೀರ್ಷಿಕೆಯಡಿ ಪ್ರಕಟಿಸಲಾದ ಲೇಖನವು ಪತ್ರಿಕೆಯ ದೃಷ್ಟಿಯಿಂದ ಆಕ್ಷೇಪಾರ್ಹವಾಗಿದೆ. ಮೇಲಾಗಿ ಅಂತಹ 'ಹರಟೆ'ಯ ಪ್ರಕಟಣೆಗೆ ಶ್ರೀಯುತರ ಅನುಮತಿಯನ್ನು ಪಡೆಯಲಾಗಿರಲಿಲ್ಲ. ಅಲ್ಲದೆ, ಅವರು ಹೇಳಿದರೆನ್ನಲಾದ ಮಾತುಗಳಲ್ಲಿ ಎರಡು-ಮೂರು ಅಂಶಗಳು ತಪ್ಪು ಮಾಹಿತಿಯನ್ನು ನೀಡಿವೆ. ಉದಾಹರಣೆಗೆ, ಶ್ರೀ. ಡಿ. ಎನ್. ಶಂಕರಭಟ್ಟ ಅವರನ್ನು 'ಹುಚ್ಚ' ಎಂದು ಅವರು ಬಗೆಯುವುದಿಲ್ಲ; ಆದರೆ ಆ ಅರ್ಥ ಬರುವ ಮಾತು ಅವರದೆಂಬಂತೆ ತೋರುವ ಸಾಧ್ಯತೆಯುಂಟು. ದಕ್ಷಿಣ ಆಫ್ರಿಕದಲ್ಲಿ ಅವರಿಗೆ ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್‌ನ ಅನೇಕ ಕಾರ್ಯಕರ್ತರ ಪರಿಚಯ ಇದ್ದುದನ್ನು ಉಲ್ಲೇಖಿಸಿಲ್ಲ. ಎಎನ್‌ಸಿಯೊಟ್ಟಿಗೆ ಕಮ್ಯುನಿಸ್ಟರು ಸಹ ಹೋರಾಟದಲ್ಲಿ ಪಾಲ್ಗೊಂಡಿದ್ದ ಕಾರಣದಿಂದಾಗಿ ಕೆಲವು ಕಮ್ಯುನಿಸ್ಟರ ಪರಿಚಯ ಅವರಿಗಿತ್ತು. ರಾಬೆನ್ ದ್ವೀಪದಿಂದ ಬಿಡುಗಡೆಯಾದ ನಾಲ್ಕು ವರ್ಷಗಳ ನಂತರ ಮಂಡೆಲಾ ಅಧ್ಯಕ್ಷರಾದ್ದು. ಆ ವೇಳೆಗೆ ಭಾರತದ ಅನೇಕರು ಅವರನ್ನು ಸಂದರ್ಶಿಸಿದ್ದಿರಬೇಕು, ಆದರೆ ಪ್ರಸ್ತುತ ಬರಹದಲ್ಲಿ ಅದನ್ನು ಸ್ಪಷ್ಟಪಡಿಸಿಲ್ಲದಿರುವುದು ಒಂದು ನ್ಯೂನತೆ. ದಕ್ಷಿಣ ಆಫ್ರಿಕಾದ ಪಾರ್ಲಿಮೆಂಟ್ ಭವನವಿರುವುದು ಕೇಪ್‌ಟೌನಿನಲ್ಲಿ. ಅದು ಜೊಹಾನ್ಸ್‌ಬರ್ಗ್‌ನಿಂದ ಸಾವಿರ ಮೈಲಿ ದೂರದಲ್ಲಿದೆ. ಹರಟೆಯ ಬರಹದಲ್ಲಿ ಇದನ್ನು ಸ್ಫುಟವಾಗಿ ನಮೂದಿಸಲಾಗಿಲ್ಲ.

ಇಂತಹ ಪ್ರಮಾದಗಳಿಗಾಗಿ ಪತ್ರಿಕೆಯ ಗೌರವ ಸಂಪಾದಕರು ಡಾ॥ ಪ್ರಭಾಕರ ಅವರ ಕ್ಷಮೆ ಯಾಚಿಸಿದ್ದಾರೆ. ಓದುಗರು 'ಹರಟೆ'ಯ ಬರಹವನ್ನು ಈ ವಿವರಣೆಯ ಹಿನ್ನೆಲೆಯಲ್ಲಿ ಓದಿಕೊಳ್ಳಬೇಕಾಗಿ ವಿನಂತಿ.

**_- ಗೌ. ಸಂ._**

# ಹೋದೆಯಾ ಶನಿ ಅಂದ್ರೆ ಬಂದೇ ಗವಾಕ್ಷೀಲಿ



ಅರವತ್ತಾರು ವರ್ಷಗಳ ನಂತರ ಎದ್ದ ಹಿಟ್ಲರ್‌ಗೆ ಜನರನ್ನು ಕಂಡರೆ "ಇದೆಂತಹ ಜರ್ಮನರಪ್ಪಾ" ಎನಿಸಿತು. ಅವನೆಂತಹ ಅಡಿಪಾಯ ಹಾಕಿಕೊಟ್ಟಿದ್ದ : ಭವಿಷ್ಯವೇ ಇಲ್ಲದಂತಹ ದೇಶವನ್ನವರಿಗೆ ಅನುಗ್ರಹಿಸಿದ್ದ ! ಸೇತುವೆಗಳು, ವಿದ್ಯುದಾಗಾರಗಳು, ರಸ್ತೆಗಳು, ರೈಲ್ವೆ , ಎಲ್ಲವನ್ನೂ ಭಗ್ನಗೊಳಿಸಲಾಗಿತ್ತು. ಏನಾದರೂ ಉಳಿದಿದ್ದರೆ ಅವನ್ನೂ ಪೂರ್ತಿ ನಾಶ ಮಾಡಿ ಎಂಬ ಆಜ್ಞೆ ವಿಧಿಸಿದ್ದ. ಮಾರ್ಚ್ ೧೯೪೫ರ ಆಜ್ಞೆ ಅದು. ಅಂಗಡಿ ಮುಗ್ಗಟ್ಟು, ನೀರಿನ ಸೌಕರ್ಯ, ದೂರವಾಣಿ ಸಂಪರ್ಕ, ಕಾರ್ಖಾನೆಗಳು, ಕೃಷಿಭೂಮಿ, ಮನೆ–ಮಠ, ಎಲ್ಲವನ್ನೂ ನೆಲಸಮ ಮಾಡಿರೆಂದು ಹೇಳಿದ್ದ. ಈಗ ನೋಡಿದರೆ ಎಲ್ಲವೂ ಹಾಗೇ ಇವೆ, ಇನ್ನೂ ಉತ್ತಮಗೊಂಡಿವೆ. ಅಂದರೆ, ಆಜ್ಞೆಯ ಉಲ್ಲಂಘನೆ ಆಗಿಹೋಗಿದೆ. ಒಬ್ಬ ಸೈನಿಕನಿದ್ದಾನೆನ್ನಿ: "ಈ ಪೆಟ್ಟಿಗೆ ಅಂಗಡಿಗೆ ಬೆಂಕಿ ಇಡು" ಎಂದು ಹೇಳಿದರೆ ಅದನ್ನವನು ಮಾಡಬೇಡವೆ ? "ಈ ಅಂಗಡಿಯಿಂದ ಏನಾಗುತ್ತದೆ, ಇರಲಿ ಬಿಡಿ. ಶತ್ರು ಅದನ್ನು ಉಪಯೋಗಿಸಿ ಏನು ಮಾಡಬಲ್ಲ" ಎಂದುಬಿಟ್ಟರೆ ಯುದ್ಧ ಮಾಡಲಾಗುತ್ತದೆಯೆ ? ಪ್ರಯೋಜನವಿಲ್ಲದೆ ಉಂಟೆ ? ಅಲ್ಲಿರುವ ವರ್ತಮಾನ ಪತ್ರಿಕೆ ಓದಿಕೊಳ್ಳುತ್ತಾನೆ, ಎಂಥದೋ ವ್ಯಾಪಾರ ಶುರು ಮಾಡುತ್ತಾನೆ. ಆ ಸ್ಟಾಲಿನ್ನನ ಸೈನಿಕರು ಅಸಾಮಾನ್ಯರು, ಏನು ಕೈಗೆ ಸಿಕ್ಕಿದರೂ ಹೇಗೋ ಅದನ್ನು ನಮ್ಮ ಮೇಲೆ ತಿರುಗಿಸುತ್ತಾರೆ. ಆದ್ದರಿಂದಲೇ ಅವನು ಹೇಳಿದ್ದು, ಮನೆಗಳನ್ನೆಲ್ಲಾ ಧ್ವಂಸ ಮಾಡಿಬಿಡಿ, ಎಂದು. ಮನೆಗಳು, ಬಾಗಿಲುಗಳು, ಚಿಲಕಗಳು, ಸ್ಕ್ರೂಗಳು, ಹೀಗೆ ಯಾವುದನ್ನೂ ಬಿಡಬಾರದು. ಎಲ್ಲಾ ಸುಟ್ಟು ಬೂದಿಯಾಗಬೇಕು. ಆಗ ಶತ್ರುವು ಹೈರಾಣಾಗುತ್ತಾನೆ. ಬರಲಿ ಚರ್ಚಿಲ್ ನಮ್ಮ ಅತಿಥಿಯಾಗಿ, ಅದೇನು ಮಾಡಿಕೊಳ್ಳುತ್ತಾನೋ ನೋಡೋಣ. ಹೀಗಿತ್ತು ಹಿಟ್ಲರನ ಯೋಜನೆ.

ಆಜ್ಞೆ ಉಲ್ಲಂಘಿಸಿ ಜರ್ಮನರು ಹಾಳಾದರು ಎನಿಸಿತು ಅವನಿಗೆ. ಬ್ರಿಟಿಷರು, ರಷ್ಯದ ಬಾಲ್ಶೆವಿಕರು, ಸಾಮ್ರಾಜ್ಯಶಾಹಿ ಅಮೆರಿಕಾ, ಇವೆಲ್ಲಕ್ಕೂ ಶರಣಾಗಿಬಿಟ್ಟರಲ್ಲ. ಭವಿಷ್ಯವೇ ಇಲ್ಲದಂತೆ ಅನಾಥರಾದರು ! ಅಧಿಕಾರದಲ್ಲಿದ್ದಾಗ ತಾನು ಸುರಕ್ಷಿತ ಕಟ್ಟಡದಿಂದ ಹೊರಬಂದು ನೋಡಿದ್ದ : ಅಧ್ಯಕ್ಷರ ಭವ್ಯ ನಿವಾಸ; ಎಲ್ಲೆಲ್ಲೂ ಯುದ್ಧವಿಮಾನಗಳಿಂದ ಬಾಂಬುಗಳ ಸುರಿಮಳೆ. ಗೆದ್ದಾಗ ಶತ್ರುಗಳಿಗೇನೂ ಉಳಿಯುವಂತಿರಲಿಲ್ಲ. ಅತ್ತ ಅಮೆರಿಕನ್ನರು, ಇತ್ತ ರಷ್ಯನರು. ಅಯ್ಯೋ, ನನ್ನ ಜರ್ಮನಿಯ ಜನಗಳೇ, ಅವರೊಡನೆ ನೀವು ಬಾಳುವುದು ಬೇಡ, ಎಂದು ಎಲ್ಲವನ್ನೂ ನಾಶಕ್ಕೆ ಗುರಿಮಾಡಿದ್ದ.

ಆದರೀಗ ಅದೆಲ್ಲವನ್ನೂ ನೋಡಲು ಹಿಟ್ಲರ್ ವಾಪಸಾಗಿದ್ದಾನೆ. ಇದೇನು ಆಗಿಹೋಗಿದೆಯೆಂದು ಮೂಗಿನ ಮೇಲೆ ಬೆರಳಿಟ್ಟು ಚಿಂತೆಗಿಳಿದ. ನಿದ್ದೆಯಿಂದೆದ್ದಾಗ ಮಧ್ಯಾಹ್ನ ೧ ಗಂಟೆ. ಮೇಲೆ ನೀಲಿಯಾಗಸ, ಅಲ್ಲಲ್ಲಿ ಮೋಡದ ತುಣುಕುಗಳು. ಏಪ್ರಿಲ್‌ನಲ್ಲಿ ಇಷ್ಟೊಂದು ಸೆಖೆಯೇ ಎನಿಸಿತು. ಆಕಾಶದಲ್ಲಿ ಶತ್ರುಗಳ ಯುದ್ಧವಿಮಾನಗಳೇ ಇಲ್ಲವಲ್ಲಾ ಎಂದು ಸೋಜಿಗ. ಸುತ್ತಮುತ್ತ ಗುಂಡುಗಳ ಘೋರ ಶಬ್ದವೂ ಇಲ್ಲ. ತನ್ನ ಚಾನ್ಸಲರಿ (ಅಧ್ಯಕ್ಷೀಯ ನಿವಾಸ ಮತ್ತು ಕಚೇರಿ) ಎಲ್ಲಿ ? ತಾನು ಫ್ಯೂರರ್; ಮಹಾನಾಯಕ. ತಾನು ಅಡಗಿಕೊಳ್ಳುತ್ತಿದ್ದ ನೆಲಮಾಳಿಗೆಯ ಆವಾಸವೂ ಕಾಣುತ್ತಿಲ್ಲವಲ್ಲ. ನಾಲ್ಕೈದು ಹುಡುಗರು ಏನೋ ಆಟ ಆಡಿಕೊಳ್ಳುತ್ತಿದ್ದಾರೆ. ಸುತ್ತಣ ಇಟ್ಟಿಗೆ ಮನೆಗಳಿಗೆ ಎಂಥದೋ ಬಣ್ಣ ಮೆತ್ತಿದ್ದಾರೆ. ಇದೇ ಏನು ನನ್ನ ಬರ್ಲಿನ್ ?

ಅವನೆಂದೂ ಕುಡುಕನಾಗಿರಲಿಲ್ಲ. ಆದ್ದರಿಂದ ಇದು ಮತ್ತಿನಿಂದುಂಟಾದ ಭ್ರಾಂತಿಯಂತೂ ಅಲ್ಲವೆಂಬುದು ಸ್ಪಷ್ಟ . ನೆನಪು ಕದಕಿದ : ಹೌದು, ಆ ಕಡೆಯ ದಿನ ಬಂಕರ್‌ನಲ್ಲಿ ಈವಾ ಜೊತೆ ಕುಳಿತಿದ್ದ. ಅದೇನು ಮೋಜಿನ ದಿನ; ಯುದ್ಧದ ಜಂಟಾಟ ಮರೆತು ಸಲ್ಲಾಪದಲ್ಲಿ ತೊಡಗಿದ್ದ. ಹೇಗೂ ಹೊರಗೆ ಹೋಗುವಂತಿರಲಿಲ್ಲ. ಆ ಪಾಪಿ ಸ್ಟಾಲಿನ್ ಬಂದುಬಿಟ್ಟಾನೆಂಬ ಭಯ. ಇಬ್ಬರೂ ತುಸುಕಾಲ ಏನೇನೋ ಮಾತಾಡಿಕೊಂಡರು. ಹ್ಞಾಂ, ಹಿಟ್ಲರ್ ಈವಾಗೆ ತನ್ನ ಪಿಸ್ತೂಲು ತೋರಿಸಿದ್ದ; ಬೇಕಾದಾಗ ಬಳಸಿಕೋ ಎಂಬ ಸೂಚನೆಯಂತಿತ್ತು ಅದು. ಆಮೇಲೆ ಏನೆಲ್ಲಾ ಆಯಿತೋ ನೆನಪಿಗೆ ಬಾರದೆಹೋಯಿತು.

ತಾನು ಆಜನ್ಮ ಧೈರ್ಯಶಾಲಿಯಲ್ಲವೆ ? ಅಂಜುವುದೇಕೆ ಎನ್ನುತ್ತಾ ಅತ್ತಿತ್ತ ಹೆಜ್ಜೆ ಹಾಕಲನುವಾದ.

**ಜಿ. ರಾಮಕೃಷ್ಣ**

೨೦೧೧ರ ಬೇಸಿಗೆ ಸಮಯ. ಒಂದು ಮೈದಾನದಲ್ಲಿ ಅಡಾಲ್ಫ್ ಹಿಟ್ಲರ್ ನಿದ್ದೆಯಿಂದ ಎದ್ದ. ಚೆನ್ನಾಗಿಯೇ ಇದ್ದಾನೆ, ಜೀವಂತ ಇದ್ದಾನೆ. ಅವನ ಪರಿಸರ ಬದಲಾಗಿದೆ. ಪ್ರೇಯಸಿ ಇವಾ ಬ್ರೌನ್ ಇಲ್ಲ, ನಾಜ಼ಿ ಪಕ್ಷ ಇಲ್ಲ; ಕಡೆಗೆ, ಪ್ರಿಯವಾದ ಯುದ್ಧವೂ ಇಲ್ಲ. ಆದರೆ ಪಿತೃಭೂಮಿ, ತನ್ನ ದೇಶ, ಇದೆ. ಎಷ್ಟು ಭಿನ್ನವಾಗಿ ಹೋಗಿದೆ ! ಅದೆಷ್ಟು ದೇಶಗಳಿಂದ ವಲಸೆ ಬಂದು ನೆಲೆಸಿರುವವರು ಗಿಜಿಗಿಡುತ್ತಿದ್ದಾರೆ. ಸಾಲದೆಂಬಂತೆ ಒಬ್ಬ ಮಹಿಳೆ (ಏಂಜೆಲಾ ಮಾರ್ಕೆಲ್) ಅಧಿಕಾರದಲ್ಲಿದ್ದಾಳೆ. ಮತ್ತೆ ವಕ್ಕರಿಸಿದ ಪಾತಕಿ ದೇಶಕ್ಕೆ ಅಧಿಕಾರಯುತವಾಗಿ ನೀತಿ ಬೋಧಿಸಲು ಮುಂದಾಗುತ್ತಾನೆ. ಜನಕ್ಕೆ ಅವನು ಚಿರಪರಿಚಿತ. ೧೯೬೭ರಲ್ಲಿ ನ್ಯೂರೆನ್‌ಬರ್ಗ್‌ನಲ್ಲಿ ಜನಿಸಿದ ಟಿಮೂರ್ ವೆರ್ಮೆಸ್ ಬರೆದ "ಲುಕ್ ಹೂ ಇಸ಼್ ಬ್ಯಾಕ್" ಎಂಬ ಕೃತಿಯನ್ನು ಜಾಮೀ ಬಲೋಕ್ ಇಂಗ್ಲಿಷ್‌ಗೆ ಅನುವಾದಿಸಿದ್ದಾನೆ. ೨೦೧೭ರಲ್ಲಿ ನಮ್ಮ ದೇಶಕ್ಕೆ ಒಂದು ರೀತಿ ಪ್ರಸ್ತುತವಾಗುವ ಮತ್ತು ಎಚ್ಚರಿಕೆ ನೀಡುವ ಕೃತಿ ಎಂಬ ಕಾರಣಕ್ಕೆ ಅದನ್ನು ಪರಿಶೀಲಿಸುವುದು ಆರೋಗ್ಯಕರ. ಪುಸ್ತಕದಲ್ಲಿ ಬರುವ ಪಾತ್ರಗಳು ಸಮಕಾಲೀನ ವ್ಯಕ್ತಿಗಳನ್ನು ಪ್ರತಿಬಿಂಬಿಸುವ ಉದ್ದೇಶವನ್ನು ಹೊಂದಿಲ್ಲವೆಂದು ವೆರ್ಮೆಸ್ ಮೊದಲಿಗೇ ತಿಳಿಸಿದ್ದಾನೆ. ಅದನ್ನು ಮೀರಿದ ಕಲ್ಪನೆಗಳಿಗೆ ಯಾರೂ ಜವಾಬ್ದಾರರಲ್ಲ.

ಸೂಕ್ಷ್ಮಾತಿಸೂಕ್ಷ್ಮಗಳನ್ನು ಗ್ರಹಿಸುವುದರಲ್ಲಿ ಜಾಣನಾದ ತನಗೆ ಹಾದಿ ತಿಳಿಯುವುದಿಲ್ಲವೇ ಎಂಬ ಭರವಸೆ. ಅತ್ತಿತ್ತ ಕಣ್ಣು ಹಾಯಿಸಿದರೆ ಕಸದ ಗುಡ್ಡೆ ಕಾಣಬೇಕೆ ? ಜೊತೆಗೆ ಹುಲ್ಲು, ಹೂವುಗಳು. ಹತ್ತಿರದಲ್ಲೇ ಹುಡುಗರ ಕಿರುಚಾಟ. ಹಿಟ್ಲರ್ ಯುವಪಡೆ ಇರಬೇಕೆಂದುಕೊಂಡ. ಹಕ್ಕಿಗಳ ಕಲರವ. ಹೋ, ಯುದ್ಧಕ್ಕೆ ವಿರಾಮ ನೀಡಿರಬೇಕು. ಹತ್ತಿರದಲ್ಲೇ ನೀರಿನ ಹೊಂಡ, ಅವನ ಟೋಪಿ ಅದರ ಪಕ್ಕದಲ್ಲಿ ಬಿದ್ದಿದೆ. ತಲೆಯನ್ನು ಕೊಡವಿಕೊಂಡು ವಾಸ್ತವ ತಿಳಿಯಬೇಕೆಂದು ಮೇಲೆದ್ದ. ತನ್ನನ್ನೊಮ್ಮೆ ನೋಡಿಕೊಂಡ : ಯಾವ ಗಾಯವೂ ಇಲ್ಲ, ಕೈಗಳು ನಡುಗುತ್ತಿಲ್ಲ. ಅರೆ, ತನ್ನ ಕೈಗಳು ಯಾವಾಗಲೂ ನಡುಗುತ್ತಿದ್ದುವಲ್ಲಾ, ಎಂದುಕೊಂಡ. ದಿರಿಸು ಲಕ್ಷಣವಾಗಿತ್ತು : ಅದೇ, ಯಾವಾಗಲೂ ಇರುತ್ತಿದ್ದ ಮಿಲಿಟರಿ ಉಡುಗೆ; ಒಂದು ಕಡೆ ಸ್ವಲ್ಪ ಮಣ್ಣು ಮೆತ್ತಿದೆ, ಅಷ್ಟೆ. ಅಂದರೆ, ತನ್ನನ್ನು ಹೂತಿರಲಿಲ್ಲ ವೆಂಬುದು ಖಚಿತವಾಯಿತು. ಉಡುಗೆಯಲ್ಲಿ ಸ್ವಲ್ಪ ಪೆಟ್ರೋಲ್ ವಾಸನೆ. ಇಸ್ತ್ರಿ ಮಾಡುವಾಗ ಈವಾ ಸ್ವಲ್ಪ ಜಾಸ್ತಿ ಪೆಟ್ರೋಲ್ ಚಿಮುಕಿಸಿರಬೇಕು.

ಹತ್ತಿರದಲ್ಲಿ ಯಾವುದೋ ಕೀರಲು ಧ್ವನಿ : "ಏ ನೋಡ್ರೋ, ಏನೋ ಅಪಘಾತವಾಗಿ ಇಲ್ಲಿ ಬಂದು ಬಿದ್ದಿರಬೇಕು." ಹಿಟ್ಲರನಿಗೆ ಆಶ್ಚರ್ಯ, ಯುವಪಡೆಯ ದಿರಿಸನ್ನೇಕೆ ಧರಿಸಿಲ್ಲ ಇವರು, ಎಂದು. ಜೊತೆಗೆ, ಮಹಾನಾಯಕನೆದುರು ಬಂದಾಗ ನಾಝಿ ಸೆಲ್ಯೂಟ್ ಮಾಡಬೇಕೆಂಬ ವಿವೇಚನೆಯಾದರೂ ಬೇಡವೆ ? ಬಲಗೈಯನ್ನು ಭುಜದ ನೇರಕ್ಕೆತ್ತಿ ನಿಲ್ಲುವುದು ಸಂಪ್ರದಾಯವೆಂದು ಇವರಿಗೆ ತಿಳಿಯದೆ? ಇಂತಹ ಬಯಲಲ್ಲಿ ಅನಿರೀಕ್ಷಿತವಾಗಿ ಮಹಾನಾಯಕ ಬಂದಿದ್ದಾನೆಂದರೆ ಎಷ್ಟು ಸಂಭ್ರಮಿಸ ಬೇಕಿತ್ತು ಈ ಯುವಪಡೆಯವರು ! ಜರ್ಮನಿಯ ಭವಿಷ್ಯವು ಇಂತಹ ಕೇಡುಗ ಹುಡುಗರಿಂದ ಉಜ್ವಲವಾಗುವುದಾದರೂ ಹೇಗೆ ? ಹೀಗೆ ವಿಚಾರಲಹರಿಯಲ್ಲಿದ್ದ ಹಿಟ್ಲರ್‌ಗೆ ಒಬ್ಬ ಹುಡುಗ ಕೇಳಿದ : "ಏನ್ರೀ, ಹುಷಾರಾಗಿದ್ದೀರಿ ತಾನೆ ?" ಮಹಾನಾಯಕನನ್ನು 'ಏನ್ರೀ' ಎನ್ನುತ್ತಾನಲ್ಲ. ತನ್ನ ನಾಝಿ ಪಕ್ಷದವರು ಅವನನ್ನು ಎಂದೂ ಹಾಗೆ ಸಂಬೋಧಿಸುತ್ತಿರಲಿಲ್ಲ. ಒಂದೇ ಪಕ್ಷದವರಾದರೂ ತಾನು ಮಿಕ್ಕವರಿಗಿಂತ ಅತ್ಯುಚ್ಚ ಸ್ಥಾನದಲ್ಲಿದ್ದವನು, ಹೀಗೆ 'ಏನ್ರೀ' ಎನ್ನಲು ಯಾರಿಗೂ ಸಾಧ್ಯವಿರಲಿಲ್ಲ. ಎಲ್ಲರೂ "ಹೇಲ್ ಫ್ಯೂರರ್" ಎನ್ನುತ್ತಿದ್ದವರೇ. ಕಾಲ ಕೆಟ್ಟುಹೋಗುತ್ತಿದೆ ಎಂಬ ಬಾಧೆ ಅವನಿಗೆ ತಟ್ಟಿತು.

ಸ್ವಲ್ಪ ಕಷ್ಟಪಟ್ಟು ಎದ್ದುನಿಂತ. "ಬೋರ್ಮನ್ ಎಲ್ಲಿ ?" ಎಂದ. ಒಬ್ಬ ಹುಡುಗ ಕಿಸಿದು ಕೇಳಿದ : "ಯಾರವನು ?" ಒಂದು ಕಾಲಕ್ಕೆ ಯುವ ಹಿಂಸಾಪಡೆಯ ಹಿಮ್ಲರ್‌ನನ್ನು ಹಿಂದಿಕ್ಕಿ ತನಗೆ ಆಪ್ತನಾಗಿದ್ದವನನ್ನು 'ಯಾರವನು ?' ಎನ್ನುತ್ತಿದ್ದಾನಲ್ಲ ಈ ಯುವಕ ಎಂದು ಬೇಸರವಾಯಿತು. ಇನ್ನೊಬ್ಬ ಕೇಳಿದ : "ನೋಡಲು ಆ ನಿನ್ನ ಬೋರ್ಮನ್ ಹೇಗೆ ಕಾಣುತ್ತಾನೆ ?" ಇದೇನು ಕಾಲ ಬಂತಪ್ಪಾ ಎಂದು ಹಿಟ್ಲರ್‌ಗೆ ಭಾರಿ ಅಸಮಾಧಾನವಾಯಿತು. "ಬಿದ್ದಿರಲಿ ನಡೆಯಿರೋ, ನಾವು ಆಟ ಆಡೋಣ" ಎಂದ ಇನ್ನೊಬ್ಬ. ಹಿಟ್ಲರ್ ಯುವಪಡೆಯು ಈ ಮಟ್ಟಕ್ಕೆ ಕುಸಿಯಿತೇ ಎಂದು ಹಿಟ್ಲರ್ ಕಸಿವಿಸಿಗೊಂಡ. ಊರೊಳಕ್ಕೆ ರಸ್ತೆ ಯಾವುದು ಎಂಬುದಕ್ಕೆ ಉತ್ತರವನ್ನೂ ಕೊಡದೆ ಹೊರಟುಹೋಗುವ ಉದ್ಧಟತನ ಇದ್ದರೆ ಈ ಯುವಪಡೆಯ ಸದಸ್ಯರು ಹೇಗೆ ತಾನೆ ಶಿಸ್ತನ್ನು ಬಲವಂತವಾಗಿ ಹೇರಬಲ್ಲರು ಎಂದು ಚಿಂತಾಕ್ರಾಂತನಾದ : ಬರ್ಲಿನ್ ವಿಶ್ವವಿದ್ಯಾನಿಲಯದ ಪುಸ್ತಕ ಭಂಡಾರಕ್ಕೆ ಬೆಂಕಿ ಹಚ್ಚಿ ಎಂದು ಹಿಮ್ಲರ್ ಆದೇಶಿಸಿದ್ದಾಗ ಎಷ್ಟು ಶಿಸ್ತುಬದ್ಧವಾಗಿ ನಮ್ಮ ಯುವ ಹಿಂಸಾಪಡೆ ಕಾರ್ಯಮಗ್ನ ವಾಗಿತ್ತು, ಈಗ ನೋಡಿದರೆ ಈ ಯುವಕರು ಶಿಸ್ತಿಗೆ ಕಿಂಚಿತ್ತೂ ಒಗ್ಗಿಕೊಂಡಿಲ್ಲವಲ್ಲ. ಒಬ್ಬ ಹುಡುಗನಂತೂ ತನ್ನ ಜೆರ್ಸಿ ಮೇಲೆ ರೊನಾಲ್ಡೊ ಎಂದು ಬರೆದುಕೊಂಡಿದ್ದಾನೆ. ಹಿಟ್ಲರ್ ಯುವಪಡೆಗೆ ಇಂತಹ ಅಧೋಗತಿಯೇ ಎಂದು ಹಿಟ್ಲರ್ ಮರುಗಿಹೋದ. ೧೯೩೩ರಿಂದ ತನ್ನ ಶಿಕ್ಷಣ ಸಚಿವನಾಗಿದ್ದ ರಸ್ಟ್‌ನನ್ನು ಕೂಡಲೆ ಪದಚ್ಯುತನನ್ನಾಗಿಸ ಬೇಕೆಂದು ತೀರ್ಮಾನಿಸಿದ. ಇಂತಹ ಬೇಜವಾಬ್ದಾರಿ ಯುವಕರನ್ನು ಹೊಂದಿದ್ದರೆ ಮಾಸ್ಕೋಗೆ ನಮ್ಮ ಸೈನ್ಯ ಹೋದಂತೆಯೇ ಸರಿ, ಎಂದು ನಿಟ್ಟುಸಿರಿಟ್ಟ.

ಹೇಗೋ ಆಚೀಚೆ ಅಂಡಲೆದು ಒಂದು ದೊಡ್ಡ ರಸ್ತೆಯನ್ನು ಕಂಡ ಹಿಟ್ಲರ್ ಊರನ್ನು, ಅಂದರೆ ತನ್ನ ಬರ್ಲಿನ್ನನ್ನು, ತಲುಪಲೆಂದು ಮುನ್ನಡೆದ. ಊರೇನೋ ಸಿಕ್ಕಿತು, ಆದರೆ ಅದೆಷ್ಟು ಅಸಹ್ಯ; ಮನೆಗಳಿಗೆ ಹೀಗೆ ಬೇರೆ ಬೇರೆ ಬಣ್ಣ ಬಳಿಸಿದ ಮೂರ್ಖ ಮಂತ್ರಿ ಯಾರು ? ಯುದ್ಧಕಾಲದಲ್ಲಿ ಚೆಲ್ಲಾಪಿಲ್ಲಿ ಬಿದ್ದಿರುತ್ತಿದ್ದ ಕಲ್ಲು–ಮಣ್ಣು ಗುಡ್ಡೆಗಳನ್ನೇನೋ ತೆಗೆಸಿದ್ದಾರೆ, ಸರಿ; ಆದರೆ ಎಲ್ಲೆಲ್ಲೂ ತುಂಬಿ ಹೋಗಿರುವ ಈ ಬಣ್ಣಬಣ್ಣದ ಚಿಕ್ಕ ಮತ್ತು ದೊಡ್ಡ ವಾಹನಗಳು ಇಲ್ಲೇನು ಮಾಡುತ್ತಿವೆ? ಯುದ್ಧಸಾಮಗ್ರಿಗಳನ್ನು ರಣಾಂಗಣಕ್ಕೆ ಹೊತ್ತೊಯ್ಯಲು ಈ ಕಾರುಗಳು ಸಮರ್ಥವೆ ? ಮನಸ್ಸಿನ ತುಂಬ ನೂರಾರು ಪ್ರಶ್ನೆಗಳನ್ನು ತುಂಬಿಕೊಂಡು ಹೋಗುತ್ತಿರಲು ಯಾರೋ ಅಬ್ಬರಿಸಿದಂತಾಯಿತು : "ಏ ದಡ್ಡ, ನಿನಗೇನು ಸಾಯುವ ತವಕವೆ ? ರಸ್ತೆಯಲ್ಲಿ ಅಡ್ಡಾದಿಡ್ಡಿ ನಡೆದಾಡಲು ಯಾರು ಕಲಿಸಿದ್ದು ನಿನಗೆ ?" ಎಲಾ ಇವನ, ಫ್ಯೂರರ್‌ಗೆ ಹಾಗೆನ್ನುವಷ್ಟು ಧೈರ್ಯವೆ ? ಏನಾಗುತ್ತಿದೆ ನನ್ನ ಜರ್ಮನಿಗೆ, ಎಂದುಕೊಳ್ಳುತ್ತಾ ಹೆಜ್ಜೆ ಹಾಕಬೇಕೆಂದಿದ್ದ; ಆದರೆ ಹೇಗೋ ಮಾತು ಬಂತು : "ನಾನು ಸ್ವಲ್ಪ ಕುಳಿತುಕೊಳ್ಳಬೇಕು." ವಾಹನದಲ್ಲಿದ್ದವನು ದುರುಗುಟ್ಟುತ್ತಾ ಶಪಿಸಿದ : "ಕೂತುಕೊಳ್ಳದಿದ್ದರೆ ಇಲ್ಲೇ ಮಲಗಿ ಸಾಯಿ." ಹಾಗೆನ್ನುತ್ತಾ ಘುರ್ ಎಂದು ಹೋಗಿಬಿಟ್ಟ. ಮುಂದೆ ಹಾಗೇ ನಡೆಯುತ್ತಿದ್ದರೆ ಯಾರೂ ತಲೆಯೆತ್ತಿ ನೋಡುವುದಿಲ್ಲ, ಯಾರೂ ನಾಝಿ ಸೆಲ್ಯೂಟ್ ನೀಡುತ್ತಿಲ್ಲ. ಒಂದು ಉದ್ಯಾನವನ ಸಿಕ್ಕಿತು. ಹಿಟ್ಲರ್ ಅಲ್ಲೊಂದು ಬೆಂಚಿನ ಮೇಲೆ ಕುಳಿತುಕೊಂಡ ಒಬ್ಬಾತ ಅಲ್ಲಿ ನಡೆದಾಡುತ್ತಿದ್ದರು. "ನಾನು ರೈಕ್ ಚಾನ್ಸೆಲರಿಗೆ ಹೋಗಬೇಕಲ್ಲ", ಎಂದ ಹಿಟ್ಲರ್. "ಓಹೋ ! ನೀವು ಟಿ.ವಿ.ಯಲ್ಲಿ ಸ್ಟೆಫಾನ್ ರಾಬ್ ಶೋ ಇದೆಯಲ್ಲಾ, ಅದರಲ್ಲಿ ಪಾತ್ರಧಾರಿಗಳೋ ?" ಎಂದ. ಜರ್ಮನಿಯ ನಾಗರಿಕತೆ ಮಣ್ಣು ಮುಕ್ಕಿದಂತೆಯೇ ಸರಿ ಎಂದು ಹಿಟ್ಲರ್ ವಿಷಣ್ಣತೆಯಿಂದ ಕುಸಿದುಹೋದ : ಜರ್ಮನಿಯ ಸೈನ್ಯದ ಮಹಾದಂಡನಾಯಕನಿಗೆ ಇಂತಹ ಲಘುವಾದ ಮಾತೆ ? ರಸ್ತೆಯಲ್ಲಿ ನಡೆದುಹೋಗುತ್ತಿದ್ದರೆ ಫ್ಯೂರರ್‌ನನ್ನು ತಲೆಯೆತ್ತಿ ನೋಡುವ ಸೌಜನ್ಯವಾದರೂ ಬೇಡವೆ ? ಈ ಜನಗಳನ್ನು ಕಟ್ಟಿಕೊಂಡು ದೇಶವನ್ನು ಮುನ್ನಡೆಸಿ ಜರ್ಮನ್ ಸಾಮ್ರಾಜ್ಯವನ್ನು ಕಟ್ಟುವುದು ಹೇಗೆ ?




ಡಕಾವ್ ಮರಣ ಕುಂಡ



ಸಾವನ್ನು ಎದುರುನೋಡುತ್ತಿರುವ ಖೈದಿಗಳು



ಸಾವಿನ ಮನೆಗೆ ದೂಡಲ್ಪಟ್ಟಿರುವವರು

ಹೋಗಲಿ, ಇಲ್ಲೇನಾಗುತ್ತಿದೆಯೆಂದು ತಿಳಿಯಲು ಒಂದು ವೃತ್ತಪತ್ರಿಕೆಯಾದರೂ ದೊರೆತರೆ ಎಲ್ಲಾ ಸರಿಪಡಿಸಲು ಕ್ರಮ ಕೈಗೊಳ್ಳಬಹುದು; ಆದರೆ ಮೊದಲು ಚಾನ್ಸೆಲರಿ ತಲುಪಬೇಕು, ಎಂದು ಬಿರುಸಿನಿಂದ ನಡೆಯುತ್ತಾ ಸಾಗಿದ.

ಎದುರಲ್ಲಿ ಒಂದು ಅಂಗಡಿ ಕಂಡಿತು. ಬಣ್ಣಗಳನ್ನು ಹುಚ್ಚುಹುಚ್ಚಾಗಿ ಹಚ್ಚಿ ಗೋಡೆಯನ್ನು ವಿಕೃತಗೊಳಿಸಲಾಗಿತ್ತು, ಆದರೆ ವೃತ್ತಪತ್ರಿಕೆಗಳು ನೇತಾಡುತ್ತಿದ್ದವು. ಹತ್ತಿರ ಹೋಗಿ ನೋಡಿದ; ಒಂದಾದರೂ ತನಗೆ ತಿಳಿದ ಪತ್ರಿಕೆಯಲ್ಲ. ಮಾಲೀಕ ಟರ್ಕಿಯವನು. ಹಿಟ್ಲರ್‌ಗೆ ಕೋಪ ಉಕ್ಕಿಬಂತು; ಆದರೇನು, ಯುದ್ಧದಲ್ಲಿ ಟರ್ಕಿ ತಟಸ್ಥವಾಗಿತ್ತಲ್ಲ ಎಂದು ಸಮಾಧಾನ ಮಾಡಿಕೊಂಡ. ಒಂದು ಪತ್ರಿಕೆ ತೆಗೆದು ನೋಡಿದರೆ ಆಗಸ್ಟ್ ೩೦, ೨೦೧೧ ಎಂದಿತ್ತು. ಅದನ್ನು ಬಿಸುಟು ಇನ್ನೊಂದನ್ನು ಕೈಗೆತ್ತಿಕೊಂಡ. ಅದರಲ್ಲೂ ಅದೇ ದಿನಾಂಕ. ಏಕೋ ತಲೆ ತಿರುಗಿದಂತಾಗಿ ಕುಸಿದುಬಿದ್ದ. ಎಚ್ಚರವಾದಾಗ ಮಾಲೀಕ ಪಕ್ಕದಲ್ಲಿ ನಿಂತಿದ್ದ. "ಈಗ ಪರವಾಗಿಲ್ಲವೆ ? ಕುಳಿತುಕೊಳ್ಳಿ, ಸ್ವಲ್ಪ ನೀರು ಕೊಡಲೆ ?" ಎನ್ನುತ್ತಿದ್ದ. "ಅದಿರಲಿ, ಇಂದಿನ ದಿನಾಂಕವೇನು ?" ಎಂದ ಹಿಟ್ಲರ್. "ಅದೇ, ೨೦೧೧, ಆಗಸ್ಟ್ ೩೦. ಏಕೆ, ನಿಮಗೆ ಇನ್ನೂ ೧೯೪೫ ಎನಿಸುತ್ತಿದೆಯೆ ?" ಎಂದ. ಕನಿಕರ ತೋರುವವನಂತೆ ನುಡಿದ : "ಬಹಳ ಸುಸ್ತಾಗಿದ್ದೀರಿ. ಚೆನ್ನಾಗಿ ತಿಂಡಿ ತಿಂದು ಬರಬೇಕಾಗಿತ್ತು. ಸ್ವಲ್ಪ ವಿಶ್ರಮಿಸಿಕೊಳ್ಳಿ. ನಿಮ್ಮ ಶೂಟಿಂಗ್ ಇಲ್ಲೇ ಎಲ್ಲೋ ಹತ್ತಿರ ನಡೆಯುತ್ತಿರಬೇಕು, ಅಲ್ಲವೆ ? ಥೇಟ್ ಹಿಟ್ಲರ್ ತರಹವೇ ಇದ್ದೀರಿ. ಅದೇನು ಶಾಪ ಬಡಿದಿದೆಯೋ ಏನೋ, ಎಲ್ಲಾ ಸೀರಿಯಲ್‌ಗಳೂ ಹಿಟ್ಲರ್ ಕುರಿತಾದವೇ ಆಗಿಹೋಗಿವೆ. ಇರಲಿ, ಶೂಟಿಂಗ್ ನಂತರ ಅದೇ ಪೋಷಾಕಿನಲ್ಲಿ ಓಡಾಡುವ ಅಭ್ಯಾಸವೇ ನಿಮ್ಮದು ? ನಿಮ್ಮ ನಿರ್ದೇಶಕನಿಗೆ ಸುಲಭವಾಯಿತು ಬಿಡಿ, ಯಾವ ಸಂಶೋಧನೆಯ ಅಗತ್ಯವೂ ಇಲ್ಲ. ಅದೇನು ಸಾಮ್ಯ ನಿಮ್ಮದು, ಹಿಟ್ಲರ್ ಎಂದರೆ ಹಿಟ್ಲರ್; ಹಾಗಿರಬೇಕು ನೋಡಿ." ಹಾಗೆನ್ನುತ್ತಾ ನಾಝಿ ಸೆಲ್ಯೂಟ್ ಮಾಡಹೋದ; ಆದರೆ ಅದೇನು ಅಧ್ವಾನದ ಸೆಲ್ಯೂಟ್ ಎನಿಸಿತು ಹಿಟ್ಲರ್‌ಗೆ, ನಾವು ಕಲಿಸಿದ ಶಿಸ್ತು ಇದೇನಾ ಎಂದು ವ್ಯಥಿಸಿದ. "ಹೋಗಲಿ, ನಮ್ಮ ನಾಝಿ ರಾಜಕೀಯ ಇನ್ನೂ ಜೀವಂತವಾಗಿದೆಯಲ್ಲಾ ಅಷ್ಟೇ ಸಾಕು" ಎಂದು ಸಾಂತ್ವನ ಹೇಳಿಕೊಂಡ. ಅಂಗಡಿಯವನು ಭಾರಿ ಬಾಯಿಬಡುಕ. ಮತ್ತೆ ಮುಂದುವರಿಸಿದ : "ಹಿಟ್ಲರ್ ಪಾತ್ರವಿರುವ ಎಲ್ಲ ಸಿನಿಮಾಗಳನ್ನೂ ನೋಡುತ್ತೇನೆ. 'ಡೌನ್‌ಫಾಲ್' ಗೊತ್ತಲ್ಲ, ಅದನ್ನೂ ನೋಡಿದ್ದೇನೆ. ಅದರಲ್ಲಿ ಬ್ರೂನೋ ಗಾಂಝ್ ನಟಿಸಿದ್ದಾನೆ. ನಿಮ್ಮ ಮುಂದೆ ಅವನೇನೂ ಅಲ್ಲ, ಸ್ವಾಮಿ. ನಿಮ್ಮನ್ನು ನೋಡಿದರೆ ಸ್ವತಃ ಹಿಟ್ಲರ್ ಎನಿಸಿಬಿಡುತ್ತದೆ." ಹಿಟ್ಲರ್‌ಗೆ ರೇಗಿಹೋಯಿತು. ಕೂಗಿಹೇಳಿದ : "ಎನಿಸುವುದು ಎಂದರೇನು ? ನಾನು ಸ್ವತಃ ಹಿಟ್ಲರ್, ತಿಳಿಯಿತೆ ?" "ನಿಜ, ಸ್ವಾಮಿ. ಅಷ್ಟು ಸಹಜವಾಗಿ ಕಾಣುತ್ತೀರಿ" ಎಂದ ಆ ಟರ್ಕಿಯ ಘಾತುಕ. "ಅದಿರಲಿ, ಇದಲ್ಲದೆ ಬೇರೆ ಪಾತ್ರಗಳಲ್ಲೂ ನೀವು ಕಾಣಿಸಿಕೊಳ್ಳುತ್ತೀರಾ ? ನಾನು ನೋಡಬೇಕಲ್ಲ," ಎಂದು ಮುಗುಳ್ನಕ್ಕ. "ನಾನು ನಟಿಸುವುದಿಲ್ಲ" ಎಂದು ಕೋಪಗೊಂಡು ನುಡಿದ ಹಿಟ್ಲರ್. ಅಂಗಡಿಯವ ಕೇಳಿದ : "ಸರಿ, ಸ್ವಾಮಿ. ಹಾಗಿದ್ದರೆ ನಿಮ್ಮದೇನಾದರೂ ಕಾರ್ಯಕ್ರಮ ಇದೆಯೋ ?" ಹಿಟ್ಲರ್ ಹೇಳಿದ : "ಇಲ್ಲದೆ ಏನು ? ೧೯೨೦ರಿಂದಲೂ ಇದೆ. ಜರ್ಮನಿಯವನಾಗಿ ನಮ್ಮ ಕಾರ್ಯಕ್ರಮದ ೨೫ ಅಂಶಗಳನ್ನು ನೀನು ತಿಳಿದಿಲ್ಲವೆಂದರೆ ನನಗೆ ಅಚ್ಚರಿಯೆನಿಸುತ್ತದೆ."

ಸಂವಾದ ಕೆಲಕಾಲ ಹೀಗೇ ಸಾಗಿತು. ಹಿಟ್ಲರ್ ಬಳಿ ಹಣವಿರಲಿಲ್ಲ ಮತ್ತು ಚಾನ್ಸೆಲರಿಗೆ ಹೋಗಿ ಅಧಿಕಾರದ ಗದ್ದುಗೆ ಏರುವ ಸಾಧ್ಯತೆಯೂ ಇರಲಿಲ್ಲ. ಒಳ್ಳೆಯ ನಟನನ್ನು ಬಳಸಿಕೊಂಡು ಒಂದಿಷ್ಟು ಹಣ ಗಳಿಸಬಹುದಲ್ಲಾ ಎಂದುಕೊಂಡು ಅಂಗಡಿಯ ಮಾಲೀಕ ಹಿಟ್ಲರ್‌ಗೆ ಹೇಳಿದ : "ಸೌಲಭ್ಯಗಳು ಸೀಮಿತ, ಆದರೆ ನೀನು ಇಚ್ಛಿಸಿದರೆ ಇಲ್ಲೇ ಅಂಗಡಿಯಲ್ಲಿ ನಾಲ್ಕು ದಿನ ತಂಗಲು ಅಡ್ಡಿಯಿಲ್ಲ." ಪಂಚತಾರಾ ಹೋಟೇಲಿನ ಯೋಚನೆ ಬಂದರೂ ಅವನಲ್ಲಿ ಅದು ಕನಸಾಗಿ ಮಾತ್ರ ಉಳಿಯಿತು.

*          *          *

ಅಂಗಡಿಯಲ್ಲಿ ಇಡಲಾಗಿದ್ದ ಪತ್ರಿಕೆಗಳನ್ನೆಲ್ಲಾ ಹಿಟ್ಲರ್ ತಿರುವಿಹಾಕಿದ. ೧೯೪೫ರ ನಂತರದ ೬೬ ವರ್ಷಗಳ ಬೆಳವಣಿಗೆಗಳನ್ನು ಅರಿಯಲು ಅವು ಅಷ್ಟಾಗಿ ಸಹಾಯ ಮಾಡಲಿಲ್ಲ. ಸೋವಿಯೆತ್ ಒಕ್ಕೂಟವನ್ನು ನಿರ್ನಾಮಗೊಳಿಸಲು ಅವನು ಬರ್ಬರೋಸಾ ಎಂಬ ಯೋಜನೆಯನ್ನು ಜಾರಿಗೊಳಿಸಿದ್ದ. ಅದು ಸಂಪೂರ್ಣವಾಗಿ ವಿಫಲವಾಯಿತೆಂದು ಈಗ ಅವನಿಗೆ ಮನದಟ್ಟಾಯಿತು. ೫೦ ಅಥವಾ ೬೦ ಸೈನಿಕರನ್ನುಳಿದು ಮಿಕ್ಕ ಸೋವಿಯೆತ್ ಸೈನ್ಯ ಬರ್ಲಿನ್ನಿನಿಂದ ಹಿಂದಿರುಗಿತ್ತು, ತಾನು (ಅಂದರೆ ಹಿಟ್ಲರ್) ಆತ್ಮಹತ್ಯೆ ಮಾಡಿಕೊಂಡ, ಇತ್ಯಾದಿ ಮಾಹಿತಿ ದೊರೆಯಿತು. ಕಿವುಡರು ಮತ್ತು ಕುರುಡರು ನಡೆಸುವ ಪತ್ರಿಕೆಗಳಿವು, ತಾನಿನ್ನೂ ಬದುಕಿರುವುದು ಅವಕ್ಕೆ ತಿಳಿಯದು ಎಂದು ಹಿಟ್ಲರ್ ಮನಸ್ಸಿನಲ್ಲೇ ಹಿಗ್ಗಿದ. ಅಂಗಡಿಯವನು ಹಿಟ್ಲರ್‌ಗೆ ಚಿಕ್ಕಪುಟ್ಟ ಕೆಲಸಗಳನ್ನು ಹಚ್ಚುತ್ತಿದ್ದ : ಆ ಪತ್ರಿಕೆಗಳನ್ನು ಇಲ್ಲಿ ಜೋಡಿಸು, ಈ ಬೀರುವನ್ನು ಅತ್ತ ಸರಿಸು, ಇತ್ಯಾದಿ. ಅಂಗಡಿಗೆ ಬಂದವರಿಗೆ ಇವನನ್ನು ಕಂಡರೆ ಮೋಜು : ಯಾವುದೋ ಶೂಟಿಂಗ್‌ನಲ್ಲಿ ಭಾಗವಹಿಸಿ ಬಂದಿದ್ದಾನೆ, ಆದರೆ ಉಡುಪನ್ನಾಗಲಿ, ಮೇಕಪ್ ಆಗಲಿ ಬದಲಿಸಲೊಲ್ಲ, ಎಂದು. ಹಿಟ್ಲರ್ ಮಾತ್ರ ತನ್ನ ಅಧಿಕಾರದ ಅವಧಿಯಲ್ಲಿ ಅವನ ಸುತ್ತ ಸದಾ ಇರುತ್ತಿದ್ದ ಅನುಚರರನ್ನು ನೆನೆಯುತ್ತಲೇ ಇದ್ದ : ಹಿಮ್ಲರ್, ಗೋಬೆಲ್ಸ್, ಗೋರಿಂಗ್, ಈವಾ, ಹೆಸ್, ಬೋರ್ಮನ್, ರಿಬೆನ್‌ಟ್ರೋಪ್, ಇತ್ಯಾದಿ. ಅಂಗಡಿಯಲ್ಲಿದ್ದುಕೊಂಡು ಟೆಲಿವಿಷನ್, ಮೊಬೈಲ್, ಕಂಪ್ಯೂಟರ್, ಮುಂತಾದ ತನಗೆ ತಿಳಿಯದಿದ್ದ ತಾಂತ್ರಿಕ ಆವಿಷ್ಕಾರಗಳ ಪರಿಚಯ ಪಡೆದುಕೊಂಡ.

ಕಡೆಗೊಂದು ದಿನ ಅಂಗಡಿಯವನು 'ಫ್ಲ್ಯಾಷ್‌ಲೈಟ್' ಕಂಪನಿಯ ಸೆನ್ಸೆಂಬ್ರಿಂಕ್ ಎಂಬುವವನನ್ನು ಕರೆತಂದ. ಅದೊಂದು ಟಿ.ವಿ. ಕಂಪನಿ. ಅವನೊಡನೆ ಬೆಲಿನಿ ಎಂಬಾಕೆ ಇದ್ದಳು. ಯಾರೇ ಪರಿಚಯವಾಗಲಿ ಹಿಟ್ಲರ್ ತಪ್ಪದೆ ಹೇಳುತ್ತಿದ್ದ : "ನಾವೆಲ್ಲಾ ಒಟ್ಟುಗೂಡಿ ಜರ್ಮನಿಯನ್ನು ಬದಲಾಯಿಸಬಲ್ಲೆವು." ಇವನನ್ನು ಬಳಸಿಕೊಂಡು ಹೊಸ ರಾಜಕೀಯ ಧಾರಾವಾಹಿ ಆರಂಭಿಸಿ ಹಣ ದೋಚಬಹುದೆಂದು ಕಂಪನಿಯವರ ಲೆಕ್ಕಾಚಾರ. ಕಾಂಟ್ರಾಕ್ಟ್‌ಗೆ ಸಹಿ ಪಡೆಯಬೇಕಲ್ಲ, ಅದಕ್ಕಾಗಿ ಕಾಗದಪತ್ರಗಳನ್ನು ತಂದರೆ ಇವನು ಅಡಾಲ್ಫ್ ಹಿಟ್ಲರ್ ಎಂದೇ ಸಹಿ ಮಾಡುತ್ತಾನೆ. "ಇರಲಿ, ಅದು ನಿಮ್ಮ ಪಾತ್ರದ ಹೆಸರು. ನಿಮ್ಮ ನಿಜವಾದ ಹೆಸರು ಹೇಳಿ," ಎಂದು ಕಂಪನಿಯವರು ದುಂಬಾಲು ಬೀಳುತ್ತಾರೆ. "ಯಾವ ವಿವರಗಳು ಬೇಕಾದರೂ ಬೋರ್ಮನ್‌ನಿಂದ ಪಡೆದುಕೊಳ್ಳಿ. ಬೇಕಾದರೆ ಚರ್ಚಿಲ್ ಇಲ್ಲವೇ ಐಸೆನ್‌ಹೋವರ್ ಬಳಿ ವಿಚಾರಿಸಿ ಏನು ಬೇಕೋ ಬರೆದುಕೊಳ್ಳಿ" ಎಂದುಬಿಡುತ್ತಾನೆ ಇವನು. ಅನೇಕ ಬಾರಿ ಕಂಪನಿಯ ದೊಡ್ಡ ಮನುಷ್ಯರು ಇವನೊಡನೆ ಸಂಧಾನ ನಡೆಸಿ ತಮ್ಮ ಧಾರಾವಾಹಿಯ ರೂಪುರೇಷೆಗಳನ್ನು ಸಿದ್ಧಪಡಿಸಿಕೊಂಡರು, ಇವನಿಗಾಗಿ ಒಂದು ಕಚೇರಿಯನ್ನು ಬಿಟ್ಟುಕೊಟ್ಟರು, ವಾಸಯೋಗ್ಯವಾದ ಒಂದು ಮನೆಯನ್ನೂ ಮಾಡಿಕೊಟ್ಟರು. ಜರ್ಮನಿಯ ಪುನರುತ್ಥಾನಕ್ಕೆ ತನ್ನ ಪ್ರಯತ್ನ

ಮುಂದುವರಿಸಲು ಹಿಟ್ಲರ್‌ಗೆ ಇವೆಲ್ಲಾ ಸೊಗಸಾದ ಪರಿಕರಗಳು ಎನ್ನಿಸಿತು. ಒಂದು ವಿಚಾರವಂತೂ ಅವನಿಗೆ ಅಸಾಧ್ಯ ಸಿಟ್ಟು ಮತ್ತು ಬೇಸರ ತರಿಸಿತ್ತು: ತಾನು ಜೈಲಿಗೆ ಅಟ್ಟಿದ್ದ ಅಡೆನೋರ್ ಮತ್ತು ಹೊನೆಕರ್ ಜರ್ಮನಿಯಲ್ಲಿ ಅಧ್ಯಕ್ಷ ಪದವಿಗೇರಿದ್ದಾದರೂ ಹೇಗೆ? ತನ್ನ ತಪ್ಪಿನಿಂದಾಗಿಯೇ ಇರಬೇಕು: ಸಕಾಲದಲ್ಲಿ ಅವರಿಗೆ ಸಾವಿನ ಶಿಕ್ಷೆ ನೀಡಬೇಕಿತ್ತು! ಇದನ್ನು ಆಲೋಚಿಸಿದಾಗ ಅದಕ್ಕೆ ಪ್ರತಿಯಾಗಿ ಒಂದು ಸ್ವಾಗತಾರ್ಹ ಸಂಗತಿಯೂ ಇತ್ತು: ಜರ್ಮನಿಯಲ್ಲೀಗ ಕೇವಲ ಒಂದು ಲಕ್ಷ ಯಹೂದಿಗಳಿದ್ದಾರೆ; ೧೯೩೩ರಲ್ಲಿ ಅವರ ಸಂಖ್ಯೆ ಐದು ಲಕ್ಷ ಇತ್ತು. ಅಲ್ಲದೆ ಇಸ್ರೇಲ್ ಅಸ್ತಿತ್ವಕ್ಕೆ ಬಂದಿದ್ದುದೂ ಒಳ್ಳೆಯದೇ: ಅರಬ್ಬರು ತಮ್ಮತಮ್ಮಲ್ಲಿ ಕಾದಾಡಿಕೊಂಡಿರಲು ಬಹಳ ಫಲಕಾರಿಯಾದ ಕ್ರಮವದೆಂದು ಹಿಟ್ಲರ್‌ಗೆ ಮುಖ ಪ್ರಫುಲ್ಲಗೊಂಡಿತು.

ಟಿ.ವಿ. ಕಂಪನಿಯವರು ಹಣದ ಸೂರೆ ಮಾಡಲು ಸರಿಯಾದ ಸಮಯವನ್ನು ಎದುರುನೋಡುತ್ತಿದ್ದು ಕಡೆಗೊಂದು ದಿನ ಹಿಟ್ಲರನನ್ನು ಕ್ಯಾಮೆರಾಗಳ ಮುಂದೆ ಕೂರಿಸಿ ಒಂದು ಜೀವಂತ ಭಾಷಣ ಹೊಡೆಸಿದರು. ನಿಧಾನಗತಿಯ ಅವನ ಉಗ್ರ ಭಾಷಣವು ಎಂದಿನಂತೆ ವಿಷಪೂರಿತವಾಗಿತ್ತು, ವೀಕ್ಷಕರು ಹುಚ್ಚೆದ್ದು ಕುಣಿದರು. ಅವನ ಭಾಷಣದ ಪೂರ್ಣಪಾಠ ಇದು: "ಜರ್ಮನಿಯ ಸಹ–ನಾಗರಿಕರೆ, ನಾನು, ಅಲ್ಲ ನಾವು, ದಿನಂಪ್ರತಿ ಕಾಣುತ್ತಿರುವುದು ಪೂರ್ಣಸತ್ಯ. ಟರ್ಕಿಯವರಿಗೆ ಸೃಷ್ಟಿಶೀಲ ಪ್ರತಿಭೆ ಇಲ್ಲ, ಮುಂದೆಯೂ ಇರುವುದಿಲ್ಲ. ಅವರೇನಿದ್ದರೂ ಹಳೇ ಪೇಪರ್ – ಖಾಲಿ ಶೀಶೆ ಮಾರಲು ಸರಿ. ಬೀದಿ ಬೀದಿ ಸುತ್ತಿ ಸಂಗ್ರಹಿಸುವುದು ಮತ್ತು ಮಾರುವುದು ಅವರ ಯೋಗ್ಯತೆಗೆ ತಕ್ಕುದಾಗಿದೆ. ಅವರ ಬುದ್ಧಿಮತ್ತೆ ಕೆಳಮಟ್ಟದ್ದು, ನಮಗೆ ಸರಿಸಾಟಿಯಾಗಲು ಸಾಧ್ಯವೇ ಇಲ್ಲ. ಇಂಡಿಯಾದವರು ಬಡಾಯಿ ಕೊಚ್ಚುತ್ತಾರೆ, ಆದರೆ ಮತಧರ್ಮದಲ್ಲಿ ಬಂಧನ ಅವರಿಗೆ ಕಟ್ಟಿಟ್ಟದ್ದು. ಪೋಲೆಂಡ್ ಎಂದೆಂದಿಗೂ ತನ್ನ ಆಸ್ತಿಯನ್ನು ಪಡೆಯಲಾರದು ಮತ್ತು ಉಳಿಸಿಕೊಳ್ಳಲಾರದು. ಜರ್ಮನಿಯ ಎಲ್ಲ ಪುರುಷ–ಮಹಿಳೆಯರಿಗೂ ಇದು ತಿಳಿದೇ ಇದೆ. ಅದಕ್ಕೆ ವಿವರಣೆ ಅನಗತ್ಯ. ಆದರೂ ಒಂದು ನಾಚಿಕೆಗೇಡಿನ ಸಂಗತಿ ಇದೆ: ನಮ್ಮ ಈ ನೆಲದಲ್ಲಿ ಈ ಮಾತನ್ನು ಕೇವಲ ಒಬ್ಬ ಟರ್ಕಿಯವನು ಮಾತ್ರವೇ ಗಟ್ಟಿಯಾಗಿ ಹೇಳಬಲ್ಲವನಾಗಿಬಿಟ್ಟಿದ್ದಾನೆ. ನನ್ನ ದೇಶ ಬಂಧುಗಳೆ, ಇಂದು ನಮ್ಮ ದೇಶವನ್ನು ನೋಡಿದ ಯಾರಿಗಾದರೂ ಇದರ ಅರಿವಾಗುತ್ತದೆ. ಏನಾಗಿದೆ ನಮ್ಮ ಜನಕ್ಕೆ? ಮನೆಯ ಕಸವನ್ನು ವಿಂಗಡಿಸುವುದರಲ್ಲಿ ಬಹಳ ಅಚ್ಚುಕಟ್ಟು; ಆದರೆ ಜನಾಂಗಗಳನ್ನು ವಿಂಗಡಿಸುವಲ್ಲಿ ಸೋತು ಸುಣ್ಣವಾಗಿದ್ದಾರೆ. ಅವರಿಗೆ ಗೊತ್ತಿರುವುದೊಂದೇ: ತಮ್ಮ ಬಗ್ಗೆ ನಗೆಹನಿಗಳನ್ನು ಸುರಿಸಿಕೊಳ್ಳುವುದು. ಸಂತೋಷದ ವಿಚಾರವೆಂದರೆ ಟರ್ಕಿಯವರೂ ಅದನ್ನೇ ಮಾಡುತ್ತಿದ್ದಾರೆ. ಮನೆಗಳಲ್ಲಿ ಇರುವ (ಕಂಪ್ಯೂಟರ್) ಇಲಿಗಳು ಮನೆಗಳಲ್ಲಿರುವ ಇಲಿಗಳ ಬಗ್ಗೆ ನಗೆಯಾಡುತ್ತವೆ, ಹೊಲದಲ್ಲಿರುವ ಇಲಿಗಳು ಹೊಲಗಳ ಇಲಿಗಳನ್ನು ನೋಡಿ ನಗೆಯಾಡುತ್ತವೆ. ಇದು ಬದಲಾಗಬೇಕು, ಬದಲಾಗುತ್ತದೆ. ಇಂದಿನಿಂದ, ಈ ಸಂಜೆ ೧೦.೪೫ರ ಕ್ಷಣದಿಂದ ಇದು ಹಾಗಿರುವುದಿಲ್ಲ, ಹಾಗಿರಕೂಡದು. ಮನೆಯ ಇಲಿ ಹೊಲದ ಇಲಿಯ ಬಗ್ಗೆ ನಗೆಯಾಡಬೇಕು. ಕರಡಿ ಮರಿಯು ಜಿಂಕೆ ಮರಿಯ ಬಗ್ಗೆ ನಗೆಯಾಡಬೇಕು. ಜರ್ಮನರು ಟರ್ಕಿಯವರ ಬಗ್ಗೆ ನಗೆಯಾಡಬೇಕು. ಈಗ ತಾನೆ ಮಾತನಾಡಿದವರು ವಿದೇಶೀಯರನ್ನು ಟೀಕಿಸಿದರು. ಅದು ಸರಿ, ಅದಕ್ಕೆ ನನ್ನ ಸಹಮತವಿದೆ."

ಕಂಪನಿಯ ಹಿರಿಯರು ಉರಿದುಹೋದರು, ಮನಸೋಇಚ್ಛೆ ಬೈದರು. ತನ್ನ ಹಿಂಸಾಪಡೆ ಎಷ್ಟು ಆಸರೆ ನೀಡಿತ್ತೆಂಬುದನ್ನು ನೆನೆಸಿಕೊಂಡು ಹಿಟ್ಲರ್ ಮತ್ತೆ ಅಂಥದೊಂದು ಪಡೆಯನ್ನು ರಚಿಸಬೇಕೆಂದುಕೊಂಡ; ಆಗ ಇವರಿಗೆಲ್ಲಾ ಸರಿಯುತ್ತರ ದೊರೆಯುತ್ತದೆ, ಕಾದು ನೋಡಲಿ, ಎಂದುಕೊಂಡ. ಬೈದವರಿಗೆಲ್ಲಾ ಇವನದು ಒಂದೇ ಉತ್ತರ: "ಇಡೀ ಜರ್ಮನಿಯ ಜನತೆ ನನ್ನೊಟ್ಟಿಗಿದೆ, ಗೊತ್ತೆ?" ಕಂಪನಿಯವರ ನಿರೀಕ್ಷೆಗೆ ವಿರುದ್ಧವಾಗಿ ಟಿ.ವಿ. ನೋಡಿದ ಜನ ಹಿಟ್ಲರನ ಭಾಷಣದಿಂದ ಪುಲಕಿತರಾಗಿದ್ದರು, "ಕಡೆಗೂ ಜನತಾವಾಣಿ ಮೊಳಗಿತು" ಎಂದು ಮೊಬೈಲ್ ಸಂದೇಶಗಳು ಹರಿದಾಡಿದುವು. ತಕ್ಷಣವೇ ಕಂಪನಿಯ ಪುರುಷರು ಮತ್ತು ಮಹಿಳಾಮಣಿಗಳು ಓಡೋಡಿ ಬಂದು ಹಿಟ್ಲರನನ್ನು ತಬ್ಬಿಕೊಂಡರು, ಎಂತಹ ಅದ್ಭುತ ಭಾಷಣ ಎಂದು ಅವನನ್ನು ಅಭಿನಂದಿಸಿದರು. "ನಾನು ಯಾವಾಗಲೂ ಸರಿಯಾದುದನ್ನೇ ಹೇಳುತ್ತೇನೆ" ಎಂದು ಹೇಳುತ್ತಾ ಹಿಟ್ಲರ್ ಅವರನ್ನೆಲ್ಲಾ ಸುಮ್ಮನಾಗಿಸಿದ. ಕಂಪನಿಯ ನಿರ್ದೇಶಕ ಸವಾಲ್ಸ್ಕಿ ಹೊರಟುಹೋದ ಮತ್ತು ಒಬ್ಬ ಲಲನಾಮಣಿ ಒಳಬಂದಳು: "ಅದ್ಭುತ! ಅಮರ! ಮನೆ ಇಲಿ ಮತ್ತು ಹೊಲದ ಇಲಿ: ಎಷ್ಟು ಮನತುಂಬುವ ಜಾಣ್ಮೆಯ ನುಡಿ. ಇವೆಲ್ಲಾ ನಿಮಗೆ ಹೇಗೆ ಹೊಳೆಯುತ್ತವೆ?" ಹಿಟ್ಲರ್ ಹೇಳಿದ:




"ಅದೇನು ಮಹಾ! ನಿನಗೂ ಹೊಳೆಯಬಲ್ಲದು. ಪ್ರಕೃತಿಯ ಮಡಿಲಲ್ಲಿ ಸರಿದಾಡು ಮತ್ತು ಕಣ್ಣು ತೆರೆದುಕೊ. ಅಯ್ಯೋ ಭಗವಂತ! ಜರ್ಮನಿಯ ಜನ ಕುರುಡರಾಗಿಬಿಟ್ಟಿದ್ದಾರಲ್ಲ. ಸರಳ ಸತ್ಯಗಳೂ ಅವರಿಗೆ ಗೋಚರಿಸುವುದಿಲ್ಲವಲ್ಲ. ಮಗಳೆ, ನೀನೇನು ವ್ಯಾಸಂಗ ಮಾಡಿದ್ದೀಯೆ?" ಆಕೆ ಸರಸರ ಪಟ್ಟಿ ಮಾಡಿದಳು: ಚೀಣಾ ಬಗೆಗಿನ ಸರ್ವಸ್ವ, ರಂಗಭೂಮಿ... ಇತ್ಯಾದಿ. ಹಿಟ್ಲರ್ ಅಬ್ಬರಿಸಿದ: "ಸಾಕು ಮಾಡು. ನಿನ್ನಂತಹ ಸುಂದರಿ ತಲೆಯ ತುಂಬ ಎಂತೆಂಥದೋ ತುಂಬಿಕೊಳ್ಳುವುದೆ? ಒಳ್ಳೆಯ ಗಂಡನನ್ನು ಮೊದಲು ಅರಸಿಕೊ, ಜರ್ಮನಿಯ ಸಂತತಿಯನ್ನು ವೃದ್ಧಿಪಡಿಸು." ಏನೇ ಇರಲಿ, ಕಂಪನಿಯಲ್ಲಿ ಅಂದು ಅದ್ದೂರಿ ಸಮಾರಂಭ: ಎಲ್ಲ ತರಹದ ಪಾನೀಯಗಳೂ ಹರಿದು ಬಂದವು. ತಿನಿಸುಗಳಿಗಂತೂ ಕೊನೆ ಮೊದಲಿಲ್ಲ. ಎಲ್ಲರೂ ಉಬ್ಬಿಹೋದರು. ಮುಂದಿನ ಧಾರಾವಾಹಿ ಸಂಚಿಕೆಯು ಇದಕ್ಕಿಂತ ಮೂರುಪಟ್ಟು ಹೆಚ್ಚು ಹಣವನ್ನು ಸುರಿಸುವುದು ಖಚಿತವೆಂದು ನಿರ್ದೇಶಕನು ಭಾಷಣ ಮಾಡಿ ಚಪ್ಪಾಳೆ ಗಿಟ್ಟಿಸಿದ. ತಾನು ಸಸ್ಯಾಹಾರಿಯಾದ್ದರಿಂದ ತಿನಿಸುಗಳನ್ನು ಮುಟ್ಟುವುದೂ ಇಲ್ಲವೆಂದು ಹಿಟ್ಲರ್ ಆಶ್ಚರ್ಯ ಮೂಡಿಸಿದ. ಅಂಗಡಿಯಾತ ಮಾರನೆಯ ದಿನವೇ ಬಂದು ಹಿಟ್ಲರನಿಗೆ ಸಾವಿರ ಅಭಿನಂದನೆಗಳನ್ನು ಹೇಳುತ್ತಾ ಆನಂದಬಾಷ್ಪ ಸುರಿಸಿಬಿಟ್ಟ.

ಮುಂದಿನ ಧಾರಾವಾಹಿ ಸಂಚಿಕೆಯ ನಂತರ "ಬಿಲ್ಡ್" ಪತ್ರಿಕೆಯು ದೀರ್ಘವಾದ ವಿಮರ್ಶೆ ಪ್ರಕಟಿಸಿತು. ಆ ವೇಳೆಗೆ ಹಿಟ್ಲರನು ಯೂ–ಟ್ಯೂಬ್‌ನಲ್ಲಿ ಪ್ರಖ್ಯಾತನಾಗಿಬಿಟ್ಟಿದ್ದ. "ಬಿಲ್ಡ್" ಬರೆದಿದ್ದು ಹೀಗೆ:

**ಯೂಟ್ಯೂಬ್‌ನಲ್ಲಿ ಕೋಡಂಗಿ ಹಿಟ್ಲರ್**

**ಅವನ ಬೈಗುಳ ಅಭಿಮಾನಿಗಳಿಗೆ ಅತಿರಂಜನೆ ನೀಡುತ್ತಿದೆ**

**ದೇಶವು ಸ್ತಬ್ಧವಾಗಿದೆ: ಇದು ಹಾಸ್ಯದ ಮಾದರಿಯೆ?**

ಒಂದು ಕಾಲದಲ್ಲಿ ಅವನು ಲಕ್ಷಗಟ್ಟಲೆ ಜನರನ್ನು ಕೊಂದಿದ್ದ – ಈಗ ಯೂ–ಟ್ಯೂಬ್‌ನಲ್ಲಿ ಅವನು ಕೋಟಿಗಟ್ಟಲೆ ಜನರಿಗೆ ರಂಜನೀಯ ವ್ಯಕ್ತಿ. ಅವನ ಅರುಚಿಕರ ಮಾತುಗಳು ಪದೇಪದೇ ಅವೇ ಆಗಿರುತ್ತವೆ, ಒಂದೆರಡು ವಿಲಕ್ಷಣ ಪದಗುಚ್ಛಗಳು, ಅಷ್ಟೆ. ಅವನೊಬ್ಬ ಕೋಡಂಗಿ, ಅಡಾಲ್ಫ್ ಹಿಟ್ಲರನಂತೆ ಕಾಣಿಸಿಕೊಳ್ಳುತ್ತಾನೆ. ವಿದೇಶೀಯರ ಬಗ್ಗೆ ದ್ವೇಷ, ಮಹಿಳೆಯರನ್ನೂ ಪ್ರಜಾಪ್ರಭುತ್ವವನ್ನೂ ಲೇವಡಿ ಮಾಡುತ್ತಾನೆ. ಆಲಿ ಗ್ಯಾಗ್‌ಮೇಜ್ ಅದನ್ನು "ಮಹಾಕಾವ್ಯದ ಪಾತ್ರಗಳು" ಎಂದು ಕರೆದು ತೋರಿಸುತ್ತಿದ್ದಾನೆ. ಯುವಕ ಸೇವಾ ಕಾರ್ಯಕರ್ತರು, ರಾಜಕಾರಣಿಗಳು ಮತ್ತು ಯಹೂದಿಗಳ ಕೇಂದ್ರ ಸಮಿತಿ ಬಹಳ ವಿಚಲಿತರಾಗಿದ್ದಾರೆ.

ಅವನ ಮಾತಿನ ತುಣುಕುಗಳನ್ನು ನೋಡಬಯಸುತ್ತೀರಾ?

– ಟರ್ಕಿಯವರಿಗೆ ಸೃಜನಶೀಲ ಪ್ರತಿಭೆ ಇಲ್ಲ.

– ವರ್ಷಕ್ಕೆ ೧೦,೦೦೦ ಗರ್ಭಪಾತಗಳು ಅಸಹನೀಯ. ರಷ್ಯಾದ ಮೇಲೆ ಯುದ್ಧ ಮಾಡಲು ನಾಲ್ಕು

ಡಿವಿಷನ್‌ಗಳ ಕೊರತೆಯುಂಟಾಯಿತೆಂದೇ ಅರ್ಥ.

– ಶರೀರವನ್ನು ಸುಂದರ ಮಾಡಿಕೊಳ್ಳಲು ಶಸ್ತ್ರಚಿಕಿತ್ಸೆಗೆ ಒಳಗಾಗುವುದೂ ಒಂದೇ, ಜನಾಂಗೀಯ ಕಲಸುಮೇಲೋಗರಕ್ಕೆ ಆಹ್ವಾನ ನೀಡುವುದೂ ಒಂದೇ.

ರೊಚ್ಚೆಬ್ಬಿಸುವಂತಹ ಈ ವಿಧದ ಘೋಷಣೆಗಳು ಹಿಂದಿನ ತಲೆಮಾರಿನ ಜರ್ಮನರಿಗೆ ಕೆಟ್ಟ ನೆನಪುಗಳನ್ನು ತರುತ್ತಿವೆ. ೮೨ ವಯಸ್ಸಿನ ಹಿಲ್ಡ ಹೇಳಿದ್ದಾರೆ : "ಈ ಪಾತಕಿ ಅದೆಷ್ಟು ಹಾನಿ ಮಾಡಿದ್ದ. ಅದು ಭಯಂಕರ !" ಮಾರ್ಕಸ್ ಸ್ಯೋಡರ್ ಪ್ರಕಾರ ಈ ಧಾರಾವಾಹಿಯು ಶುದ್ಧ ಹುಚ್ಚುತನ. ಅದರಲ್ಲಿ ಹಾಸ್ಯವೇನಿದೆ ? ಹಸಿರುಸೇನೆಯ ಕಾರ್ಯಕರ್ತೆ ಕ್ಲಾಡಿಯಾ ಹೇಳುತ್ತಾರೆ : "ಅದು ಭೀಕರವಾದ್ದು. ಅವನು ಪರದೆಯ ಮೇಲೆ ಬಂದಾಗ ನಾನು ಟಿ.ವಿ. ಮುಚ್ಚಿಬಿಡುತ್ತೇನೆ." ಯಹೂದಿಗಳ ಉಚ್ಚಸಮಿತಿಯು ಅಧಿಕೃತ ದೂರು ದಾಖಲಿಸುವ ತೀರ್ಮಾನ ಕೈಗೊಳ್ಳಲಿದೆ.

ಈ ವ್ಯಕ್ತಿಯ ನಿಜವಾದ ಹೆಸರು ಈವರೆಗೂ ತಿಳಿಯದು. ಹಾಸ್ಯಗಾರನಂತೆ ಆ ಕೋಡಂಗಿ ! ಅವನನ್ನು ನೋಡಿದರೆ ಆ ರಾಕ್ಷಸ ಹಿಟ್ಲರ್‌ನಂತೆಯೇ ಕಾಣುತ್ತಾನೆ.

ಟಿ.ವಿ. ಚಾನೆಲ್‌ನ ಮಾಲೀಕ ಫ್ಲಾರೆಂಡೊಂಕ್‌ನನ್ನು ಸಂದರ್ಶಿಸಿದಾಗ ಆತ ಹೇಳಿದ್ದಿದು : ನಮ್ಮ ಸಮಾಜದ ವೈರುಧ್ಯಗಳನ್ನು ಈ 'ಹಿಟ್ಲರ್' ಹೊರಹಾಕುತ್ತಾನೆ. ಕಲಾತ್ಮಕತೆಯ ದೃಷ್ಟಿಯಿಂದ ಅವನ ಜಿಜ್ಞಾಸಾ ಮನೋಭಾವ ಮುಖ್ಯವೆನಿಸುತ್ತದೆ. ಅವನ ನಿಜವಾದ ಹೆಸರನ್ನು ಕಟ್ಟಿಕೊಂಡು ಯಾರಿಗೆ ಏನಾಗಬೇಕಾಗಿದೆ ? ಅವನು ಹಿಟ್ಲರ್ ಎಂಬುದಷ್ಟೇ ಮುಖ್ಯ. ಅವನ ಖಾಸಗಿ ಜೀವನವು ಅವನ ಹಕ್ಕು.

* * *

ಈ ವರದಿಗಳು ಟಿ.ವಿ. ಕಂಪೆನಿಯನ್ನು ಕಂಗೆಡಿಸಿದ್ದು ನಿಜ. ಆದರೆ ಹಿಟ್ಲರ್ ಸಾಕಷ್ಟು ಪ್ರಸಿದ್ಧನಾದ. ಅದರಿಂದಾಗಿ ಊರಿನಲ್ಲಿ ಮುಕ್ತವಾಗಿ ಓಡಾಡುವುದು ಅವನಿಗೆ ಸುಲಭವಾಯಿತು. ನಾಳೆ ತಾನು ಚಾನ್ಸೆಲರಿಗೆ ಹೋಗಿ ಸೇರಿಕೊಳ್ಳುವುದು ಸುಲಭವಾಗಲಿದೆಯೆಂದು ಅವನಿಗೆ ಗೋಚರಿಸಿತು. ಮುಖ್ಯರಸ್ತೆಯಲ್ಲಿ ಒಮ್ಮೆ ನಡೆದುಹೋಗುತ್ತಿದ್ದ. ಯಾರೋ ಕೇಳಿದರು : "ಏನ್ರೀ, ನಿಮ್ಮ ರಾಜಕೀಯ ಹಿನ್ನೆಲೆ ಏನು ? ನಾಜ಼ಿ ಪಕ್ಷದೊಡನೆ ಗುರುತಿಸಿಕೊಂಡಿದ್ದೀರಾ ?" ಹಿಟ್ಲರ್ ಹೇಳಿದ : "ನನ್ನ ರಾಜಕೀಯ ಹಿನ್ನೆಲೆಯು ದೂಷಣೆಗೆ ದೂರವಾದ್ದು." ಮರುಪ್ರಶ್ನೆ ಬಂತು : "ಹಾಗಿದ್ದರೆ ನೀವೆಂದೂ ಬಲಪಂಥೀಯರಾಗಿರಲಿಲ್ಲವೆ ?" ದೊಡ್ಡ ಗಂಟಲಲ್ಲಿ ಹಿಟ್ಲರ್ ಗುಡುಗಿದ : "ಇದೇನು ನಿಮ್ಮ ಮಾತು ? ನಾನು ನಾಜ಼ಿ ಪಕ್ಷದ ಸ್ಥಾಪಕರಲ್ಲಿ ಪ್ರಮುಖ. ನನ್ನ ಸದಸ್ಯತ್ವದ ಸಂಖ್ಯೆ ೫೫೫." ಇನ್ನೊಮ್ಮೆ ದಾರಿಹೋಕನೊಬ್ಬ ಕೇಳಿದ : "ನೀವು ಹಿಟ್ಲರ್ ಎಂದು ಹೇಳಿಕೊಳ್ಳುತ್ತೀರಿ. ನೀವು ಎಂದಾದರೂ ಚುನಾವಣೆಯಲ್ಲಿ ನೈಜ ಪ್ರಜಾಪ್ರಭುತ್ವ ಮಾರ್ಗದಲ್ಲಿ ಗೆದ್ದಿದ್ದುದುಂಟೆ ?" ಅಪ್ರತಿಭನಾದ ಹಿಟ್ಲರ್ ಮಾರುತ್ತರ ಕೊಟ್ಟ : "ಒಂದು ಯುದ್ಧದಲ್ಲಿ ವಿಜಯಿಯಾದರೆ ಮೂರು ಚುನಾವಣೆಗಳನ್ನು ಗೆಲ್ಲಬಹುದು. ನನ್ನ ನೇತೃತ್ವದಲ್ಲಿ ಜರ್ಮನಿಗೆ ಉತ್ತಮ ಭವಿಷ್ಯವಿದೆ."

* * *

ಟಿ.ವಿ. ಚಾನೆಲ್‌ಗಳು ಒಂದರಮೇಲೊಂದು ಬಿದ್ದು ಹಿಟ್ಲರನನ್ನು ಪರದೆಯ ಮೇಲೆ ತರಲು ಸ್ಪರ್ಧೆಗಿಳಿದುವು. ಅವನ ಭಾಷಣಗಳು ಒಂದು ಕಡೆಯಾದರೆ ಅವನೊಡನೆ ಪ್ರಶ್ನೋತ್ತರಗಳು ಇನ್ನೊಂದು ಕಡೆ. ಹೆಲ್ಮುಟ್ ಬೆರ್‌ಟ್ಸೆಲ್ ಎಂಬಾತನ ಪ್ರಶ್ನೆ : "ಜನಾಂಗಗಳ ಬಗೆಗಿನ ನಿಮ್ಮ ತಿಳಿವು ಅಮೋಘವಾಗಿದೆ. ಹಲವು ವರ್ಷಗಳಿಂದ ನಾನು ನಾಯಿಗಳನ್ನು ಸಾಕುತ್ತಾ ಬಂದಿದ್ದೇನೆ. ನಾನೇನಾದರೂ ಹೀನತಳಿಯ ನಾಯಿಗಳನ್ನು ಸಾಕಿಬಿಟ್ಟೆನೋ ಎಂಬ ಆತಂಕ ಮೂಡಿದೆ. ದಯವಿಟ್ಟು ತಿಳಿಸಿ : ಯಾವುದು ಉತ್ತಮ ತಳಿ ಮತ್ತು ಯಾವುದು ಅಧಮ ತಳಿ ಎಂಬುದನ್ನು. ನಾಯಿ ಪ್ರಪಂಚದಲ್ಲಿ ಯಹೂದಿ ನಾಯಿಯೆಂದರೆ ಯಾವುದು ?" ಅಂತಹ ಪತ್ರ ಬಂದರೆ ಹಿಟ್ಲರ್ ಹಿಗ್ಗಿಹೋಗುತ್ತಿದ್ದ. ಚಾನ್ಸೆಲರಿ ತಲುಪಲು ಅವನ ಹಾದಿಯು ಸುಗಮಗೊಳ್ಳುತ್ತಿರುವುದರ ಸೂಚನೆಯೆಂದು ಅವನು ಬೀಗುತ್ತಿದ್ದ. ಹೀಗಿರುವಾಗ ಅವನ ಇನ್ನೊಂದು ಭಾಷಣವನ್ನು ಟಿ.ವಿ. ಚಾನೆಲ್ ಒಂದರಲ್ಲಿ ಪ್ರಸಾರ ಮಾಡಲಾಯಿತು. ಅದರಲ್ಲಿ ಅನೇಕ ವಿಷಯಗಳಿದ್ದವು. ಭಾಗಶಃ ಅದರ ಒಕ್ಕಣೆ ಇದು :

"ನನ್ನ ಬಗ್ಗೆ ಏನೇನೋ ಬರೆಯುವ ಪತ್ರಿಕೆಗಳಿವೆ. ಅವನ್ನೆಲ್ಲಾ ನಾನು ಓದುವುದಿಲ್ಲ. ನನಗೆ ಈ ನೀಚ ಪತ್ರಿಕೆಗಳ ಚಾರಿತ್ರ್ಯ ತಿಳಿದಿದೆ. ಉದಾರವಾದಿಗಳಂತೆ ಇವು ! ಬೇರೆ ದೇಶಗಳನ್ನು ಟೀಕಿಸುವ ಬದಲು ನನ್ನನ್ನು ಟೀಕಿಸಲಾಗುತ್ತಿದೆ. ನಾನು ಯಾರೆಂದು ಹೇಳಬೇಕಂತೆ. ಆ ದರಿದ್ರ ಪತ್ರಿಕೆಗೆ ನಾನು ಉತ್ತರ ಕೊಡಹೋಗುವುದಿಲ್ಲ. ಯಾರೂ ಆ ಪತ್ರಿಕೆಯನ್ನು ಓದುವುದಿಲ್ಲವೆಂದು ನನಗೆ ತಿಳಿದಿದೆ. ಅದನ್ನು ಲಕ್ಷಗಟ್ಟಲೆ ಜನ ಕೊಳ್ಳುತ್ತಾರೆ, ಆದರೆ ಯಾರೂ ಓದುವುದಿಲ್ಲ. ಇನ್ನೊಂದು ಪತ್ರಿಕೆ ಇದೆ. ಯುದ್ಧದಲ್ಲಿ ಕಾಲು ಕಳೆದುಕೊಂಡ ಒಬ್ಬ ತ್ಯಾಗಿ ಅದನ್ನು ನಡೆಸುತ್ತಾನೆ. ... ನಮ್ಮ ಸಂಯುಕ್ತ ಜರ್ಮನಿ ಹೇಗಾಗಿದೆ ನೋಡಿ : ಅಲ್ಸೇಸ್ ಇಲ್ಲ, ಲೊರೇನ್ ಇಲ್ಲ. ಆಸ್ಟ್ರಿಯ, ಪೋಲೆಂಡ್, ಎಲ್ಲಾ ಲುಪ್ತವಾಗಿ ಹೋಗಿವೆ. ...ಇವೆಲ್ಲಾ ಇಲ್ಲದ ಜರ್ಮನಿ ಜರ್ಮನಿಯೇ ?"

* * *

ದಿನದಿಂದ ದಿನಕ್ಕೆ ಹಿಟ್ಲರನ ಕಾಂತಿ ಹರಡತೊಡಗಿತ್ತು. ಇಲ್ಲದಿದ್ದರೂ ಅವನು ಹಾಗೆ ಭಾವಿಸಿಕೊಂಡಿದ್ದ. ಒಂದು ಸಂಜೆ ಲೋಕಾಭಿರಾಮವಾಗಿ ಊರಮಧ್ಯೆ ಉಲ್ಲಾಸದಿಂದ ನಡೆದುಹೋಗುತ್ತಿದ್ದ. ಒಂದು ದೃಶ್ಯವು ಅವನ ಉಲ್ಲಾಸವನ್ನು ಆಕಾಶದೆತ್ತರಕ್ಕೆ ಏರಿಸಿಬಿಟ್ಟಿತು. ಹತ್ತಾರು ಯುವಕರ ಗುಂಪು. ತನ್ನದೇ ನಾಜ಼ಿ ಯುವಕ ಹಿಂಸಾ ಪಡೆಯ ಪೋಷಾಕು. ತನ್ನದೇ ಆವಿಷ್ಕಾರವಾಗಿದ್ದ ನಾಜ಼ಿ ಸೆಲ್ಯೂಟ್. ಜರ್ಮನಿಯ ಭವಿಷ್ಯ ಮತ್ತು ತಾನು ಚಾನ್ಸೆಲರಿಗೆ ಹೋಗುವುದು ಎರಡೂ ಖಚಿತವಾಯಿತು ಎಂದು ಹಿಟ್ಲರ್ ಒಳೊಳಗೇ ಕುಣಿದಾಡಿದ. ನಿಧಾನವಾಗಿ ರಾಜಯೋಗ್ಯ ಹಸನ್ಮುಖದಿಂದ ಅವರತ್ತ ಹೋದ. ಯುವಕರು ಗಾಢವಾದ ಚರ್ಚೆಯಲ್ಲಿ ನಿರತರಾಗಿದ್ದರು. ಅವರೂ ಜರ್ಮನಿಯ ಭವಿಷ್ಯದ ಬಗೆಗೇ ಮಾತನಾಡಿಕೊಳ್ಳುತ್ತಿದ್ದರು. ಸಂತೃಪ್ತಿಯಿಂದ ಅವರ ಬಳಿ ಹೋಗಿ ನಿಂತ ಹಿಟ್ಲರ್. ಅವನಿಗೆ ಕಸಿವಿಸಿ ಉಂಟಾಯಿತು. ತಮ್ಮ ಫ್ಯೂರರ್‌ಗೆ ಈ ಯುವಪಡೆ ನಾಜ಼ಿ ಸೆಲ್ಯೂಟ್ ನೀಡುವ ಸೂಚನೆಯೇ ಕಾಣಲಿಲ್ಲ. ಹಿಟ್ಲರ್‌ಗೆ ಭಾರಿ ವ್ಯಸನವಾಯಿತು. ತನ್ನನ್ನು ದೂರಕ್ಕೆ ಸರಿಸಿ ಇವರು ಭವಿಷ್ಯ ಕಟ್ಟುತ್ತಾರೆಯೆ ? ಹಾಗಿದ್ದರೆ ಭವಿಷ್ಯವು ಕರಾಳವಾಗಿರುತ್ತದೆ; ವಿಸ್ತೃತ ಜರ್ಮನಿಯ ಸಾಮ್ರಾಜ್ಯವನ್ನು ಕಾಗದದ ಮೇಲಷ್ಟೇ ಕಾಣುತ್ತಾರೆ ಇವರು, ಇತ್ಯಾದಿಯಾಗಿ ಗುಣಾಕಾರ–ಭಾಗಾಕಾರ ಮಾಡುತ್ತಿದ್ದ ಹಿಟ್ಲರ್. ಏನನಿಸಿತೋ ಏನೋ, ಯುವ ಹಿಂಸಾಪಡೆಯ ಒಬ್ಬನು ಹಿಟ್ಲರನ ಮುಂದೆ ಬಂದು ನಿಂತ. ಹಿಟ್ಲರನ ಆಸೆ ಚಿಗುರಿತು. ಇವರ ಬೆನ್ನಮೇಲೆ ಸವಾರಿ ಮಾಡುತ್ತಾ ಚಾನ್ಸೆಲರಿಗೆ ತಲುಪುತ್ತೇನೆಂದು ಮನಸ್ಸಿನಲ್ಲೇ ಮಂಡಿಗೆ ತಿನ್ನಲಾರಂಭಿಸಿದ. ತುಸುಹೊತ್ತು ಕಳೆಯಿತು. ಆ ವೇಳೆಗೆ ಯುವಪಡೆಯ ಇತರರೂ ಬಂದು ಹಿಟ್ಲರ್‌ನನ್ನು ಸುತ್ತುವರಿದು ನಿಂತರು. ಮೊದಲು ಬಂದಿದ್ದ ಯುವನಾಯಕ ಕೆಂಡ ಕಾರುತ್ತಾ ಕರ್ಕಶ ಧ್ವನಿಯಲ್ಲಿ ಮಾತನಾಡಲಾರಂಭಿಸಿದ : "ಇವನಿದ್ದಾನೆ ನೋಡಿ, ನಮ್ಮ ನಾಜ಼ಿ ಪಕ್ಷದ ಶತ್ರು ಇವನು. ಎಲ್ಲ ಟಿ.ವಿ. ಚಾನೆಲ್‌ಗಳಲ್ಲೂ ಇವನೇ ವಿಜೃಂಭಿಸುತ್ತಿದ್ದಾನೆ. ನಮ್ಮ ಮಹಾನ್ ನಾಯಕ ಹಿಟ್ಲರ್‌ನಂತೆ ವೇಷ ಹಾಕಿಕೊಂಡು ಫ್ಯೂರರ್‌ಗೆ ಅತೀವ ಅವಮಾನ ಮಾಡುತ್ತಿದ್ದಾನೆ. ಆ ದೂರದರ್ಶಿ ದೇಶಭಕ್ತನ ಕಾಲುಧೂಳಿಗೆ ಸಹ ಸಮನಲ್ಲದ ಇವನು ಫ್ಯೂರರ್‌ನಂತೆ ಮಾತನಾಡುತ್ತಾನೆ, ಅವರದೇ ದನಿಯನ್ನು ಅನುಕರಿಸುತ್ತಾನೆ. ಸಂಪತ್ತು ಸೂರೆಮಾಡಲು ಇವನ ಕುತಂತ್ರ ಇದು. ನಮ್ಮ ಫ್ಯೂರರ್ ಅಂದರೆ ಏನೆಂದು ತಿಳಿದುಕೊಂಡಿದ್ದಾನೆ ಇವನು ? ಇವನ ನಡತೆ ಹೇಸಿಗೆಯುಂಟುಮಾಡುತ್ತದೆ. ಬನ್ನಿ, ನಮ್ಮ ತೋಳ್ಬಲವೇ ನಮ್ಮ ಹಿರಿಮೆ. ಅದರ ರುಚಿ ಇವನಿಗೆ ತೋರಿಸೋಣ. ಜಗತ್ತಿಗೆಲ್ಲಾ ಫ್ಯೂರರ್ ಒಬ್ಬನೇ. ಆ ಮಹಾತ್ಮನನ್ನು ಅನುಕರಿಸಿ ಯುವಕರ ಹಾದಿ ತಪ್ಪಿಸುತ್ತಿದ್ದಾನೆ. ಫ್ಯೂರರ್‌ಗೆ ಜಯವಾಗಲಿ."

ಏನು ನಡೆಯುತ್ತಿದೆಯೆಂದು ತಿಳಿಯಲು ಹಿಟ್ಲರ್‌ಗೆ ಸಮಯವೇ ದೊರಕಲಿಲ್ಲ. ಯುವ ಹಿಂಸಾಪಡೆಯವರ ಥಳಿತ ಅಥವಾ ಗೂಸಾ ಹೇರಳವಾಗಿ ಹಿಟ್ಲರನ ಮೈಮೇಲೆಲ್ಲಾ ಧಾರಾಳವಾಗಿ ನಲಿದಾಡಿದುವು. "ನಾನು ಹುಟ್ಟುಹಾಕಿದ ಯುವ ಹಿಂಸಾಪಡೆ ನನಗೇ ಊನ ಆಯಿತಲ್ಲ" ಎಂದು ಒಳಗೆ ನೊಂದು, ಹೊರಗೆ ಚೀರಾಡಿದ ಹಿಟ್ಲರ್. ಭವ್ಯ ಜರ್ಮನಿಯ ಸಾಮ್ರಾಜ್ಯವು ಅವನ ಮನಸ್ಸಿನಲ್ಲಿಯೇ ಉಳಿಯಿತು, ಬರ್ಲಿನ್ನಿನ ಚಾನ್ಸೆಲರಿ ಕಡೆಗಿನ ಹಾದಿ ಮುಚ್ಚಿಹೋಯಿತು. ನನಗೆ ನಾನೇ ಗುಂಡಿಟ್ಟು ಕೊಂದುಕೊಂಡ ನಾನು ಮೇಲೆದ್ದು ಮತ್ತೆ ಹೀಗೆಲ್ಲಾ ಬರಬಾರದಿತ್ತು ಎಂದು ತನಗೆ ತಾನೇ ಹೇಳಿಕೊಳ್ಳುತ್ತಿದ್ದುದು ಸುತ್ತಲೂ ಬೃಹತ್ತಾಗಿ ರಣರಣಿಸುತ್ತಿತ್ತು.

**ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್, ೨೨/೧,
೪ನೇ ಕ್ರಾಸ್, ಬನಶಂಕರಿ ೩ನೇ ಹಂತ ಬೆಂಗಳೂರು – ೮೫

# ಕ್ಷ–ಕಿರಣ

– ಸಾನ್ವಿ ಪಿ.



ಯಡ್ಡಿ, ಸಿದ್ದು
ಡೈರಿ ಸಿಡಿ ಫೈಟಿಂಗ್




ಬೇಲೂರು ದೇವಸ್ಥಾನದಲ್ಲಿ
ಶಿವನ ಮೂರ್ತಿ
ಏ ಶಿವ... ನಡೆಯಾಚೆ, ಇದು ವಿಷ್ಣುವಿನ ಸೈಟ್




ತಮಿಳುನಾಡು ಕೆರೆಯಂಗಳದಲ್ಲಿ
ಮೋದಿ ಮೀನುಗಾರಿಕೆ

◆ ಡಾ॥ ಟಿ. ಆರ್. ಚಂದ್ರಶೇಖರ ◆







# ಅಮಾನ್ಯೀಕರಣದ ಅದ್ವಾನವು, ಜಿಡಿಪಿಯ ಜಗ್ಗಾಟವು

ಇಂದು ದೇಶದ ಆಳುವ ವರ್ಗವು ೨೦೧೬–೧೭ನೆಯ ಸಾಲಿನ ಆರ್ಥಿಕತೆಯ ಜಿಡಿಪಿಯಲ್ಲಿ ಏರಿಕೆಯಾಗುತ್ತದೆ ಎಂದು ಡಣಾ ಡಂಗೂರ ಬಾರಿಸುತ್ತಿದ್ದರೆ ವಿರೋಧ ಪಕ್ಷಗಳು ಅದರಲ್ಲಿ ಕುಸಿತ ಉಂಟಾಗುತ್ತದೆ ಎಂದು ಹಾರಾಡುತ್ತಿವೆ. ಅಮಾನ್ಯೀಕರಣದಿಂದ ಜಿಡಿಪಿ ಬೆಳವಣಿಗೆ ಮೇಲೆ ಯಾವುದೇ ದುಷ್ಪರಿಣಾಮ ಉಂಟಾಗಿಲ್ಲ ಎಂಬುದನ್ನು ಸಾಬೀತುಪಡಿಸುವುದಕ್ಕೆ ಸರ್ಕಾರ ತಿಣುಕಾಡುತ್ತಿದ್ದರೆ ವಿರೋಧ ಪಕ್ಷಗಳು ಅದರಿಂದ ಕುಸಿತ ಉಂಟಾಗುತ್ತಿರುವುದನ್ನು ಸಾಬೀತು ಪಡಿಸಲು ಹೆಣಗಾಡುತ್ತಿವೆ. ಈ ಮಧ್ಯೆ ರೇಟಿಂಗ್ ಸಂಸ್ಥೆಗಳು, ವಿಶ್ವ ಬ್ಯಾಂಕು, ನೀತಿ ಆಯೋಗ ಮತ್ತು ಸಿಎಮ್‌ಐಈ (ಸೆಂಟರ್ ಫಾರ್ ಮಾನಿಟರಿಂಗ್ ದಿ ಇಂಡಿಯನ್ ಎಕಾನಮಿ), ಐಎಮ್‌ಎಫ್ (ಇಂಟರ್ ನ್ಯಾಷನಲ್ ಮಾನಿಟರಿ ಫಂಡ್) ಮುಂತಾದವು ಭಾರತದ ಜಿಡಿಪಿಯ ಅಂದಾಜು ಬೆಳವಣಿಗೆ ಬಗ್ಗೆ ತಮ್ಮದೇ ಅಂಕಿಸಂಖ್ಯೆಗಳನ್ನು ಬಿಡುಗಡೆ ಮಾಡುತ್ತಿವೆ. ಡಾ॥ ಮನಮೋಹನ್ ಸಿಂಗ್ ಅವರು ಅಮಾನ್ಯೀಕರಣವನ್ನು 'ಸ್ಮಾರಕಾರ್ಥ ನಿರ್ವಹಣಾ ವೈಫಲ್ಯ' ಎಂದು ಟೀಕಿಸುತ್ತಾ ೨೦೧೬–೧೭ನೆಯ ಸಾಲಿನಲ್ಲಿ ಜಿಡಿಪಿಯಲ್ಲಿ ಶೇ. ೧ರಿಂದ ಶೇ. ೨ರಷ್ಟು ಕಡಿತ ಉಂಟಾಗುತ್ತದೆ ಎಂದು ಹೇಳುತ್ತಿದ್ದಾರೆ. ಈ ಕ್ರಮವನ್ನು ಪ್ರಸಿದ್ಧ ಅರ್ಥಶಾಸ್ತ್ರಜ್ಞ ಕೌಶಿಕ್ ಬಸು ಅವರು 'ಒಳ್ಳೆಯ ಅರ್ಥಶಾಸ್ತ್ರವಲ್ಲ' ಎಂದು ಟೀಕಿಸಿದ್ದಾರೆ. ಭಾರತದ ಮೊಟ್ಟಮೊದಲನೆಯ ಸಂಖ್ಯಾಶಾಸ್ತ್ರೀಯ ಅಧಿಕಾರಿ ಡಾ॥ ಪ್ರಣಬ್ ಸೇನ್ ಅವರು ಇದನ್ನು 'ಆರ್ಥಿಕ ಅನಾಹುತ' ಎಂದು ಕರೆದಿದ್ದಾರೆ. ನೀತಿ ಆಯೋಗವು ೨೦೧೬–೧೭ರಲ್ಲಿ ಜಿಡಿಪಿ ಬೆಳವಣಿಗೆ ಪ್ರಮಾಣ ಶೇ. ೮ರಷ್ಟಾಗುತ್ತದೆ ಎಂದು ಕಳೆದ ಒಂದು ವರ್ಷದಿಂದ ವೀರಾವೇಷದಿಂದ ಘೋಷಿಸಿಕೊಂಡು ಬರುತ್ತಿದೆ. ಸಿಎಮ್‌ಐಈ ಸಂಸ್ಥೆಯು ೨೦೧೬–೧೭ರ ಜಿಡಿಪಿಯ ಬೆಳವಣಿಗೆ ಪ್ರಮಾಣ ಶೇ. ೬ರಷ್ಟಾಗುತ್ತದೆ ಮತ್ತು ಮುಂದೆ ನಾಲ್ಕೈದು ವರ್ಷ ಅದು ಅದೇ ಪ್ರಮಾಣದಲ್ಲಿರುತ್ತದೆ ಎಂಬ ಅಂದಾಜು ಮಾಡಿದೆ. ಇದನ್ನು ಸಮರ್ಥಿಸುವಂತೆ ಐಎಮ್‌ಎಫ್ ಕೂಡ ಭಾರತದ ಜಿಡಿಪಿ ಬೆಳವಣಿಗೆ ಪ್ರಮಾಣ ೨೦೧೬–೧೭ರಲ್ಲಿ ಶೇ. ೬.೬ರಷ್ಟಾಗುತ್ತದೆ ಎಂದು ಅಂದಾಜು ಮಾಡಿದೆ. ಅಮಾನ್ಯೀಕರಣದ ದುಷ್ಪರಿಣಾಮವು ೨೦೧೬–೧೭ರ ನಂತರವೂ ಮುಂದುವರಿಯುತ್ತದೆ ಎಂದು ಸಿಎಮ್‌ಐಈನ ಮುನ್ನಂದಾಜನ್ನು ಐಎಮ್‌ಎಫ್ ಗಟ್ಟಿಗೊಳಿಸಿದೆ. ಅಮಾನ್ಯೀಕರಣವಿಲ್ಲದಿದ್ದರೆ ನಮ್ಮ ಜಿಡಿಪಿಯ ಬೆಳವಣಿಗೆ ಪ್ರಮಾಣ ೨೦೧೬–೧೭ರಲ್ಲಿ ಶೇ. ೭.೫ರಷ್ಟಿರುತ್ತಿತ್ತು. ಕರಣ್ ಥಾಪರ್‌ಗೆ ನೀಡಿದ ಸಂದರ್ಶನದಲ್ಲಿ ನೊಬೆಲ್ ಪ್ರಶಸ್ತಿ ವಿಜೇತ ಅಮರ್ತ್ಯ ಸೇನ್ ಇದರ ಬಗ್ಗೆ ಮಾತನಾಡುತ್ತಾ 'ಅಮಾನ್ಯೀಕರಣದಿಂದ ಜಿಡಿಪಿಯ ಮೇಲೆ ಉಂಟಾಗುವ ಪರಿಣಾಮ ಪೂರಕವಾಗಿರುತ್ತದೋ ಅಥವಾ ಮಾರಕವಾಗಿರುತ್ತದೋ ಅನ್ನುವುದು ನನಗೆ ಮುಖ್ಯವಲ್ಲ, ಅದರಿಂದ ಜನರ ಬದುಕು ಏನಾಗಿದೆ ಅನ್ನುವುದು ಮುಖ್ಯ' ಎಂದು ಸರಿಯಾಗಿ ಹೇಳಿದ್ದಾರೆ. ಬಹಳ ಹಿಂದಿನಿಂದಲೂ ವಾದ ಮಾಡಿಕೊಂಡು ಬಂದಿರುವಂತೆ ಅಭಿವೃದ್ಧಿಯಲ್ಲಿ ಜನರ ಬದುಕಿನ ಸಮೃದ್ಧತೆಯು ಮುಖ್ಯವೇ ವಿನಾ ಆರ್ಥಿಕ ಸಮೃದ್ಧತೆಯಲ್ಲ ಎಂಬುದನ್ನು ಅಮಾನ್ಯೀಕರಣದ ಸಂದರ್ಭದಲ್ಲಿಯೂ ಅವರು ಪುನರುಚ್ಚರಿಸುತ್ತಿದ್ದಾರೆ. ಇಂದು ಸ್ಪಷ್ಟವಾಗಿರುವಂತೆ ಅಮಾನ್ಯೀಕರಣದಿಂದ ಜನರ ಬದುಕು ಮೂರಾಬಟ್ಟೆಯಾಗಿದೆ. ಅಸಂಘಟಿತ ವಲಯದಲ್ಲಿ ಆರ್ಥಿಕ ಚಟುವಟಿಕೆಗಳು ಸ್ತಬ್ಧವಾಗಿವೆ. ಇದನ್ನು ಜಿಡಿಪಿ ಏರಿಕೆಯಿಂದ ಸರಿಪಡಿಸುವುದು ಸಾಧ್ಯವಿಲ್ಲ. ಅಮಾನ್ಯೀಕರಣದ ನಿರ್ವಹಣೆಯು ಅದ್ವಾನದಿಂದ ಕೂಡಿತ್ತು ಎಂಬುದು ಇಂದು ಸ್ಪಷ್ಟವಾಗಿದೆ. ಜಿಡಿಪಿಯ ಬೆಳವಣಿಗೆ ಬಗ್ಗೆ ಏನೆಲ್ಲ ಜಗ್ಗಾಟ ಮಾಡಿದರೂ ಅದು ಕುಸಿದಿರುವುದಕ್ಕೆ ಒಂದಕ್ಕಿಂತ ಹೆಚ್ಚು ಪುರಾವೆಗಳು ದೊರೆಯುತ್ತಿವೆ.

ಈ ಅಮಾನ್ಯೀಕರಣ ಕ್ರಮವನ್ನು ತರಾತುರಿಯಲ್ಲಿ ಜಾರಿಗೆ ತರಲಾಯಿತು ಎಂಬುದು ಇದೀಗ

**ಯುವ ಜನಾಂಗವು ನಗದುರಹಿತ ಆರ್ಥಿಕ ಚಟುವಟಿಕೆಗಳನ್ನು ರೂಢಿಸಿಕೊಳ್ಳಬೇಕು ಎಂದು ನಮ್ಮ ಪ್ರಧಾನ ಮಂತ್ರಿ ಅವರು ಕರೆ ನೀಡುತ್ತಿದ್ದಾರೆ. ಆದರೆ ಗ್ರಾಮೀಣ ಪ್ರದೇಶದಲ್ಲಿ ಡಿಜಿಟಲ್ ತಂತ್ರಜ್ಞಾನ ಬಳಸಲು ಅಗತ್ಯವಾದ ಮೂಲ ಸೌಲಭ್ಯ ಇಲ್ಲದಿರುವುದರ ಬಗ್ಗೆ, ಎಟಿಎಮ್‌ಗಳ ಕೊರತೆಯ ಬಗ್ಗೆ ಅವರು ಮಾತನಾಡುತ್ತಿಲ್ಲ. ವಿಶ್ವಬ್ಯಾಂಕಿನ ಒಂದು ವರದಿಯ ಪ್ರಕಾರ ಭಾರತದಲ್ಲಿ ೧೫ ವರ್ಷಕ್ಕೂ ಹೆಚ್ಚಿನ ವಯೋಮಾನದ ಜನರಲ್ಲಿ ಬ್ಯಾಂಕ್ ಖಾತೆ ಬಳಸುತ್ತಿರುವವರ ಪ್ರಮಾಣ ಕೇವಲ ಶೇ. ೩೫. ಇವರಲ್ಲಿ ಡೆಬಿಟ್ ಕಾರ್ಡುಗಳನ್ನು ಬಳಸುವವರ ಪ್ರಮಾಣ ಶೇ. ೧೦ರಷ್ಟಾಗಿದ್ದರೆ ಕ್ರೆಡಿಟ್ ಕಾರ್ಡುಗಳನ್ನು ಬಳಸುವವರ ಪ್ರಮಾಣ ಕೇವಲ ಶೇ. ೩. ತಜ್ಞರು ಅಭಿಪ್ರಾಯಪಡುತ್ತಿರುವಂತೆ ಇಂದು ಸರ್ಕಾರದ ನೀತಿಗಳು ಐಷಾರಾಮಿಗಳ ಐಷಾರಾಮವನ್ನು ಹೆಚ್ಚಿಸುವುದಕ್ಕೆ ಪೂರಕವಾಗಿವೆ ಮತ್ತು ಅವು ದುಸ್ಥಿತಿಯಲ್ಲಿರುವವರ ದುಸ್ಥಿತಿಯನ್ನು ಉಲ್ಬಣಗೊಳಿಸುತ್ತಿವೆ. ಈ ಪ್ರಕ್ರಿಯೆಯನ್ನು ಅಮಾನ್ಯೀಕರಣವು ಗಟ್ಟಿಗೊಳಿಸುತ್ತಿದೆ.**

ಖಚಿತವಾಗಿದೆ. ನವೆಂಬರ್ ೦೭, ೨೦೧೬ರಂದು ಕೇಂದ್ರ ಸರ್ಕಾರವು ರಿಸರ್ವ್ ಬ್ಯಾಂಕಿಗೆ ರೂ. ೫೦೦ ಮತ್ತು ರೂ. ೧೦೦೦ ನೋಟುಗಳ ನಿಷೇಧದ ಬಗ್ಗೆ ಸಲಹೆ ನೀಡಿದೆ. ಮರುದಿನ ಸಂಜೆ ೫.೩೦ಕ್ಕೆ ಆರ್‌ಬಿಐ ತನ್ನ ಆಡಳಿತ ಮಂಡಳಿ ಸಭೆ ಕರೆದು ಅದನ್ನು ಅನುಮೋದಿಸಿದೆ. ಇದಾದ ಕೆಲವೇ ಗಂಟೆಗಳ ನಂತರ ರಾತ್ರಿ ಸಚಿವ ಸಂಪುಟ ಸಭೆಯನ್ನು ಅರ್ಧಕ್ಕೆ ನಿಲ್ಲಿಸಿ ನಮ್ಮ ಪ್ರಧಾನ ಮಂತ್ರಿ ಅವರು ಶಾಸನಾತ್ಮಕ ರೂ. ೫೦೦ ಮತ್ತು ರೂ. ೧೦೦೦ ನೋಟುಗಳ ನಿಷೇಧವನ್ನು ಘೋಷಿಸಿದರು. ಹೀಗೆ ಘೋಷಿಸುವಾಗ ಅದರ ಉದ್ದೇಶ ಕಪ್ಪುಹಣವನ್ನು ನಿಗ್ರಹಿಸುವುದು ಎಂದು ಹೇಳಲಾಗಿತ್ತು. ಅಂದು ನಗದುರಹಿತ ವ್ಯವಹಾರದ ಬಗ್ಗೆಯಾಗಲಿ ಅಥವಾ ಡಿಜಿಟಲೈಸೇಷನ್ ಬಗ್ಗೆಯಾಗಲಿ ಮಾತನಾಡಿರಲಿಲ್ಲ. ಈಗ ಕಪ್ಪುಹಣದ ಬಗ್ಗೆ ಮೌನವಹಿಸಿ ನಗದುರಹಿತ ಆರ್ಥಿಕತೆಯ ಬಗ್ಗೆ ಒತ್ತು ನೀಡಲಾಗುತ್ತಿದೆ. ಅಮಾನ್ಯೀಕರಣದ ಬಗ್ಗೆ ಮಾತನಾಡಲು ಇಂದು ಸರ್ಕಾರ ಮತ್ತು ರಿಸರ್ವ್ ಬ್ಯಾಂಕು ಹಿಂಜರಿಯುತ್ತಿವೆ. ಕಳೆದ ೬೦–೬೫ ದಿನಗಳಲ್ಲಿ ಅಮಾನ್ಯೀಕರಣದಿಂದಾಗಿ ಜನರು ಏನೆಲ್ಲ ಕಷ್ಟಗಳನ್ನು, ನೋವನ್ನು, ಬವಣೆಯನ್ನು ಅನುಭವಿಸುತ್ತಿದ್ದಾರೆ ಎಂಬುದನ್ನು ವಿವರಿಸುವ ಅಗತ್ಯವಿಲ್ಲ. ಬ್ಯಾಂಕುಗಳ ಮುಂದೆ, ಎಟಿಎಮ್‌ಗಳ ಮುಂದೆ ತಮ್ಮದೇ ಹಣವನ್ನು ಪಡೆಯಲು ಜನರು ಸಾಲುಗಟ್ಟಿ ನಿಲ್ಲುವುದು ಇಂದಿಗೂ ತಪ್ಪಿಲ್ಲ. ಜನರ ನೋವಿಗೆ ಸುಣ್ಣ ಸುರಿಯುವಂತೆ ದೇಶಾದ್ಯಂತ 'ನಿಮ್ಮ ಹಣ ಬ್ಯಾಂಕಿನಲ್ಲಿ ಸುರಕ್ಷಿತವಾಗಿದೆ' ಎಂಬ ಜಾಹೀರಾತನ್ನು ಸರ್ಕಾರ ನೀಡುತ್ತಿದೆ. ಸುಮಾರು ರೂ. ೧೪.೫ ಲಕ್ಷ ಕೋಟಿ ಮೌಲ್ಯದ ನೋಟುಗಳನ್ನು ಅಮಾನ್ಯೀಕರಿಸಿ ಆರ್ಥಿಕತೆಯಲ್ಲಿ ಅಲ್ಲೋಲ–ಕಲ್ಲೋಲವನ್ನು ಉಂಟುಮಾಡಲಾಗಿದೆ. ಇಂದಿಗೂ ರಿಸರ್ವ್ ಬ್ಯಾಂಕಿಗೆ ಅಮಾನ್ಯೀಕರಿಸಿದ ನೋಟುಗಳಿಗೆ ಪ್ರತಿಯಾಗಿ ಆ ಮೊತ್ತದ ಅರ್ಧದಷ್ಟು ಹೊಸ ನೋಟುಗಳನ್ನು ಆರ್ಥಿಕತೆಗೆ ಸರಬರಾಜು ಮಾಡುವುದು ಸಾಧ್ಯವಾಗಿಲ್ಲ. ಅಮಾನ್ಯೀಕರಿಸಿದ ನಂತರ ೬೦ ದಿನಗಳಾದರೂ ಸರ್ಕಾರವಾಗಲಿ ಅಥವಾ ರಿಸರ್ವ್ ಬ್ಯಾಂಕಾಗಲಿ ಎಷ್ಟು ಕಪ್ಪುಹಣವನ್ನು ವಶಪಡಿಸಿಕೊಳ್ಳಲಾಗಿದೆ ಎಂಬುದರ ಅಂಕಿಸಂಖ್ಯೆಯ ವಿವರಗಳನ್ನು ನೀಡಲು ಸಿದ್ಧವಿಲ್ಲ. ಪತ್ರಿಕಾಗೋಷ್ಠಿಯಲ್ಲಿ ಅದರ ಬಗ್ಗೆ ಪ್ರಶ್ನೆ ಕೇಳಿದಾಗಲೆಲ್ಲ ಉರ್ಜಿತ್ ಪಟೇಲ್ ಅವರು ಪೇಲವ ಮುಖ ಮಾಡಿಕೊಂಡು ಆ ಪ್ರಶ್ನೆಗಳಿಗೆ ಉತ್ತರ ನೀಡಲು ತಮ್ಮ ಸಹ ಗವರ್ನರುಗಳಿಗೆ ಕೇಳಿಕೊಳ್ಳುತ್ತಿದ್ದುದು ಹಾಸ್ಯಾಸ್ಪದವಾಗಿ ಕಾಣುತ್ತಿತ್ತು. ಇದುವರೆವಿಗೂ ಆತ್ಮವಿಶ್ವಾಸದಿಂದ ಅವರು ಸಾರ್ವಜನಿಕರ ಅಳಲಿಗೆ ಸ್ಪಂದಿಸಿಲ್ಲ. ಅವರ ಮೌನವೇ ಅಮಾನ್ಯೀಕರಣದ ವೈಫಲ್ಯಕ್ಕೆ ಸಾಕ್ಷಿಯಾಗಿದೆ. ಯಾರೂ ಅನುಮಾನಪಡದಿದ್ದರೂ ಅವರು ಜನರ ಹಣವು ಬ್ಯಾಂಕುಗಳಲ್ಲಿ ಸುರಕ್ಷಿತವಾಗಿದೆ ಎಂದು ಹೇಳುತ್ತಿದ್ದಾರೆ. ಜನರ ಹಣ ಬ್ಯಾಂಕುಗಳಲ್ಲಿ ಸುರಕ್ಷಿತವಾಗಿಲ್ಲ ಎಂದು ಇವರಿಗೆ ಯಾರು ಹೇಳಿದ್ದರೋ ಎಂಬುದು ಅವರಿಗೆ ಗೊತ್ತು!! ಈ ಮೂಲಕ ಅವರು ತಮ್ಮ ಅಪರಾಧಿ ಮನೋಭಾವವನ್ನು ತೆರೆದಿಟ್ಟಿದ್ದಾರೆ. 'ನಿಮ್ಮ ಹಣ ಬ್ಯಾಂಕುಗಳಲ್ಲಿ ಸುರಕ್ಷಿತವಾಗಿದೆ. ಅದು ನಿಮ್ಮದೇ ಹಣ' ಎಂದು ಸನ್ನಿ ಬಡಿದವರಂತೆ ಉರ್ಜಿತ್ ಪಟೇಲ್ ಬಡಬಡಿಸುತ್ತಿದ್ದಾರೆ.

**ಜಿಡಿಪಿ ವ್ಯಸನ**

ಜಗದೀಶ್ ಭಗವತಿ (ಕೊಲಂಬಿಯ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿರುವ ಇವರು ಖ್ಯಾತ ಅರ್ಥಶಾಸ್ತ್ರಜ್ಞರು), ಅರವಿಂದ್ ಪಣಗಾರಿಯ (ನೀತಿ ಆಯೋಗದ ಉಪಾಧ್ಯಕ್ಷರು), ಅರವಿಂದ ಸುಬ್ರಮಣಿಯಮ್ (ಹಣಕಾಸು ಸಚಿವಾಲಯದ ಪ್ರಧಾನ ಸಲಹೆಗಾರರು), ವಿವೇಕ್ ಡೆಬ್ರ ರಾಯ್ (ನೀತಿ ಆಯೋಗದ ಸದಸ್ಯ), ಅರುಣ್ ಜೇಟ್ಲಿ (ಕೇಂದ್ರ ಹಣಕಾಸು ಸಚಿವರು) ಮುಂತಾದವರನ್ನು 'ಜಿಡಿಪಿ ವ್ಯಸನಿಗಳು' ಎಂದು ಕರೆಯಬಹುದು. ಏಕೆಂದರೆ ಇವರೆಲ್ಲ ಜಿಡಿಪಿಯ ಬೆಳವಣಿಗೆಯೇ ಅಭಿವೃದ್ಧಿ ಎಂದು ನಂಬಿದವರು ಮತ್ತು ಅದರ ಬಗ್ಗೆ ಜಪ ಮಾಡುತ್ತಿರುವವರು. ಕಳೆದ ಲೋಕಸಭಾ ಚುನಾವಣೆಯ ಸಂದರ್ಭದಲ್ಲಿ ಆರ್ಥಿಕ ಸಮೃದ್ಧತೆ ಸಮರ್ಥಕರಾಗಿದ್ದ ಜಗದೀಶ್ ಭಗವತಿ ಅವರು ಜನರ ಬದುಕಿನ ಸಮೃದ್ಧತೆಯನ್ನು ಪ್ರತಿಪಾದಿಸುವ ಅಮರ್ತ್ಯ ಸೇನ್ ಜೊತೆಯಲ್ಲಿ ಕದನವನ್ನೇ ನಡೆಸಿದರು. ಅವರ ಪಟ್ಟ ಶಿಷ್ಯರಾಗಿರುವ ಪಣಗಾರಿಯ ಅವರು ಭಾರತದ ಜಿಡಿಪಿಯ ಬೆಳವಣಿಗೆ ಪ್ರಮಾಣ ವಾರ್ಷಿಕ ಶೇ. ೬ರಿಂದ ಶೇ. ೮ರಷ್ಟಾದರೆ ಮುಂದಿನ ೧೫ ವರ್ಷಗಳಲ್ಲಿ ಅದರ ಜಿಡಿಪಿಯು ೬ರಿಂದ ೮ ಟ್ರಿಲಿಯನ್ ಡಾಲರ್ ಆಗುತ್ತದೆ ಎಂದು ಭವಿಷ್ಯ ನುಡಿಯುತ್ತಿದ್ದಾರೆ. ಒಂದು ಟ್ರಿಲಿಯನ್ ರೂಪಾಯಿ ಅಂದರೆ ಒಂದು ಲಕ್ಷ ಕೋಟಿ ರೂಪಾಯಿಗಳು. ಅಂದರೆ ಇದು ಒಂದರ ಮುಂದೆ ೧೨ ಸೊನ್ನೆಗಳ ಮೌಲ್ಯಕ್ಕೆ ಸಮ (೧,೦೦೦,೦೦೦,೦೦೦,೦೦೦). ಜನರ ಬದುಕು, ಅವರ ಜೀವನಾಧಾರ, ಆಹಾರ, ಶಿಕ್ಷಣ, ಆರೋಗ್ಯ – ಮುಂತಾದವುಗಳಿಗಿಂತ ಜಿಡಿಪಿ ವ್ಯಸನಿಗಳಿಗೆ ವರಮಾನವೇ ಸಕಲವೂ ಆಗಿಬಿಟ್ಟಿದೆ. ಇವರು ಉಳ್ಳವರ ಆರ್ಥಿಕತೆಯ ಬಗ್ಗೆ ಮಾತನಾಡುತ್ತಿದ್ದಾರೆ ವಿನಾ ಹಸಿವು, ದುಸ್ಥಿತಿ, ಬಡತನ, ಅಸಮಾನತೆ, ತಾರತಮ್ಯ ಎದುರಿಸುತ್ತಿರುವವರ ಬಗ್ಗೆ ಮಾತನಾಡುತ್ತಿಲ್ಲ.

ಆದರೆ ಈ ಬಗೆಯ ಜಿಡಿಪಿಯ ಏರಿಕೆಯಿಂದ ಜನರ ಬದುಕು ಸಮೃದ್ಧವಾಗುತ್ತವೆಯೇ ? ಇದರಿಂದ ಜನರ ಆರೋಗ್ಯ, ಮಹಿಳೆಯರ ಜೀವನ ಸುಖಮಯವಾಗುತ್ತದೆಯೇ ? ಭಾರತವು 'ಹಸಿವು ಮುಕ್ತ' ಆಗುತ್ತದೆಯೇ ? ಈ ಜಿಡಿಪಿ ವ್ಯಸನಿಗಳಿಗೆ ಜನರು, ಜನರ ಬದುಕು, ಮಹಿಳೆಯರ ಜೀವನ ಮುಖ್ಯವಾಗುವುದಿಲ್ಲ. ಕಳೆದ ೬೦–೭೦ ವರ್ಷಗಳಲ್ಲಿನ ಜಗತ್ತಿನ ಅನುಭವವೆಂದರೆ ಜಿಡಿಪಿ ಅನ್ನುವುದು ಉಳ್ಳವರ ಬದುಕನ್ನು ಸಮೃದ್ಧಗೊಳಿಸುವ ಸೂಚಿಯಾಗಿದೆ ವಿನಾ ಜನರ ಬದುಕನ್ನು ಸೂಚಿಸುವ ಸಂಗತಿಯಾಗಿಲ್ಲ. ವ್ಯಾಪಾರಗಾರರು, ಉದ್ಯಮಪತಿಗಳು, ಹೂಡಿಕೆದಾರರ ಪ್ರತಿನಿಧಿಯಂತಿರುವ ಆಳುವ ವರ್ಗವು ಅವರ ಹಿತಾಸಕ್ತಿಯನ್ನು ಕೇಂದ್ರವಾಗಿಟ್ಟುಕೊಂಡು ಜಿಡಿಪಿಯ ಬಗ್ಗೆ ಮಾತನಾಡುತ್ತಿದೆ. ಅಮಾನ್ಯೀಕರಣವು ವಿಫಲವಾದ ಮೇಲೆ ಕಪ್ಪುಹಣದ ಬಗ್ಗೆ ಮಾತನಾಡುವುದನ್ನು ಆಳುವ ವರ್ಗ ಕೈಬಿಟ್ಟು ನಗದುರಹಿತ ಆರ್ಥಿಕತೆಯ ಬಗ್ಗೆ ಬೊಬ್ಬಿಡುತ್ತಿದೆ.

**ರಿಸರ್ವ್ ಬ್ಯಾಂಕಿನ ದಿವ್ಯ ವೈಫಲ್ಯ**

ಅಮಾನ್ಯೀಕರಣದ ವೈಫಲ್ಯದ ಬಗ್ಗೆ, ರಿಸರ್ವ್ ಬ್ಯಾಂಕಿನ ಸ್ವಾಯತ್ತತೆಗೆ ಒದಗಿರುವ ಅಪಾಯದ ಬಗ್ಗೆ ಅದರ ಹಿಂದಿನ ಗವರ್ನರುಗಳಾದ ಡಾ॥ ವೈ. ವಿ. ರೆಡ್ಡಿ ಮತ್ತು ಡಾ॥ ಬಿಮಲ್ ಜಲಾನ್ ಅವರು ಟೀಕೆ ಮಾಡಿದ್ದಾರೆ. ವೈ. ವಿ. ರೆಡ್ಡಿ ಅವರು ಈ ಬಗ್ಗೆ ಮಾತನಾಡುತ್ತಾ 'ನಾನು ಗವರ್ನರಾಗಿದ್ದರೆ ಸರ್ಕಾರದ ಅಮಾನ್ಯೀಕರಣ ಶಿಫಾರಸ್ಸನ್ನು ತಿರಸ್ಕರಿಸುತ್ತಿದ್ದೆ. ಒಂದು ವೇಳೆ ನನ್ನ ಸಲಹೆಯನ್ನು ಸರ್ಕಾರವು ತಿರಸ್ಕರಿಸಿದ್ದರೆ ಮೊದಲು ಆಸ್ಪತ್ರೆಗೆ ದಾಖಲಾಗಿ ನಂತರ ಗವರ್ನರ್ ಸ್ಥಾನಕ್ಕೆ ರಾಜೀನಾಮೆ ನೀಡುತ್ತಿದ್ದೆ' ಎಂದು ಕಟುವಾಗಿ ಅಮಾನ್ಯೀಕರಣ ತೀರ್ಮಾನದಲ್ಲಿನ ಸರ್ಕಾರದ ದೊಡ್ಡಣ್ಣನ ನಡೆಯನ್ನು ಟೀಕಿಸಿದ್ದಾರೆ. ಅಮರ್ತ್ಯ ಸೇನ್ ಸ್ಪಷ್ಟವಾಗಿ ಅಮಾನ್ಯೀಕರಣದ ತೀರ್ಮಾನ ಆರ್‌ಬಿಐನದಲ್ಲ; ಇದು ಪ್ರಧಾನಮಂತ್ರಿ ಅವರ ತೀರ್ಮಾನವಾಗಿದೆ ಎಂದು ಹೇಳಿದ್ದಾರೆ. ರಿಸರ್ವ್ ಬ್ಯಾಂಕು ಸರ್ಕಾರ ಹೇಳಿದಂತೆ ಕೇಳುತ್ತಿದೆ ವಿನಾ ಸ್ವತಂತ್ರವಾಗಿ ಮತ್ತು ಒಂದು ಸ್ವಾಯತ್ತ ಸಂಸ್ಥೆಯಾಗಿ ವ್ಯವಹರಿಸುತ್ತಿಲ್ಲ ಎಂಬುದು ಇವರೆಲ್ಲರ ಅಭಿಪ್ರಾಯದಿಂದ ಸ್ಪಷ್ಟವಾಗುತ್ತದೆ. ಇವರುಗಳು ಅಮಾನ್ಯೀಕರಣದ ವೈಫಲ್ಯಕ್ಕಿಂತ ಮುಖ್ಯವಾಗಿ ರಿಸರ್ವ್ ಬ್ಯಾಂಕಿನ ಸ್ವಾಯತ್ತತೆಗೆ ಒದಗಿರುವ ಅಪಾಯದ ಬಗ್ಗೆ ಜನರ ಗಮನ ಸೆಳೆದಿದ್ದಾರೆ. ಈ ಹಿಂದೆ ಯಾವ ಗವರ್ನರುಗಳೂ ಸರ್ಕಾರದ ಅಧಿಕಾರಿಗಳಂತೆ ವರ್ತಿಸಿರಲಿಲ್ಲ ಮತ್ತು ಹಿಂದೆ ಯಾವ ಸಂದರ್ಭದಲ್ಲಿಯೂ ರಿಸರ್ವ್ ಬ್ಯಾಂಕು ಸರ್ಕಾರದ ಇಲಾಖೆಯಂತೆ ನಡೆದುಕೊಂಡಿರಲಿಲ್ಲ. ಆದರೆ ಇಂದಿನ ಗವರ್ನರ್ ಅವರು ಸಮಾಜವನ್ನು ಎದುರಿಸಲು ಹಿಂಜರಿಯುತ್ತಿದ್ದಾರೆ ಮತ್ತು ಸರ್ಕಾರದ ಅಂಕುಶದಲ್ಲಿ ಕೆಲಸ ನಿರ್ವಹಿಸುತ್ತಿರುವಂತೆ ಕಾಣುತ್ತಾರೆ. ಸಮಾಜದಲ್ಲಿ ರಿಸರ್ವ್ ಬ್ಯಾಂಕಿನ ಗವರ್ನರುಗಳ ಬಗ್ಗೆ ಅಪಾರ ಗೌರವವಿರುತ್ತಿತ್ತು. ಇಂದು ಅದು



ಕೊಚ್ಚಿಹೋದಂತೆ ಕಾಣುತ್ತಿದೆ. ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಪತ್ರಿಕೆಗಳು, ನಿಯತಕಾಲಿಕಗಳು ರಿಸರ್ವ್ ಬ್ಯಾಂಕಿನ ಸ್ವಾಯತ್ತತೆಗೆ ಒದಗಿರುವ ಅಪಾಯದ ಬಗ್ಗೆ ಕಟುಟೀಕೆ ಮಾಡುತ್ತಿವೆ.

ಅಮಾನ್ಯೀಕರಣದ ದೊಡ್ಡ ಸಾಧನೆಯೆಂದರೆ ಬ್ಯಾಂಕುಗಳ ಎನ್‌ಪಿಎ ಮೊತ್ತದಲ್ಲಿ ಅಗಾಧ ಏರಿಕೆ ಉಂಟಾದುದಾಗಿದೆ. ಕಳೆದ ವರ್ಷ ಜೂನ್ ತಿಂಗಳಲ್ಲಿದ್ದ ಎನ್‌ಪಿಎ ಪ್ರಮಾಣ ರೂ. ೫.೫೦ ಲಕ್ಷ ಕೋಟಿ. ಅದು ಈಗ ಸೆಪ್ಟೆಂಬರ್‌ನಲ್ಲಿ ರೂ. ೬.೩೦ ಲಕ್ಷ ಕೋಟಿಗೇರಿದೆ. ಇದಕ್ಕಿಂತ ಮುಖ್ಯವಾಗಿ ನವೆಂಬರ್ ಮತ್ತು ಡಿಸೆಂಬರ್ (೨೦೧೬) ತಿಂಗಳುಗಳಲ್ಲಿ ಬ್ಯಾಂಕುಗಳಿಗೆ ನೋಟುಗಳ ವಿನಿಮಯ ಬಿಟ್ಟು ಬೇರೆ ಪ್ರಕಾರ್ಯಗಳನ್ನು ಮಾಡುವುದು ಸಾಧ್ಯವಾಗಿಲ್ಲ. ಅವುಗಳ ಲಾಭದ ಪ್ರಮಾಣ ಕುಸಿದಿದೆ. ಇದರಿಂದಾಗಿ ಅವುಗಳು ೨೦೧೬-೧೭ನೆಯ ಸಾಲಿನಲ್ಲಿ ಲಾಭಾಂಶವನ್ನು ಘೋಷಿಸುವ ಸ್ಥಿತಿಯಲ್ಲಿಲ್ಲ. ಆ ಮಟ್ಟಿಗೆ ಸರ್ಕಾರದ ಆದಾಯವು ಪ್ರಸಕ್ತ ಸಾಲಿನಲ್ಲಿ ಕಡಿಮೆಯಾಗುತ್ತದೆ.

**ವರಮಾನವೇ ಜನರ ಬದುಕಿನ ಮೊತ್ತವಲ್ಲ !**

ಸುಮಾರು ೨೫ ವರ್ಷಗಳ ಹಿಂದೆ ಮೆಹಬೂಬ್ ಉಲ್ ಹಕ್ ಅವರು ತಾವು ಸಿದ್ಧಪಡಿಸಿದ್ದ ಮೊದಲ ಮಾನವ ಅಭಿವೃದ್ಧಿ ವರದಿಯಲ್ಲಿ (೧೯೯೦) ಜಿಡಿಪಿಯ ಮಿತಿಗಳ ಬಗ್ಗೆ ಚರ್ಚಿಸುತ್ತಾ 'ವರಮಾನವೇ ಜನರ ಬದುಕಿನ ಮೊತ್ತವಲ್ಲ' ಎಂಬುದರ ಬಗ್ಗೆ ಭವಿಷ್ಯವಾಣಿಯಂತಹ ಮಾತನ್ನಾಡಿದ್ದರು. ಉದಾಹರಣೆಗೆ, ಕರ್ನಾಟಕದಲ್ಲಿ ತಲಾ ವರಮಾನವು ೨೦೧೧-೧೨ರಲ್ಲಿ ರೂ. ೮೯,೭೮೭ರಷ್ಟಿದ್ದುದು ೨೦೧೪-೧೫ರಲ್ಲಿ ಅದು ರೂ. ೧,೩೦,೯೭೭ರಷ್ಟಾಗಿದೆ. ಇದೇನು ಸಣ್ಣ ಮೊತ್ತವಲ್ಲ. ಆದರೆ ಇದು ಸರಾಸರಿ ಮೌಲ್ಯ. ರಾಜ್ಯದಲ್ಲಿ ದಿನಕ್ಕೆ ರೂ. ೨೦೦-೩೦೦ ಕೂಲಿಗೆ ದುಡಿಯುವ ಲಕ್ಷಾಂತರ ಕುಟುಂಬಗಳಿವೆ. ರಾಜ್ಯದ ಬೆಂಗಳೂರು ವಿಭಾಗದ ೨೦೧೩-೧೪ರ ತಲಾ ವರಮಾನ ರೂ. ೨,೩೧,೬೧೭ರಷ್ಟಿದ್ದರೆ ಕಲಬುರಗಿ ವಿಭಾಗದಲ್ಲಿ (ಚಾಲ್ತಿ ಬೆಲೆಗಳಲ್ಲಿ) ತಲಾ ವರಮಾನ ರೂ. ೧,೧೫,೩೩೧ರಷ್ಟಿದೆ. ಕಲಬುರಗಿ ವಿಭಾಗದ ತಲಾ ವರಮಾನವು ಬೆಂಗಳೂರು ವಿಭಾಗದ ತಲಾ ವರಮಾನದ ಶೇ. ೫೦ಕ್ಕಿಂತ ಕಡಿಮೆಯಾಗುತ್ತದೆ. ಇಲ್ಲಿರುವ ವರಮಾನದ ಅಸಮಾನತೆಯು ಸ್ವಯಂವೇದ್ಯವಾಗಿದೆ. ಅಂದ ಮೇಲೆ ತಲಾ ವರಮಾನವು ದುಡಿಮೆಗಾರರ ಬದುಕಿನ ಸ್ಥಿತಿಗತಿಯನ್ನು ತೋರಿಸುವುದಿಲ್ಲ. ಇದಕ್ಕಿಂತ ಮೇಲಾಗಿ ಅಭಿವೃದ್ಧಿ ಅನ್ನುವುದು ಬಹುಮುಖಿ ಪ್ರಕ್ರಿಯೆಯಾಗಿದೆ. ವರಮಾನವಲ್ಲದೆ ಅದು ಶಿಕ್ಷಣ, ಆರೋಗ್ಯ, ಆಹಾರ ಭದ್ರತೆ, ಲಿಂಗಸಮಾನತೆ ಮುಂತಾದ ಸಂಗತಿಗಳನ್ನು ಒಳಗೊಂಡಿದೆ. ಜಿಡಿಪಿಯು ಏಕಮಾನ ಮಾಪನವಾಗಿರುವುದರಿಂದ ಅದು ಜನರ ಬದುಕಿನ ಮಾಪನವಾಗಲಾರದು. ನೀತಿ ಆಯೋಗವಾಗಲಿ, ಹಣಕಾಸು ಸಚಿವರಾಗಲಿ, ಆರ್ಥಿಕ ಸಲಹೆಗಾರರಾಗಲಿ ಜನರ ಬವಣೆಯ ಬಗ್ಗೆ ಅಪ್ಪಿತಪ್ಪಿಯೂ ಮಾತನಾಡುತ್ತಿಲ್ಲ. ಈ ತೀರ್ಮಾನವನ್ನು ಸರ್ಕಾರವು ವೀರಗಾಥೆ ಅನ್ನುವಂತೆ ಪೌರುಷತನದ ತೀರ್ಮಾನವೆಂದು ತನ್ನನ್ನು ತಾನು ಹೊಗಳಿಕೊಳ್ಳುತ್ತಿದೆ. ಈ ಬಗೆಯ ಆತ್ಮರತಿ ಒಳ್ಳೆಯ ಆಡಳಿತಗಾರರಿಗೆ ತಕ್ಕುದಲ್ಲ. ಸರ್ಕಾರದ ವಕ್ತಾರರು ತಮ್ಮ ಕ್ರಮ ಕುರಿತಂತೆ 'ತಕ್ಷಣದ ನೋವು : ಭವಿಷ್ಯದ ಗೆಲುವಿ'ನ ಬಗ್ಗೆ ಮಾತನಾಡುತ್ತಿದ್ದಾರೆ. ಆದರೆ ಇಂದು ಖಚಿತ ವಾಗಿರುವಂತೆ ನಮ್ಮ ದೇಶದ ಜಿಡಿಪಿ ಬೆಳವಣಿಗೆಯ ಕುಸಿತವು ತಾತ್ಕಾಲಿಕ ವಾದುದಲ್ಲ. ಅದು ದೀರ್ಘಾವಧಿಯದ್ದಾಗಿದೆ. ಇದನ್ನು ಐಎಮ್‌ಎಫ್, ಸಿಎಮ್‌ಐಇ, ಕ್ರೆಡಿಟ್ ಸ್ಯೂಸಿ ಸಂಶೋಧನಾ ಸಂಸ್ಥೆಗಳ ಅಧ್ಯಯನಗಳು ದೃಢಪಡಿಸುತ್ತಿವೆ. ಅಮಾನ್ಯೀಕರಣದ ನೋವು ಸರಿಹೋಗಲು ತಾವು ನೀಡಿದ್ದ ಗಡುವಿನ ಬಗ್ಗೆ ಇಂದು ಸರ್ಕಾರ ಚಕಾರವೆತ್ತುತ್ತಿಲ್ಲ. ಏಕೆಂದರೆ ನೋವು ಮುಗಿಯುತ್ತಿಲ್ಲ.

**ಸಂಪತ್ತಿನ ಅಸಮಾನತೆಯ ವಿರಾಟ್ ಸ್ವರೂಪ**

ಕ್ರೆಡಿಟ್ ಸ್ಯೂಸಿ ರಿಸರ್ಚ್ ಸಂಸ್ಥೆಯು ಪ್ರಕಟಿಸಿರುವ ೨೦೧೬ರ ಗ್ಲೋಬಲ್ ವೆಲ್ತ್ ರಿಪೋರ್ಟ್ ಪ್ರಕಾರ ಜಗತ್ತಿನಲ್ಲಿ ವರಮಾನ ಅಸಮಾನತೆಯು ಅತ್ಯಂತ ಅಧಿಕ ಪ್ರಮಾಣದಲ್ಲಿರುವ ಆರ್ಥಿಕತೆಗಳಲ್ಲಿ ಭಾರತ ಎರಡನೆಯ ಸ್ಥಾನದಲ್ಲಿದೆ. ನಮ್ಮ ದೇಶದ ಒಟ್ಟು ಸಂಪತ್ತಿನಲ್ಲಿ ಶೇ. ೫೮ರಷ್ಟು ಶೇ. ೧ರಷ್ಟು ಜನರ ವಶದಲ್ಲಿದೆ. ನಮ್ಮ ದೇಶದಲ್ಲಿ ಇರುವ ಬಿಲಿಯನ್ನರ ಸಂಖ್ಯೆ ೧.೭೮ ಲಕ್ಷ. ಇವರ ಆಸ್ತಿಯ ಮೌಲ್ಯ ರೂ. ೫.೯೯ ಲಕ್ಷ ಕೋಟಿ. ಕರ್ನಾಟಕ ರಾಜ್ಯದ ೨೦೧೫-೧೬ನೆಯ ಸಾಲಿನ ವರಮಾನ ರೂ. ೧೦.೨೨ ಲಕ್ಷ ಕೋಟಿ. ಈ ಹಿನ್ನೆಲೆಯಲ್ಲಿ ೧.೭೮ ಲಕ್ಷ ಜನರ ಸಂಪತ್ತು, ಅಂತಸ್ತು, ಅವರ ಪ್ರಭಾವ, ಆಸ್ತಿಯ ಒಂದು ಅಂದಾಜನ್ನು ಮಾಡಿಕೊಳ್ಳಬಹುದು. ಇದಕ್ಕೆ ಪ್ರತಿಯಾಗಿ ನಮ್ಮ ದೇಶದ ಒಟ್ಟು ವಯಸ್ಕರಲ್ಲಿ ಶೇ. ೯೬ರಷ್ಟು ಜನರ ತಲಾ ಸಂಪತ್ತಿನ ಮೌಲ್ಯ ರೂ. ೬ ಲಕ್ಷ ಮಾತ್ರ. ವರಮಾನ ಅಸಮಾನತೆಯನ್ನು ಮತ್ತಷ್ಟು ಉಲ್ಬಣಗೊಳಿಸುತ್ತಿರುವ ಮತ್ತೊಂದು ಸಂಗತಿಯೆಂದರೆ ಡಿಜಿಟಲ್ ಅಸಮಾನತೆ. ಯುವ ಜನಾಂಗವು ನಗದುರಹಿತ ಆರ್ಥಿಕ ಚಟುವಟಿಕೆಗಳನ್ನು ರೂಢಿಸಿಕೊಳ್ಳಬೇಕು ಎಂದು ನಮ್ಮ ಪ್ರಧಾನ ಮಂತ್ರಿ ಅವರು ಕರೆ ನೀಡುತ್ತಿದ್ದಾರೆ. ಆದರೆ ಗ್ರಾಮೀಣ ಪ್ರದೇಶದಲ್ಲಿ ಡಿಜಿಟಲ್ ತಂತ್ರಜ್ಞಾನ ಬಳಸಲು ಅಗತ್ಯವಾದ ಮೂಲ ಸೌಲಭ್ಯ ಇಲ್ಲದಿರುವುದರ ಬಗ್ಗೆ, ಎಟಿಎಮ್‌ಗಳ ಕೊರತೆಯ ಬಗ್ಗೆ ಅವರು ಮಾತನಾಡುತ್ತಿಲ್ಲ. ವಿಶ್ವಬ್ಯಾಂಕಿನ ಒಂದು ವರದಿಯ ಪ್ರಕಾರ ಭಾರತದಲ್ಲಿ ೧೫ ವರ್ಷಕ್ಕೂ ಹೆಚ್ಚಿನ ವಯೋಮಾನದ ಜನರಲ್ಲಿ ಬ್ಯಾಂಕ್ ಖಾತೆ ಬಳಸುತ್ತಿರುವವರ ಪ್ರಮಾಣ ಕೇವಲ ಶೇ. ೩೫. ಇವರಲ್ಲಿ ಡೆಬಿಟ್ ಕಾರ್ಡುಗಳನ್ನು ಬಳಸುವವರ ಪ್ರಮಾಣ ಶೇ. ೧೦ರಷ್ಟಾಗಿದ್ದರೆ ಕ್ರೆಡಿಟ್ ಕಾರ್ಡುಗಳನ್ನು ಬಳಸುವವರ ಪ್ರಮಾಣ ಕೇವಲ ಶೇ. ೩. ತಜ್ಞರು ಅಭಿಪ್ರಾಯ ಪಡುತ್ತಿರುವಂತೆ ಇಂದು ಸರ್ಕಾರದ ನೀತಿಗಳು ಐಷಾರಾಮಿಗಳ ಐಷಾರಾಮವನ್ನು ಹೆಚ್ಚಿಸುವುದಕ್ಕೆ ಪೂರಕವಾಗಿವೆ ಮತ್ತು ಅವು ದುಸ್ಥಿತಿಯಲ್ಲಿರುವವರ ದುಸ್ಥಿತಿಯನ್ನು ಉಲ್ಬಣಗೊಳಿಸುತ್ತಿವೆ. ಈ ಪ್ರಕ್ರಿಯೆಯನ್ನು ಅಮಾನ್ಯೀಕರಣವು ಗಟ್ಟಿಗೊಳಿಸುತ್ತಿದೆ.

ಇದಕ್ಕೆ ನಿದರ್ಶನವೆಂದರೆ ಸಾರ್ವಜನಿಕ ಬ್ಯಾಂಕುಗಳು ೨೦೦೪ರಿಂದ ೨೦೧೫ರ ಅವಧಿಯಲ್ಲಿ ಮಾಫಿ ಮಾಡಿದ ಕೆಟ್ಟ ಸಾಲದ ಮೊತ್ತ ರೂ. ೨.೧೧ ಲಕ್ಷ ಕೋಟಿ. ಇದರಲ್ಲಿ ಬ್ಯಾಂಕುಗಳು ೨೦೧೩-೧೫ರಲ್ಲಿ ಮಾಫಿ ಮಾಡಿದ ಸಾಲದ ಮೊತ್ತ ರೂ. ೧.೧೪ ಲಕ್ಷ ಕೋಟಿ. ಇದಕ್ಕೆ ಪ್ರತಿಯಾಗಿ ರೂ. ೧೦,೦೦೦, ರೂ. ೨೦,೦೦೦, ರೂ. ೧೦೦,೦೦೦ ಸಾಲ ಮಾಡಿದ ರೈತರ ಸಾಲವನ್ನು ಬ್ಯಾಂಕುಗಳು ಬಲವಂತದಿಂದ ವಸೂಲಿ ಮಾಡುತ್ತಿರುವುದರ ಕಾರಣ ಅವರು ಮರ್ಯಾದೆಗೆ ಹೆದರಿ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ. ಅನ್ನಭಾಗ್ಯ ಯೋಜನೆಗೆ ಕರ್ನಾಟಕ ಸರ್ಕಾರ ವಾರ್ಷಿಕ ರೂ. ೪೦೦೦ ಕೋಟಿ ಸಬ್ಸಿಡಿ ನೀಡಿದರೆ ಅದನ್ನು ಪ್ರಸಿದ್ಧ ಉದ್ಯಮಿ ಟಿ. ವಿ. ಮೋಹನದಾಸ್ ಪೈ ಅವರು 'ಇದು ತೆರಿಗೆದಾರರ ಹಣದ ಲೂಟಿಗೆ ಸಮ' ಎಂದು ಟೀಕಿಸಿದ್ದಾರೆ. ಆದರೆ ಕೇಂದ್ರ ಸರ್ಕಾರವು ಉದ್ದಿಮೆಗಳಿಗೆ ನೀಡಿರುವ ರೂ. ೫.೭೩ ಲಕ್ಷ ಕೋಟಿ ತೆರಿಗೆ ವಿನಾಯತಿ, ರಿಯಾಯತಿಯಾಗಲಿ (ಟ್ಯಾಕ್ಸ್ ರೆವಿನ್ಯೂ ಪೋರ್‌ಗಾನ್) ಅಥವಾ ಸಾರ್ವಜನಿಕ ಬ್ಯಾಂಕುಗಳು ಮಾಫಿ ಮಾಡಿದ ಉದ್ದಿಮೆಗಾರರ ಸಾಲದ ಮೊತ್ತ ರೂ. ೨.೧೧ ಲಕ್ಷ ಕೋಟಿಯಾಗಲಿ ಇವರಿಗೆ ತೆರಿಗೆಗಾರರ ಹಣದ ಲೂಟಿಯಾಗಿ ಕಾಣುವುದಿಲ್ಲ. ಹೊಟ್ಟೆ ತುಂಬಿದವರ ಪಾಡು ಇಷ್ಟೇ ತಾನೆ! ಹೊಟ್ಟೆ ಹೊರೆಯುವವರ ಬಗ್ಗೆ ಹೊಟ್ಟೆ ತುಂಬಿದವರಿಗೆ ಏಕೆ ಇಷ್ಟೊಂದು ಅಸಹನೆ ಎಂಬುದು ಅರ್ಥವಾಗುತ್ತಿಲ್ಲ.

**ಅಮಾನ್ಯೀಕರಣವು ವಿಫಲವಾಗಿದೆ !!**

ಅಮಾನ್ಯೀಕರಣವು ವಿಫಲವಾಗಿದೆ ಎಂಬುದು ಇದೀಗ ಸ್ಪಷ್ಟವಾಗುತ್ತಿದೆ. ಇತ್ತೀಚೆಗೆ ಸರ್ಕಾರ ಮತ್ತು ಆರ್‌ಬಿಐ ಚಲಾವಣೆಯಲ್ಲಿರುವ ರೂ. ೨೦೦೦ದ ನೋಟುಗಳನ್ನು ಹಿಂಪಡೆಯುವ ಬಗ್ಗೆ ಯೋಚಿಸುತ್ತಿದೆ. ಅದಕ್ಕೆ ಚಿಲ್ಲರೆ ದೊರೆಯುತ್ತಿಲ್ಲ ಅನ್ನುವುದು ಇದಕ್ಕೆ ಕಾರಣ ಎಂದು ಹೇಳಲಾಗಿದೆ. ಈಗಲಾದರೂ ಸರ್ಕಾರಕ್ಕೆ ಜ್ಞಾನೋದಯವಾಗಿರುವುದು ಸ್ವಾಗತಾರ್ಹ ಸಂಗತಿ. ಇದರ ಜೊತೆಗೆ ಇದುವರೆಗೆ ರೂ. ೧೦೦೦ ನೋಟುಗಳನ್ನು ಚಲಾವಣೆಗೆ ತರುವುದಿಲ್ಲ ಅನ್ನುತ್ತಿದ್ದ ಸರ್ಕಾರ ಈಗ ಅದನ್ನು ಚಲಾವಣೆಗೆ ತರಲು ಪುನರಾಲೋಚಿಸುತ್ತಿದೆ. ದೀರ್ಘಾವಧಿಯಲ್ಲಿ ಜನರಿಗೆ ಅಮಾನ್ಯೀಕರಣದಿಂದ ಇದರಿಂದ ಲಾಭವಾಗುತ್ತದೆ ಎಂದು ಹೇಳುತ್ತಿದ್ದಾರೆ ವಿನಾ ಅದು ಯಾವ ರೀತಿಯ ಲಾಭ ತರುತ್ತದೆ ಅನ್ನುವುದನ್ನು ಹೇಳುತ್ತಿಲ್ಲ. ಸರ್ಕಾರವು ಇಂದು ಡಿಜಿಟಲೈಸೇಷನ್ ಬಗ್ಗೆಯಾಗಲಿ, ನಗದುರಹಿತ ಆರ್ಥಿಕತೆಯ ಬಗ್ಗೆಯಾಗಲಿ ಮಾತನಾಡುತ್ತಿಲ್ಲ.

ಇವೆಲ್ಲವೂ ಅಮಾನ್ಯೀಕರಣದ ವೈಫಲ್ಯಕ್ಕೆ ಸಾಕ್ಷಿಯಾಗಿವೆ. ವಿದೇಶಗಳಲ್ಲಿ ಅಕ್ರಮವಾಗಿ ಇಟ್ಟಿರುವ ಕಪ್ಪುಹಣವನ್ನು ದೇಶದೊಳಗೆ ತಂದು ಪ್ರತಿಯೊಬ್ಬ ಪ್ರಜೆಯ ಖಾತೆಗೆ ರೂ. ೧೫ ಲಕ್ಷ ಜಮಾ ಮಾಡುತ್ತೇನೆ ಎಂಬ ಪ್ರಧಾನಿಯವರ ಆಶ್ವಾಸನೆ ಒಂದು ಭ್ರಮೆ ಅನ್ನುವುದು ಸ್ಪಷ್ಟವಾಗಿದೆ. ಅಮಾನ್ಯೀಕರಣದ ಭರವಸೆ-ಆಶ್ವಾಸನೆಯೂ ಅದೇ ದಾರಿ ಹಿಡಿಯುತ್ತಿದೆ.

ಈಗಾಗಲೆ ಖಚಿತವಾಗಿರುವಂತೆ ಆರ್ಥಿಕತೆಯಲ್ಲಿ ಒಟ್ಟು ಸರಬರಾಜಿನಲ್ಲಿದ್ದ ಸಾಚಾ ನೋಟುಗಳಲ್ಲಿ ಕೋಟಾ ನೋಟುಗಳ ಪ್ರಮಾಣ ಕೇವಲ ಶೇ. ೧ಕ್ಕಿಂತ ಕಡಿಮೆ. ರಾಷ್ಟ್ರೀಯ ತನಿಖಾ ಸಂಸ್ಥೆ ಮತ್ತು ಇಂಡಿಯನ್ ಸಾಂಖ್ಯಿಕ ಸಂಸ್ಥೆಗಳು ಜಂಟಿಯಾಗಿ ನಡೆಸಿದ ಅಧ್ಯಯನದಿಂದ ತಿಳಿದುಬಂದಿರುವಂತೆ ಕಳೆದ ನಾಲ್ಕು ವರ್ಷಗಳಿಂದ ಸರಬರಾಜಿನಲ್ಲಿರುವ ಕೋಟಾ ನೋಟುಗಳ ಮೌಲ್ಯ ರೂ. ೪೦೦ ಕೋಟಿ. ಈ ಅಂಕಿ ಸರಿಯಲ್ಲ ಎಂದು ಹೇಳಿ ನೀತಿ ಆಯೋಗದ ಸದಸ್ಯ ಬಿಬೇಕ್ ಡೊಬ್‌ರಾಯ್ ಅವರು ಕೋಟಾ ನೋಟುಗಳ ಮೌಲ್ಯ ರೂ. ೨೦೦೦ ಕೋಟಿ ಎಂದು ಹೇಳಿದ್ದಾರೆ. ಇಷ್ಟಾದರೂ ಅದು ಒಟ್ಟು ಸರಬರಾಜಿನಲ್ಲಿದ್ದ ನೋಟುಗಳ ಮೌಲ್ಯದಲ್ಲಿ ಕೋಟಾ ನೋಟುಗಳ ಮೌಲ್ಯದ ಪ್ರಮಾಣ ಶೇ. ೧ಕ್ಕಿಂತ ಕಡಿಮೆಯಾಗುತ್ತದೆ. ಒಟ್ಟಾರೆ ಆರ್ಥಿಕತೆಯಲ್ಲಿದ್ದ ಶೇ. ೧ರಷ್ಟು ಕೋಟಾ ನೋಟನ್ನು ನಿಗ್ರಹಿಸಲು ಶೇ. ೮೬ರಷ್ಟು ನೋಟುಗಳನ್ನು ನಿಷೇಧಿಸುವ ಅಗತ್ಯವಿತ್ತೆ? ದೇಶದಲ್ಲಿದ್ದ ಒಟ್ಟು ಕಪ್ಪುಹಣದಲ್ಲಿ ನಗದು ರೂಪದಲ್ಲಿದ್ದ ಕಪ್ಪುಹಣದ ಪ್ರಮಾಣ ಶೇ. ೬ ಎಂದು ಹೇಳಲಾಗಿದೆ. ಅದರ ನಿಗ್ರಹವು ನಡೆದಿಲ್ಲ. ಭ್ರಷ್ಟಾಚಾರವನ್ನು ತೊಡೆದುಹಾಕುವುದು ಸಾಧ್ಯವಾಗಿಲ್ಲ. ಅಮಾನ್ಯೀಕರಣವು ಪೂರ್ಣವಾಗಿ ವಿಫಲವಾಗಿದೆ. ಜನರ ಕಷ್ಟಗಳು ಅಲ್ಪಾವಧಿಯದಿರಬಹುದು. ಆದರೆ ಅದರ ಲಾಭಗಳು ದೀರ್ಘ ಕಾಲಾವಧಿಯಲ್ಲಿ ಸಾಮಾನ್ಯರಿಗೆ ದೊರೆಯುತ್ತವೆ ಅನ್ನುವುದು ಅನುಮಾನ ಮತ್ತು ಅನಿಶ್ಚಿತ.

ಈ ಎಲ್ಲ ಬಿಕ್ಕಟ್ಟುಗಳ ಪರಿಣಾಮವಾಗಿ ಆರ್ಥಿಕತೆಯಲ್ಲಿ ಕುಸಿತ ಉಂಟಾಗುತ್ತಿದೆ. ಸಿಎಮ್‌ಐಈ ಅಧ್ಯಯನದ ಪ್ರಕಾರ ಕಳೆದ ೫೦ ದಿನಗಳಲ್ಲಿ (ನವೆಂಬರ್ ೦೮ರಿಂದ ಡಿಸೆಂಬರ್ ೩೦, ೨೦೧೬) ಕುಟುಂಬಗಳು ತಮ್ಮ ಹಳೆಯ ನೋಟುಗಳನ್ನು ವಿನಿಮಯ ಮಾಡಲು, ಕೂಲಿಯನ್ನು ಬಿಟ್ಟುಕೊಟ್ಟು ಬ್ಯಾಂಕುಗಳ ಮುಂದೆ ಸಾಲುಗಟ್ಟಿ ಸರದಿ ನಿಂತಿದ್ದರ ವೆಚ್ಚ ಮತ್ತು ಸಾರಿಗೆ ವೆಚ್ಚ ರೂ. ೧೫,೦೦೦ ಕೋಟಿ. ಬ್ಯಾಂಕುಗಳು ತಮ್ಮ ಎಲ್ಲ ವ್ಯವಹಾರಗಳನ್ನು ಬಿಟ್ಟು ನೋಟುಗಳ ನಿರ್ವಹಣೆಗೆ ಸಮಯ–ಸಂಪನ್ಮೂಲ ಮೀಸಲಿಟ್ಟಿದ್ದರಿಂದ ಉಂಟಾದ ನಷ್ಟ ರೂ. ೩೫೧೦೦ ಕೋಟಿ. ರಿಸರ್ವ್ ಬ್ಯಾಂಕಿಗೆ ನೋಟು ಮುದ್ರಣ, ಸರಬರಾಜು, ದಾಸ್ತಾನು ಮುಂತಾದ ವ್ಯವಹಾರದಿಂದ ಉಂಟಾದ ವೆಚ್ಚ ರೂ. ೧೬,೮೦೦ ಕೋಟಿ. ಅನುಭೋಗ ಕುಸಿತದಿಂದ ವ್ಯಾಪಾರದಲ್ಲಿ ಉಂಟಾದ ನಷ್ಟ ರೂ. ೬೧,೫೦೦ ಕೋಟಿ. ಅಮಾನ್ಯೀಕರಣದಿಂದ ಉಂಟಾದ ಒಟ್ಟು ವ್ಯವಹಾರ ವೆಚ್ಚ (ಟ್ರಾಂಜಾಂಕ್ಷನ್ ಕಾಸ್ಟ್ ) ರೂ. ೧.೨೮ ಲಕ್ಷ ಕೋಟಿ.

## ಬದುಕು

"ಎಷ್ಟು ಕೆಳಕ್ಕೆ
ಇಳಿಯುತ್ತಿದ್ದರೂ
ತಳ – ಸಿಗದ
ಸಾಗರದಾಳದಂತೆ
ನಿತ್ಯ ಜೀವನದ
ತಳ – ಮಳ"

**ಎನ್. ಶ್ರೀನಿವಾಸ್**
ಮಂಡ್ಯ

ಈ ರೂ. ೧.೨೮ ಲಕ್ಷ ಕೋಟಿ ವ್ಯಯಮಾಡಿ ಸಾಧಿಸಿದ್ದಾದರೂ ಏನು ? ಒಂದು ಅಂದಾಜಿನ ಪ್ರಕಾರ ಹಳೆಯ ನೋಟುಗಳಲ್ಲಿ ಶೇ. ೯೫ರಷ್ಟು ಬ್ಯಾಂಕುಗಳಲ್ಲಿ ಜಮೆಯಾಗಿದೆ. ಹಾಗಾದರೆ ಬ್ಯಾಂಕಿಂಗ್ ವ್ಯವಸ್ಥೆಗೆ ವಾಪಸ್ಸು ಬಾರದೆ ಆರ್ಥಿಕತೆಯಲ್ಲಿ ಉಳಿದ ಕಪ್ಪು ಹಣವೆಷ್ಟು ? ಇದನ್ನು ಸರ್ಕಾರವೂ ಹೇಳುತ್ತಿಲ್ಲ, ಆರ್‌ಬಿಐಯೂ ಬಹಿರಂಗಪಡಿಸುತ್ತಿಲ್ಲ. ಒಟ್ಟಾರೆ ಅಮಾನ್ಯೀಕರಣ ಅನ್ನುವುದು ಒಂದು ಪ್ರಹಸನವಾಗಿದೆ. ಅಮರ್ತ್ಯ ಸೇನ್ ಸರಿಯಾಗಿ ಗುರುತಿಸಿರುವಂತೆ ಇದು ಉಳ್ಳವರ ಮೇಲೆ ನಡೆಸಿದ ದಾಳಿ ಎಂಬ ಭ್ರಮೆಯನ್ನು ಉಂಟುಮಾಡಿದ್ದರಿಂದ ಜನರು ತಮಗೆ ತೊಂದರೆಯಾದರೂ ಸರಿ, ಕಾಳ ಕದೀಮ ಧನಿಕರಿಗೆ ಹಾನಿ ಯಾಗುತ್ತಿದೆಯಲ್ಲಾ ಎಂದು ಸಮಾಧಾನಪಟ್ಟುಕೊಳ್ಳುತ್ತಿದ್ದಾರೆ. ಯಾವ ಕಳ್ಳ ಕದೀಮ ಧನಿಕರಿಗೂ ಹಾನಿಯೂ ಆಗಿಲ್ಲ, ಕಷ್ಟವೂ ಬಂದಿಲ್ಲ. ಅವರಾರು ಬ್ಯಾಂಕುಗಳ ಮುಂದೆ ಸರದಿಯಲ್ಲಿ ನಿಲ್ಲಲಿಲ್ಲ. ಎಟಿಎಮ್‌ಗಳಲ್ಲಿ ನಗದಿಗಾಗಿ ಕಾಯಲಿಲ್ಲ. ಕಳ್ಳ ಕದೀಮ ಧನಿಕರಿಗೆ ಹಾನಿಯಾಗುತ್ತಿದೆ ಎಂಬುದು ಒಂದು ರೀತಿಯ ಮಾನಸಿಕ ವ್ಯಸನ. ಈ ಭ್ರಮೆಯನ್ನು, ವ್ಯಸನವನ್ನು ಜನರಲ್ಲಿ ಉಂಟುಮಾಡುವುದರಲ್ಲಿ ಮಾಧ್ಯಮಗಳ ಪಾತ್ರವೂ ಇದೆ ಎಂಬುದನ್ನು ನಾವು ಮರೆಯಬಾರದು. ಈ ವ್ಯಸನದಿಂದ, ಕೇಂದ್ರ ಸರ್ಕಾರದ ರೆಟರಿಕ್‌ನಿಂದ ಸಮಾಜ ಹೊರಬರಬೇಕಾಗಿದೆ. ಜನರಿಗೆ ಉಂಟಾಗಿರುವ ಸಂಕಷ್ಟವು ಸರ್ಕಾರ ಪ್ರಜ್ಞಾಪೂರ್ವಕವಾಗಿ ರೂಪಿಸಿದ್ದು ಎಂಬುದನ್ನು ನಾವು ಮನದಟ್ಟು ಮಾಡಿಕೊಳ್ಳಬೇಕಾಗಿದೆ. ಇದರಲ್ಲಿ ಜನಹಿತ ಅನ್ನುವುದು ಲವಶೇಷವೂ ಇರಲಿಲ್ಲ ಎಂಬುದು ಈಗ ಸ್ಪಷ್ಟವಾಗುತ್ತಿದೆ. ದುಡಿಮೆಗಾರರ ಚೈತನ್ಯವನ್ನೇ ಉಡುಗಿಸುತ್ತಿರುವ ಇಂತಹ ಕ್ರಮಗಳ ನಿಜ ಬಣ್ಣವನ್ನು ಬಹಿರಂಗಪಡಿಸಬೇಕಾಗಿದೆ. ಒಟ್ಟಾರೆ ಅಮಾನ್ಯೀಕರಣ ಉಂಟುಮಾಡಿರುವ, ಉಂಟು ಮಾಡುತ್ತಿರುವ ಅನಾಹುತಗಳು ಬಹುಮುಖಿ ಯಾಗಿವೆ. ಅದು ಜಿಡಿಪಿಯ ಕುಸಿತಕ್ಕೆ ಕಾರಣವಾಗಿದೆ, ಉತ್ಪಾದನೆಯ ಕುಸಿತವು ನಡೆಯುತ್ತಿದೆ, ಈಗಾಗಲೆ ಅನುಭೋಗದ ಬೇಡಿಕೆ ನೆಲಕಚ್ಚಿದೆ, ಇದು ವ್ಯಾಪಾರ–ವಹಿವಾಟಿನ ಮೇಲೆ ದುಷ್ಪರಿಣಾಮ ಬೀರಿದೆ, ಬ್ಯಾಂಕುಗಳ ಎನ್‌ಪಿಎ ಮೊತ್ತ ಅಗಾಧವಾಗಿ ಬೆಳೆಯುತ್ತಿದೆ, ಅವುಗಳ ೨೦೧೬–೧೭ನೆಯ ಸಾಲಿನ ಲಾಭ ಕುಸಿದಿದೆ, ಅತಿ ಸಣ್ಣ ಮತ್ತು ಸಣ್ಣ ಉದ್ದಿಮೆಗಳು ಉದ್ಯೋಗಿಗಳನ್ನು ತೆಗೆದುಹಾಕುತ್ತಿವೆ. ಅಸಂಘಟಿತ ವಲಯವು ತತ್ತರಿಸಿಬಿಟ್ಟಿದೆ. ಆರ್‌ಬಿಐನ ಸ್ವಾಯತ್ತತೆಯು ಅಪಾಯಕ್ಕೆ ಸಿಲುಕಿದೆ. ನಗದುರಹಿತ ಆರ್ಥಿಕತೆ ಅನ್ನುವುದು ದೀರ್ಘಾವಧಿ ಸಂಗತಿ. ತತ್ಕಾಲದಲ್ಲಿ ಸಂಭವಿಸುವ ಪರಿವರ್ತನೆ ಅದಲ್ಲ. ಇಷ್ಟೆಲ್ಲ ಅನಾಹುತಕ್ಕೆ ಕಾರಣವಾಗಿರುವ ಅಮಾನ್ಯೀಕರಣವನ್ನು ಮೈಮೇಲೆ ಎಳೆದುಕೊಳ್ಳಬೇಕಾಗಿತ್ತೆ ?

**ಡಾ॥ ಟಿ. ಆರ್. ಚಂದ್ರಶೇಖರ**
ಸಮಾಲೋಚಕ, ನಾಲ್ಕನೆಯ ರಾಜ್ಯ ಹಣಕಾಸು ಆಯೋಗ
ಮೂರನೆಯ ಮಹಡಿ, ದಕ್ಷಿಣ ಭಾಗ, ರೇಸ್ ಕೋರ್ಸ್ ರಸ್ತೆ
ಬೆಂಗಳೂರು – ೫೬೦ ೦೦೧

ಕಾವ್ಯಲೋಕ



# ಗಜ಼ಲ್

ಪ್ರೀತಿ ತೆಕ್ಯಾಗ ಕೊಳೆ ಹುಡ್ಕೋರಿಗೆ ಏನ ಹೇಳುದು ಹೃದಯದ ಕಸುನ್ಯಾಗ ಜೀವ ಐತಿ
ನಿಜ ಐತಿ ಗೆಳತಿ ನನ್ನ ನಿನ್ನ ಪ್ರೀತಿ ಕೊಂದವರ ನೆರಳ್ಯಾಗ ಜೀವ ಐತಿ

ಸಂಶಯದ ಸಲಾಕಿ ಎದಿಗೆ ಹಿಡಿದು ಜೊಳ್ಳು ನಾಲಿಗೆ ಓಣ್ಯಾಗ ಹಾಸ್ಯಾರ
ನಾಲಿಗೆ ಇರಿತ ಎದೆಯ ಬ್ಯಾನಿಗೆ ತಟ್ಟುದಿಲ್ಲ ಸಖಿ ಪ್ರೀತಿ ಅಗೆದಾಗ ಜೀವ ಐತಿ

ಹಾದಿಬೀದ್ಯಾಗ ಕಿಕ್ಕಿರಿದ ಹೆಜ್ಜೆಗಳು ಗೊಂದಲದ ಗೂಡ್ಯಾಗ ಸಿಕ್ಕಂಗ
ಕರೆ ನಾಡಿಯ ಗೆಜ್ಜೆ ನುಡಿದು ಸಾಗೂನು ಸಖಿ ನೆಲದ ಪಿಸುಮಾತ್ಯಾಗ ಜೀವ ಐತಿ

ನಕ್ಕಾಡಿ ಪ್ರೀತಿ ತೆನೆಯ್ಹಂಗ ಪ್ರೀತಿಯ ಹೃದಯದ ರೆಕ್ಕೆಗಳಿಗೆ ಒಲವಿನ ರಾಶಿ ನಲಿದ್ಹಂಗ
ತಲೆಮಾರಿನ ದ್ಯಾಸಗಳ ತಿರುವಿ ಮಗುಚಿ ಬಿದ್ದ ಚುಕ್ಕಿಗಳ ಕಸುನ್ಯಾಗ ಜೀವ ಐತಿ

ಸಖಿ ನಿನ ಸಂಗ ನನ್ನೆದೆಯ ಬತ್ತಿದ ಬದುನ್ಯಾಗ ಪಾತರಗಿತ್ತಿಗಳ ಚಿತ್ತಾರ
ಜಗದ ನೆತ್ತಿಗೆ ಹೋಗಿ ತಿಳಿಲಿ ಕಸುತುಂಬಿ ಮೈ ಕಣ್ಣಾಗಿಸಿ ಬಿದ್ದ ಹೊಸ್ತಿಲ
ನೋಟದಾಗ ಜೀವ ಐತಿ

**ಗಿರಿಯಪ್ಪ ಅಸಂಗಿ**
ಕಿರಸೂರ ಪೋಸ್ಟ್, ಬಾಗಲಕೋಟೆ ಜಿಲ್ಲೆ, ಬಾಗಲಕೋಟೆ – ೫೮೭ ೧೧೧




**ಅವಳ ಮೂಗಿನ ಮೇಲೆ ಅಲ್ಪ ಬೆಲೆಯ ಸಣ್ಣದೊಂದು ಚಿನ್ನದ ನತ್ತು ಹಾಗೂ ಸೂಕ್ಷ್ಮವಾಗಿ ಉಬ್ಬಿದ ಗರ್ಭದಲ್ಲಿ ಜನ್ಮವೆತ್ತದ ಶಿಶುವಿತ್ತು. ಇನ್ನು ನಾಲ್ಕೈದು ತಿಂಗಳಲ್ಲಿ ಆಕೆ ತಾಯಿಯಾಗುವವಳಿದ್ದಳು. ಆದರೆ ಈ ಬಗೆಯ ದೌರ್ಭಾಗ್ಯಕ್ಕೆ ಬಾಧ್ಯಳಾಗುವಂತಾದ್ದೇನನ್ನೋ ಆಕೆ ಮಾಡಿದ್ದಳು. ಅವಳನ್ನು ಮದುವೆಯಾದವನು ಹದಿನೈದು ದಿನಗಳೊಳಗೆ ಅವಳಿಗೆ ಕೈಕೊಟ್ಟು ಹೋಗಿದ್ದ. ಅದು ಅವಳ ತಪ್ಪೆ?**

# ಮಸಣದ ಹೂ

ಮೂಲ
**ಇಂಡಿಯನ್ ಲಿಟರೇಚರ್–1991**
ಒರಿಯಾ ಮೂಲ
**ಸಚ್ಚಿದಾನಂದ ರಾವುತ್ ರಾಯ್**
ಕನ್ನಡಕ್ಕೆ
**ಸೊಂದಲಗೆರೆ ಲಕ್ಷ್ಮೀಪತಿ**

ಜಗು ತಿಯಾದಿ ನಿಸ್ಸೀಮ ಗಾಂಜ ಭಕ್ತ, ಪೋಡು ಬಸಂತ ಹಳ್ಳಿಯಲ್ಲಿ. ಮದ್ದಲೆಯ ಮೋಡಿಗಾರ, ಅಲ್ಲದೆ ಊರಿನ ಬ್ರಾಹ್ಮಣ ಕೀರ್ತನಕಾರರ ಗುಂಪಿನ ನಿರ್ವಿವಾದದ ನಾಯಕ. ಶವ ದಹನದ ಕಾಯಕದಲ್ಲಿ ಅವನಿಗೆ ಒಳ್ಳೆ ಹೆಸರಿತ್ತು. ಈ ಕಾಯಕದಲ್ಲಿ ಅವನನ್ನು ಸರಿಗಟ್ಟುವವರು ನೆರೆಹೊರೆಯ ಹಳ್ಳಿಯಲ್ಲಿ ಯಾರೂ ಇರಲಿಲ್ಲ. ಮೇಲಾಗಿ ಹೆಣಗಳು ಕೂಡ ಅವನಿಗೆ ಸಾಕಷ್ಟು ತಲೆನೋವು ತರುತ್ತಿದ್ದವು. ಕೆಲವು ಬೆಂಕಿಗೆ ಹೊತ್ತಿಕೊಂಡು ಉರಿಯಲು ಹಿಂದೆ ಮುಂದೆ ನೋಡುತ್ತಿದ್ದವು. ಇನ್ನು ಕೆಲವು ತಾವು ಜೀವಂತವಾಗಿದ್ದಾಗ ಹೇಗೆ ಠಕ್ಕತನ ತೋರಿಸುತ್ತಿದ್ದವೋ ಹಾಗೆಯೇ ಸಾವಿನಲ್ಲೂ... ಇದ್ದಕ್ಕಿದ್ದಂತೆ ದಿಢೀರನೇ ಸೆಟೆದ ಕೈಯನ್ನೋ ಅಥವಾ ಕಾಲನ್ನೋ ಹೊರಚಾಚಿ ಬಹು ನಿಗಾ ಇಟ್ಟು ಜೋಡಿಸಿದ್ದ ಚಿತೆಯನ್ನು ಯದ್ವಾತದ್ವಾ ಗೋಳಿಸಿಬಿಡುತ್ತಿದ್ದವು. ಕೆಲವಂತೂ ಬೆಂಕಿಯ ಕಿಡಿ ತಗಲಿತೋ ಇಲ್ಲವೋ ಆಗಲೇ ದಿಢೀರನೇ 'ಡಬ್' ಎಂದು ಹೊಟ್ಟೆ ಸೀಳಿಕೊಂಡು ದೇಹದ ಕೊಬ್ಬಿನ್ನೆಣ್ಣೆಯನ್ನೆಲ್ಲ ಬೆಂಕಿಗೆ ಸುರಿಸಿ ಧಗಧಗಿಸುತ್ತಿದ್ದವು. ಇನ್ನು ಕೆಲವೇ ಕೆಲವು ಏನೂ ರಂಪ ಮಾಡದೆ ಹೊತ್ತಿ ಉರಿಯುತ್ತಿದ್ದವು. ಅಂತೂ ಕೆಲ ಸಂದಿಗ್ಧ ಸಮಯದಲ್ಲಿ ಹೆಣ ಹೊರುವವರು ಜಗುವಿನ ಸಲಹೆಗೆ ಬರುತ್ತಿದ್ದರು. ಈ ಗಾಂಜಾ ವ್ಯಸನಿ ಜಗು ನಿದ್ರೆಯ ಮುಸುಕು ಸರಿಸಿ ಮುಲುಕುತ್ತ ಮೇಲೆದ್ದು ಹೊಗೆಯಾಡುವ ಒಂದು ಕೊಳ್ಳಿಯನ್ನು ಹಿಡಿದು ಬಂದು ಮಾತು ಕೇಳದ ಹೆಣಕ್ಕೆ "ಹೋಗು, ಇಲ್ಲ ಅಂದರೆ ನಿನ್ಗೆ ಎಲ್ಡನೇ ಸಾವು ತೋರಿಸ್ಬಿಡ್ತೀನಿ" ಎಂದು ಅರಚುತ್ತ ತಲೆಬುರುಡೆ ಒಡೆದು ಚೂರು ಚೂರು ಆಗುವ



ಹಾಗೆ ರಪರಪನೆ ಬಾರಿಸುತ್ತಿದ್ದ. ಕಾಲುಗಳು ಸೀಳಿ ಸಿಬಿರಿನಂತಾಗುವಂತೆ, ಗಾಳಿ ತುಂಬಿದ ಬೆಲೂನಿಗೆ ಪಿನ್ನು ಚುಚ್ಚಿ ಠುಸ್ ಎನಿಸುವಂತೆ, ಹೆಣ ಹೊತ್ತಿ ಉರಿದು ಬೂದಿಯಾಗುವಂತೆ, ಮಾಡುವುದಕ್ಕೆ ಅವನೊಬ್ಬ ನಿಂದಲೇ ಸಾಧ್ಯವಾಗುತ್ತಿದ್ದುದು. ಬೂದಿಗುಡ್ಡೆ, ಮೊರ, ಕಸಬರಲು, ಮಡಿಕೆ ಚೂರು, ಚಿಂದಿಬಟ್ಟೆ ಹಾಗೂ ಗಂಟು ಗಂಟಾದ ತಲೆಗೂದಲು ಮತ್ತು ಉಗುರು ಗಳಿಂದ ಚೆಲ್ಲಾಪಿಲ್ಲಿ ಹರಡಿದ್ದ ಆ ರೌದ್ರ ಸ್ಮಶಾನದಲ್ಲಿ ಜಗು ಅತ್ತಿಂದಿತ್ತ ಇತ್ತಿಂದಿತ್ತ ಸುತ್ತಾಡುತ್ತಿದ್ದ ದಹನಕ್ರಿಯೆ ಪೂರ್ಣಗೊಳ್ಳುವವರೆಗೆ. ಸರಾಗವಾಗಿ ನಡೆದ ಶವಸಂಸ್ಕಾರದ ದಿನವಂತೂ ಅವನಿಗೆ ಹರ್ಷವಾಗದೆ ಇರುತ್ತಿರಲಿಲ್ಲ. "ಸಾಕಪ್ಪ ದೇವರೆ, ಇಂತಹ ಸುಲಭದ ಸಾವು ಬರಲಪ್ಪಾ" ಎನ್ನುತ್ತಾ ತೊಡೆಗೆ ಎಣ್ಣೆ ಹಚ್ಚಿ ನಿಯಮದಂತೆ ಊರ ಮುಂದಿನ ಕೊಳದಲ್ಲಿ ಮುಳುಗೇಳುತ್ತಿದ್ದ. ಹಳ್ಳಿಗೆ ಕಾಲರಾನೋ, ಸಿಡುಬೋ, ತಗಲಿದರೆ ಆಗ ಪ್ರತಿ ಮನೆಯಲ್ಲೂ ಹೆಣ ಸುಡೋದು ಇದ್ದೇ ಇರುತ್ತಿತ್ತು. ಹೀಗಾಗಿ ಜಗುವಿಗೆ ಸಹಜವಾಗಿಯೇ ಭಾರಿ ಬೇಡಿಕೆ. ಅಕಸ್ಮಾತ್ ಸತ್ತವರ ಮನೆಯವರೇ ನಾದರೂ ಅವನ ದಕ್ಷಿಣೆಯನ್ನು ಅಷ್ಟು ಪೈಸೆ ಇಷ್ಟು ಪೈಸೆ ಅಂತ ಚೌಕಾಸಿ ಮಾಡಿದರೆ ಹೆಣ ಮನೆಯಲ್ಲೇ ಕೊಳೆಯಲಿ ಅಂತ ಬಿಟ್ಟುಹೋಗುತ್ತಿದ್ದ. ಚರ್ಮ ಸುಲಿದು, ಹೆಣದ ದುರ್ನಾತ ದೇವರಿಗೆ ಪ್ರೀತಿಯಾಗ ಬೇಕು. ಒಂದು ತೊಲ ಗಾಂಜಾ, ಒಂದು ತೊಲ ಅಫೀಮು ಜೊತೆಗೆ ಕಾಲು ಪಾವಲಿ ಇಲ್ಲದೆ ಒಂದಿಂಚೂ ಜಗ್ಗುತ್ತಿರಲಿಲ್ಲ. ಇದರ ಜೊತೆಗೆ ಅಕ್ಕಿ ನುಚ್ಚು, ಹೊಸ ಅರಿವೆ ಹಾಗೂ ತದನಂತರದ ಮೂರನೇ ತಿಂಗಳ ತಿಥಿಯೂಟಕ್ಕೆ ಆಹ್ವಾನ ನೀಡಬೇಕಿತ್ತು. ಮುತ್ತೈದೆಯರ ಸಾವು ಅವನಿಗೆ ಯಾವಾಗಲೂ ಸುಯೋಗವನ್ನು ಹೊತ್ತು ತರುತ್ತಿತ್ತು. ಆಕೆ ಶ್ರೀಮಂತ ಕುಟುಂಬದವ ಳಾಗಿದ್ದರೆ ಆಕೆಯ ಮೂಗುತಿ ಅಥವಾ ಕಿವಿಯೋಲೆಗೆ ಅವನೇ ಹಕ್ಕುದಾರ. ಬಡವರ ಮನೆಯವಳಾದರೆ ಆಕೆಯ ಕಾಲುಂಗರಗಳಷ್ಟೇ ದಕ್ಕುತಿದ್ದುದು. ಹೆಣವನ್ನು ಚಿತೆಯ ಮೇಲೆ ಇಡುವ ಮುನ್ನ ಶವದ ಮೈ ಮೇಲಿನ ಆಭರಣಗಳನ್ನು ಜಗ್ಗಿಸಿ ಕೀಳುತ್ತಿದ್ದ. ಕೆಲವು ವೇಳೆ ಯಾವುದಾದರೂ ಆಭರಣ ಸುಲಭವಾಗಿ ಬರದಿದ್ದರೆ ಆಗಂತೂ ಜಗು ನಿರ್ದಯದಿಂದ ಆ ಭಾಗವನ್ನು ಗೀಳಿಹಾಕುತ್ತಿದ್ದ. ಆ ಭಾಗದಲ್ಲಿ ರಭಸದಿಂದ ಸೋರುವ ನೀಲಿಗಟ್ಟಿದ ರಕ್ತ ಇನಿತೂ ಅವನನ್ನು ಕದಲಿಸುತ್ತಿರಲಿಲ್ಲ. ಶವದ ಮೈಮೇಲೆ ಬೆಲೆ ಬಾಳುವಂಥದ್ದು ಏನೂ ಉಳಿದುಕೊಂಡಿಲ್ಲ ಎನ್ನುವುದನ್ನು ಖಾತ್ರಿ ಮಾಡಿಕೊಳ್ಳಲು ಶವವನ್ನು ಪೂರಾ ತಡಕಲು ಅವನು ಅಂಜುತ್ತಿರಲಿಲ್ಲ. ಸ್ತ್ರೀ ಬಸುರಿತನದಲ್ಲೋ ಅಥವಾ ಹೆರಿಗೆಯಲ್ಲೋ ಸತ್ತರೆ ಅವನಿಗೆ ಪರಮಾನಂದವಾಗಲು ಕಾರಣಗಳಿದ್ದವು. ಒಂದು ರೂಪಾಯಿ ನಾಣ್ಯ ಕೊಡದ ಹೊರತು ಚಟ್ಟ ಎತ್ತುತ್ತಿರಲಿಲ್ಲ. ಚೌಕಾಶಿ ಮಾಡಿದರೆ ಶವಸಂಸ್ಕಾರಕ್ಕೆ ಸಹಕರಿಸಲು ಒಪ್ಪುತ್ತಿರಲಿಲ್ಲ. ಅಲ್ಲದೆ ಅವನು ತುಂಬ ಪ್ರಭಾವಶಾಲಿ. ಇತರೆ ಚಟ್ಟ ಹೊರುವವರನ್ನು ಮುಷ್ಕರ ಹೂಡಲು ಹುರಿದುಂಬಿಸುತ್ತಿದ್ದ. ತನಗೆ ಬೆಳ್ಳಿ ನಾಣ್ಯ ದಕ್ಕಿದ ಬಳಿಕವೇ ತನ್ನ ಕಾಯಕಕ್ಕೆ ಹಿಂದಿರುಗುತ್ತಿದ್ದ. ತದನಂತರವೇ ತುಂಬ ಉತ್ಸಾಹದಿಂದ ದೇವರ ಸಂಕೀರ್ತನೆಗಳನ್ನು ಡೋಲಿನ ತಾಳಗತಿಗನುಗುಣವಾಗಿ ಕೇಕೆ ಹಾಕಿ ಹಾಡುತ್ತಿದ್ದ. ಊರ ಹಾದಿಯುದ್ದಕ್ಕೂ ಕುಣಿಯುತ್ತಾ ಬರುತ್ತಿದ್ದ. ಆಗೆಲ್ಲ ಅವನ ಶ್ವೇತವರ್ಣದ ಶರೀರದ ಮೇಲಿನ ಶುಭ್ರ ಪವಿತ್ರ ಜನಿವಾರ ದೇಹ ಬಿಟ್ಟೇಳುತ್ತಿತ್ತು. ಅವನ ಠೇಂಕಾರದ ಧ್ವನಿ ಆ ಹಳ್ಳಿಯ ಮೂಲಕ ಪ್ರತಿಧ್ವನಿಸಿ ಎಳೆ ಚಿಣ್ಣರನ್ನು ರಸ್ತೆಯಿಂದ ದೂರ ಓಡಿಸುತ್ತಿತ್ತು. ಸ್ಮಶಾನದಲ್ಲಿ ಮೃತ ಬಸುರಿಯ ಊದಿದ ಹೊಟ್ಟೆಯನ್ನು ಅಗಸ ಕೊಯ್ದು ಅಗಲಿಸಿದ ಮೇಲೆ ಇವನು ಗರ್ಭವನ್ನು ಕಿತ್ತು ಹೊರತೆಗೆಯುವನು. ಕೆಲವು ಸಾರಿ ಪೂರ್ಣ ಬೆಳವಣಿಗೆ ಕಾಣದ ಶಿಶುವನ್ನು ಬೆಂಕಿಗೆ ಎಸೆಯುವ ಮುನ್ನ ಮುದ್ದೆ ಆಗೋ ಹಾಗೆ ಅದನ್ನು ಬಡಿದು ತದನಂತರ ಎಸೆಯುತ್ತಿದ್ದ. ಅವನ ವಿಚಿತ್ರ ನಡವಳಿಯನ್ನು ಟೀಕಿಸುವ ಸಾಹಸಕ್ಕೆ ಯಾರೂ ಕೈ ಹಾಕುತ್ತಿರಲಿಲ್ಲ. ಹಾಗಿತ್ತು ಆ ನಿರ್ದಯಿಯ ಕಾರ್ಯಕ್ಷಮತೆ.

ಜಗು ತನ್ನ ಸಾಹಸಗಳಿಗೆ ವ್ಯಂಜನ ಸೇರಿಸಿ ಬಣ್ಣಿಸುತ್ತ ಜಂಭದಿಂದ, "ನರಸಿಂಗ್ ಮಿಶ್ರನ ಪತ್ನಿಯ ಚಿತೆಯನ್ನು ದೋ ಎಂದು ಸುರಿಯೋ ಮಳೆಯಲ್ಲಿ ಯಾರು ಇಟ್ಟೋರು ? ಊದಿ ಇನ್ನೇನು ಹರಿದು ನೀರಾಗೋ ಹಂತ ಮುಟ್ಟಿದ್ದ ನಾಥ್‌ಬ್ರಹ್ಮನನ್ನು ಕಿಟ್ಟ ಹಾಗೋ ಹಾಗೆ ಉರಿಸೋದಕ್ಕೆ ದಾರಿ ತೋರಿಸ್ದೋರು ಯಾರು ?" ಎಂದು ಪ್ರಶ್ನಿಸುತ್ತಿದ್ದ. ಕೆಲವು ಸಲ ಶವಸಂಸ್ಕಾರ ದೀರ್ಘಕಾಲ ಹಿಡಿಯುತ್ತಿತ್ತಲ್ಲದೆ ತೀರಾ ದಣಿವಿನ ಕೆಲಸವದಾಗಿರುತ್ತಿತ್ತು. ಅಲ್ಲದೆ, ಅವನೊಬ್ಬನೇ ಪ್ರಾಣಿ ಶವಸಂಸ್ಕಾರ ಪೂರ್ಣಗೊಳ್ಳುವವರೆಗೆ ಸ್ಮಶಾನದಲ್ಲಿ ನಿಲ್ಲುತ್ತಿದ್ದುದು. ಅಂತಹ ಅವೇಳೆಯಲ್ಲಿ ಊಹಿಸಿಕೊಳ್ಳಿ ಅವನು ಅದೆಂತಹ ಮಂದಿಯನ್ನು ಅಲ್ಲಿ ಸಂಧಿಸ ಬಹುದು ? ಅದೇ ಅವಳು... ಮಾವಿನ ಮರದ ತೋಪಿನ ಸೆರಗಿನ ಅಡ್ಡದಾರೀಲಿ ಮುಂಡ ಇಲ್ಲದ ದೆವ್ವ. ಅದೇ ಮುಖ್ತಾಜಹಾರ್ ತೊರೆಯ ಬಳಿ ಇರುವ ಮಾವಿನ ಮರದ ಕವಲ್ಲಿನಲ್ಲಿರೋ ಮುದಿದೆವ್ವ ಆಗತಾನೇ ಹುಟ್ಟಿದ ಮಗೂನ ಸುಡುತ್ತಾ ಇತ್ತು ಎಂದು ಕೊರೆವ




ಚಳಿಯಲ್ಲಿ ಜಗು ತನ್ನ ಗಂಟಲನ್ನು ತಿಳಿಮಾಡಿ ಕೊಳ್ಳುತ್ತಾ ತೀರ ಸಾವಧಾನದಿಂದ ಕಣ್ಣಿಗೆ ಕಟ್ಟುವಂತೆ ತನ್ನ ಅನುಭವಗಳನ್ನು (?) ವಿವರಿಸುತ್ತಿದ್ದರೆ ಭಾಗವತ್ ರೂಮ್‌ನ ಕೇಳುಗರು ಭಯದಿಂದ ವಿಹ್ವಲಗೊಂಡು ಮತ್ತಷ್ಟು ಸರಿದು ಒತ್ತೊತ್ತಾಗಿ ಕುಳಿತುಕೊಳ್ಳುತ್ತಿದ್ದರು.

ಆ ಅಶ್ವಿಜ ಮಾಸದ ಸಂಜೆಯ ಕೊನೆಯಲ್ಲಿ ಆಕಾಶ ಕಾರ್ಮೋಡಗಳಿಂದ ಆವರಿಸಿ ಕೆಳಗೆ ತೂರಾಡುತ್ತಿತ್ತು. ಸುಣ್ಣದ ಪಟ್ಟಿಯನ್ನು ಹಣೆಗೆ ಪಟ್ಟು ಹಾಕಿ, ತಲೆಯ ಸುತ್ತಾ ಮಫ್ಲರ್ ಸುತ್ತಿ ಸಿಡಿಯುತ್ತಿದ್ದ ತಲೆಯನ್ನು ಒತ್ತುತ್ತಾ ವರಾಂಡದಲ್ಲಿ ಜಗು ಕುಳಿತಿದ್ದ. ಆ ಹಳ್ಳಿಯ ಅರ್ಚಕ ಗಟ್ಟಿಯಾಗಿ 'ಹರಿವಂಶ' ಪಠಿಸುತ್ತಿದ್ದ. ಇದ್ದಕ್ಕಿದ್ದಂತೆ ರೋದನ ಸಂಜೆಯ ಪ್ರಶಾಂತತೆಯನ್ನು ಸೀಳಿಕೊಂಡು ಹೊರಬಂದಿತು. ಆ ರೋದನ ಯಾವುದೆಂದು ಜಗು ನಿಖರವಾಗಿ ಅರ್ಥಮಾಡಿ ಕೊಂಡ. ಆದರೆ ಅದು ಯಾವ ಮೂಲೆಯಿಂದ ಬರುತ್ತಿದೆ ಎಂದು ಮಾತ್ರ ಗೊತ್ತಾಗಲಿಲ್ಲ. ಅವನಿಗೆ ಅಸ್ತಮಿತತೆ ತಲೆದೋರಿದಂತೆ ಅನಿಸಿತು. ಆದರೆ ಅದು ಹೆಚ್ಚು ಹೊತ್ತು ಉಳಿಯಲಿಲ್ಲ. ಆ ಊರ ಮತ್ತೊಂದು ಬದಿಯಲ್ಲಿದ್ದ ಅಂಗಡಿಯೊಂದರಿಂದ ಹಿಂದಿರುಗಿ ಬಂದ ಯಾರೋ ಓರ್ವ ಅವನಿಗೆ ಸುದ್ದಿ ಮುಟ್ಟಿಸಿದ. ಜತಿಯನ ಪ್ರಾಯದ ಮಡದಿ ಕುರಿತ ಸುದ್ದಿ ಅದು. ಜಗು ಎದ್ದು ಕುಳಿತ. ಇಲ್ಲಿ ಅವನಿಗೊಂದು ಭರ್ಜರಿ ಅವಕಾಶ ಕಾದಿತ್ತು. ಅಪಾರ ಬೆಳ್ಳಿ ನಾಣ್ಯಗಳ ಗಳಿಕೆಗೆ ಅನುಮಾನವೇ ಇರಲಿಲ್ಲ. ಈ ಪಾಪದ ಪ್ರಪಂಚದಲ್ಲಿ ಸ್ತ್ರೀಯರು ತಮ್ಮ ಬಡ ಗಂಡಂದಿರನ್ನು ಬಿಟ್ಟು ಮೇಲಿಂದ ಮೇಲೆ ಸಾಯುತ್ತಿರಲಿಲ್ಲ.

ಆದರೆ ಒಡನೆಯೇ ತನ್ನ ಸಂತೋಷಕ್ಕೆ ಕಲ್ಲು ಬಿತ್ತೆಂದು ಅವನಿಗೆ ಗೊತ್ತಾಯಿತು. ಆ ಬೆಡಗಿ ಈಗಾಗಲೇ ಗರ್ಭ ಧರಿಸಿದ್ದಳು. ಸ್ಥಳೀಯ ಮೈಯಿಳಿಸುವವನ ಮದ್ದು ಅವಳಿಗೆ ಸಾವನ್ನು ತಂದಿತ್ತಿತ್ತು. ಈಗ ತಾನು ಜಾತಿಯಿಂದ ಬಹಿಷ್ಕಾರಗೊಳ್ಳುವ ಗಂಡಾಂತರಕ್ಕೆ ಸಿಲುಕಿಕೊಂಡು ಅವಳ ಶವಸಂಸ್ಕಾರ ಮಾಡಬೇಕಿತ್ತು.

ಈ ಪ್ರಪಂಚದಲ್ಲಿ ಜತಿಯನ ವೃದ್ಧ ತಾಯಿಗೆ ಅವಳ ಮಗ ಬಿಟ್ಟುಹೋಗಿದ್ದ ಆಸ್ತಿ ಎಂದರೆ ಪ್ರಾಯದ ಈ ಸೊಸೆ ಮಾತ್ರ. ಈಗ ಅವಳೂ ಕೂಡ ಈ ಸಂದರ್ಭದಲ್ಲಿ ಭಾರಿ ಕಳಂಕ ಹೊತ್ತು ಕಂತೆಯೊಗೆ ದಿದ್ದಳು. ಮೂರು ವರ್ಷಗಳ ಹಿಂದೆ ಮನೆ ಬಿಟ್ಟ ಜತಿಯ ತನ್ನ ಅದೃಷ್ಟ ಅರಸಿ ಕಲ್ಕತ್ತೆಗೆ ಹೋಗಿ ಸಂಸಾರದೊಂದಿಗಿನ ತನ್ನ ಸಂಬಂಧ ಕಳೆದು ಕೊಂಡಿದ್ದ, ಈಗವನು ಬೇರೊಬ್ಬಳೊಂದಿಗೆ ವಾಸಿಸು ತ್ತಿರುವನೆಂಬ ಸುದ್ದಿ ಹರಡಿತ್ತು. ತನ್ನ ಮಗನಿಂದ ಪರಿತ್ಯಜಿಸಲ್ಪಟ್ಟ ಸೊಸೆಯನ್ನು ಕಳಕೊಂಡು ಬೀದಿ ಪಾಲಾದ ಜತಿಯನ ತಾಯಿಗೆ ಪಾಪ, ಈಗ ತನ್ನ ವಿಧಿಯನ್ನು ಹಳಿಯುವುದೊಂದೇ ಉಳಿದದ್ದು.

ಊರ ಹಿರಿಯರು ಈ ಮುದಿ ಹೆಂಗಸನ್ನು ತರಾಟೆಗೆ ತೆಗೆದುಕೊಂಡರು, "ನೀನು ಬೆಳೆದ ಹೆಣ್ಣಿನ ಮೇಲೆ ನಿಗಾ ಇಡಲಿಲ್ಲ" ಎಂದು. ಆದರೆ ಅದೇನು ಅವಳ ವ್ಯಕ್ತಿಗತ ದೌರ್ಭಾಗ್ಯವಾಗಿರಲಿಲ್ಲ. ಪೊಲೀಸ ರೇನಾದರೂ ಬಂದರೆ ಜಾತಿ ಮರ್ಯಾದೆ ಹಾಗೂ ಊರ ಮರ್ಯಾದೆ ಎರಡಕ್ಕೂ ಕಳಂಕ ತಂದುಕೊಂಡ

ಹಾಗೆ. ಆದಷ್ಟು ಶೀಘ್ರ ಶವಸಂಸ್ಕಾರ ಮಾಡಿ ಬಿಡಬೇಕು. ಏಕೆಂದರೆ, ಈಕೆಯ ಮೇಲೆ ಪೊಲೀಸರಿಗೆ ಚಾಡಿ ಹೇಳುವವರು ಹಳ್ಳಿಯಲ್ಲಿ ಸಾಕಷ್ಟು ಮಂದಿ ಇಲ್ಲ ಅಂತ ಅಲ್ಲ. ಈಗ ಜತಿಯನ ತಾಯಿ ತನ್ನ ಬೊಚ್ಚು ಬಾಯಿಯ ತುಟಿ ಎರಡು ಮಾಡದೆ ಊರ ಹಿರಿಯರ ಮುಂದೆ ದೈನೇಸಿ ಅಂತ ನಿಂತಳು.

ಸ್ಮಶಾನಕ್ಕೆ ಹೆಣ ಒಯ್ಯಲು ಕೆಲವು ಯುವಕರು ಸ್ವಇಚ್ಛೆಯಿಂದ ಮುಂದೆ ಬಂದರು. ಹುಲ್ಲಿನ ಹಗ್ಗದ ಹಣಿಕೆ ಹೆಣೆದರು. ಬಿದಿರಿನ ಚಟ್ಟ ಸಿದ್ಧ ಮಾಡಿದರು. ಮೊರ, ಕಸಬರಲು, ಮಡಿಕೆ ಹಾಗೂ ಡೋಲಕಗಳನ್ನು ಯಾರು ಯಾರದೋ ಮನೆಗಳಿಂದ ಸಂಗ್ರಹಿಸಿದರು. ಶವವನ್ನು ಸೀರೆಯಲ್ಲಿ ಸುತ್ತಿ ಚಟ್ಟಕ್ಕೆ ತಂದು ಮಲಗಿಸಿದರು. ಜಗುಗೆ ಹೇಳಿ ಕಳಿಸಿದರು. ಶವಸಂಸ್ಕಾರದ ವಿಧಿ ಸುಲಭದ ವ್ಯವಹಾರವಲ್ಲ. ಯಾವ ಕ್ಷಣದಲ್ಲಾದರೂ ಮಳೆ ಬರಬಹುದೆನ್ನುವ ಭಯ ಕಾಡುತ್ತಿತ್ತು. ಅಲ್ಲದೆ ಪೊಲೀಸರೇನಾದರೂ ಶವಸಂಸ್ಕಾರ ಮುಗಿಯುವ ಮುನ್ನ ಬಂದರೇ ಇಡೀ ಊರಿಗೆ ಊರೇ ಜೈಲು ಸೇರಬೇಕು !

ಆದರೆ ಜಗುಗೆ ಅದೆಲ್ಲ ಕೇಳಿಸುತ್ತಿಲ್ಲ. ಆ ಹದಿಹರೆಯದ ಹೆಂಗಸು ಪಾಪದಲ್ಲಿ ಸತ್ತಿದ್ದಾಳೆ. ಅವಳ ಶವಸಂಸ್ಕಾರಕ್ಕೆ ಸಹಕರಿಸಿ ತಾನು ಅಪವಿತ್ರಗೊಳ್ಳಲು ಅವನೀಗ ಬಯಸುತ್ತಿಲ್ಲ. ಈ ಬಗೆಯ ಬಲವಾದ ನೈತಿಕ ಭಾವನೆಗಳನ್ನು ಅಷ್ಟು ಸುಲಭವಾಗಿ ಮೆಟ್ಟಿ ನಿಲ್ಲಲಾಗುವುದಿಲ್ಲ. ಕನಿಷ್ಠ ಪಕ್ಷ ಐದು ಅಗಲವಾದ ಬೆಳ್ಳಿ ನಾಣ್ಯಗಳನ್ನು ಅವನಿಗೆ ನೀಡದ ಹೊರತು !

ಜತಿಯನ ತಾಯಿ ಗೋಡೆ ಕೊರೆದು ಹೂತಿಟ್ಟಿದ್ದ ಹಣ ಹೊರ ತೆಗೆದಳು. ಆದರೆ ಅದು ಸೌದೆ, ಸೀಮೆಎಣ್ಣೆ, ನುಚ್ಚಕ್ಕಿ ಹಾಗೂ ಹಜಾಮ ಮತ್ತು ಅಗಸರವನ ದಕ್ಷಿಣೆಗೇ ಸಾಲದಂತಿತ್ತು. ಆದ ಕಾರಣ ಜಗು ದಯಾರ್ದ್ರನಾದ. ಶವದ ಮೂಗಿನಲ್ಲಿರುವ ನತ್ತುವಿನ ಮೇಲಿತ್ತೇನೋ ಅವನ ಕಣ್ಣು ?

"ನಿಯಾಮಕನನ್ನು ಸ್ತುತಿಸಿ. ಸತ್ಯ ಮಾತ್ರವೇ ದೇವರು, ದೇವನನ್ನು ಸ್ತುತಿಸಿ" ಎಂದ ಹೆಣ ಹೊರುವವರ ಕಡೆ ತಿರುಗಿ. ಶವದ ಮೆರವಣಿಗೆಯು ಕ್ಷಣಾರ್ಧದಲ್ಲಿ ರುದ್ರಭೂಮಿ ತಲುಪಿತು. ಮಾರುತ ಸ್ತಬ್ಧಗೊಂಡಿತು. ಗಾಳಿಯಲ್ಲಿ ಒಂದು ಬಗೆಯ ಕೆಟ್ಟ ವಾಸನೆ ಹರಡಿತ್ತು. ಅಸ್ತವ್ಯಸ್ತಗೊಂಡಿರುವ ಅಲ್ಲಿ ಒಂದಿಷ್ಟು ಜಾಗವನ್ನು ಸ್ವಚ್ಛಗೊಳಿಸಿ ಗುಂಡಿ ತೋಡಿದ ಜಗು. ಅದಕ್ಕೆ ಒಂದೊಂದೇ ಒಣ ಸೌದೆ ತುಂಬಿದ. ಬಳಿಕ ಶವವನ್ನೆತ್ತಿ ಚಿತೆ ಮೇಲೆ ಇಟ್ಟ.

ಯಾವಾಗವನು ಶವದ ಮುಖದ ಮೇಲಿನ ಅವಕುಂಠನವನ್ನು ಸರಿಸಿದನೋ ಆಗ ಇದ್ದಕ್ಕಿದ್ದಂತೆ ಮೋಡಗಳ ಮರೆಯಿಂದ ಚಂದ್ರ ಇಣುಕಿದ. ಬೆಳ್ದಿಂಗಳು ಶವದ ಮೂಗಿನ ನತ್ತಿಗೆ ತಾಗಿದೊಡನೆ ಅದು ಥಳಥಳ ಹೊಳೆಯಿತು.

ಜಗುನ ಬೆನ್ನುಹುರಿಯಲ್ಲಿ ನಡುಕ ಹರಿಯಿತು. ಕ್ಷಣ ಹೊತ್ತು ಮೋಡಗಳ ಮರೆಯಲ್ಲಿ ಚಂದ್ರ ಅದೃಶ್ಯನಾದ. ಮತ್ತೆ ತೇಲಿ ಬಂದ. ಹೀಗೆ ಶವದ ಕಾಂತಿಹೀನ ಮುಖದ ಮೇಲೆ ಕತ್ತಲೆ ಮತ್ತು ಬೆಳಕಿನ ಕಣ್ಣುಮುಚ್ಚಾಲೆಯಾಟ ನಡೆದೇ ಇತ್ತು.

## ಅಭಿನಂದನೆಗಳು ...

ಉಡುಪಿಯ ವಿಮಲಾ ಪೈ ದತ್ತಿನಿಧಿಯಿಂದ ನೀಡುವ ೨೦೧೬ನೇ ಸಾಲಿನ 'ರಾಷ್ಟ್ರಕವಿ ಗೋವಿಂದ ಪೈ' ಪ್ರಶಸ್ತಿಯು ಕನ್ನಡದ ಖ್ಯಾತ ಕವಿ, ವಿಮರ್ಶಕ, ಕತೆಗಾರ ಡಾ॥ ಕೆ. ವಿ. ತಿರುಮಲೇಶ್ ಅವರಿಗೆ ಲಭಿಸಿದೆ. ಲೇಖಕರಿಗೆ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ಅಭಿನಂದನೆಗಳು.

ಜಗು ಆ ಆಭರಣದೆಡೆ ಕೈ ಚಾಚಿದವನು ಹಾಗೆಯೇ ನಿಂತ. ಆ ಹೆಂಗಸಿನ ಮುಖ ಬಾಡಿದ ನೀಲಿ ವರ್ಣದ ಲಿಲಿ ಹೂವಿನಂತೆ ತೋರಿತು. ಚಂದ್ರನೊಂದಿಗೆ ಸರಸವಾಡುತ್ತಿದ್ದ ಮೋಡಗಳನ್ನು ಹೋಲುತ್ತಿತ್ತು ಅವಳ ನೀಳ ದಟ್ಟ ಕೇಶರಾಶಿ. ಜಗುಗೆ ತನ್ನ ಹೊಟ್ಟೆಯಲ್ಲೊಂದು ಗಂಟು ಇರುವಂತೆ ಭಾಸವಾಯಿತು.

ಈಗ ಮೋಡಗಳು ಮರೆಯಿಂದ ಜಾರಿದವು. ಜಗು ಕಾದ, ಗಂಟಲು ಭಾರವಾಯಿತು. ಯಾಕಿಷ್ಟು ಕುಗ್ಗಿಹೋದ ಜಗು, ಸಾಕಷ್ಟು ಸುಂದರ ಯುವತಿಯರನ್ನು ಸಂಸ್ಕಾರ ಮಾಡಿಲ್ಲವೇನು ಅವನು ? ಬಹಳಷ್ಟು ಸ್ತ್ರೀಯರು ಇನ್ನೂ ಮೋಹಕವಾಗಿದ್ದರೂ ಇವಳೊಬ್ಬಳದೇನು ಮಹಾ ವಿಶೇಷ ?

ಅವಳನ್ನೇ ಕುರಿತು ಚಿಂತಾಮಗ್ನನಾದ. ಅವಳ ಮೂಗಿನ ಮೇಲೆ ಅಲ್ಪ ಬೆಲೆಯ ಸಣ್ಣದೊಂದು ಚಿನ್ನದ ನತ್ತು ಹಾಗೂ ಸೂಕ್ಷ್ಮವಾಗಿ ಉಬ್ಬಿದ ಗರ್ಭದಲ್ಲಿ ಜನ್ಮವೆತ್ತದ ಶಿಶುವಿತ್ತು. ಇನ್ನು ನಾಲ್ಕೈದು ತಿಂಗಳಲ್ಲಿ ಆಕೆ ತಾಯಿಯಾಗುವವಳಿದ್ದಳು. ಆದರೆ ಈ ಬಗೆಯ ದೌರ್ಭಾಗ್ಯಕ್ಕೆ ಬಾಧ್ಯಳಾಗುವಂತಾದ್ದೇನನ್ನೋ ಆಕೆ ಮಾಡಿದ್ದಳು.

ಅವಳನ್ನು ಮದುವೆಯಾದವನು ಹದಿನೈದು ದಿನಗಳೊಳಗೆ ಅವಳಿಗೆ ಕೈಕೊಟ್ಟು ಹೋಗಿದ್ದ. ಅದು ಅವಳ ತಪ್ಪೆ? ತನ್ನ ದೈಹಿಕ ತೃಷೆಯನ್ನು ಹಿಂಗಿಸಿಕೊಳ್ಳಲು ಚೈತನ್ಯ ಚಿಮ್ಮುತ್ತ, ಆದರಣೀಯವಾಗಿದ್ದುಕೊಂಡ ಗಂಡಸಿನ ಸ್ಪರ್ಶಸುಖಕ್ಕೆ ಕಡುಬಯಕೆಯನ್ನು ವ್ಯಕ್ತಪಡಿಸುತ್ತ, ಅತಿಯಾತನೆ ಕೊಡುವ ದೇಹದ ಕಾಮನೆಗಳನ್ನು ತೃಪ್ತಿಗೊಳಿಸಲು ಹೊರಟಿದ್ದು ಅವಳ ತಪ್ಪೆ ? ಉಕ್ಕಿ ಹರಿವ ಯೌವ್ವನ ಅವಳ ತಪ್ಪೆ ? ಕಾಮವಾಂಛೆಗಳಿಂದ ಬೆಂದು ಬಸವಳಿದ ಅವಳ ದೇಹ ತಪ್ಪುನೆಪ್ಪುಗಳ ಸಂವೇದನಾಶಕ್ತಿಯನ್ನು ಮರೆತುಬಿಟ್ಟಿದ್ದು ಅವಳ ತಪ್ಪೆ ?... ತಪ್ಪು ಯಾವುದು, ಸರಿ ಯಾವುದು? ತೀರ್ಪುಗಾರರು ಯಾರು ? ಹೇಗಾದರೂ...

"ಜಗು, ಬಾ ನಿಧಾನ ಮಾಡ್ಬೇಡ. ಯಾವ ಕ್ಷಣದಲ್ಲಾದರೂ ಆ ಕೆಂಪು ಪೇಟದವರು ನಮ್ಮ ಮೇಲೆ ಮುಗಿಬೀಳಬಹುದು. ಮೂಗುತಿ ತಗೋ, ಕೊಳ್ಳಿ ಇಡು, ಕೈ ಮುಗೀತೀವಿ, ಇನ್ನು ಹೆಚ್ಚು ತಡ ಮಾಡ್ಬೇಡ" ಎಂದರು ಚಟ್ಟ ಹೊತ್ತವರು ಚಡಪಡಿಸುತ್ತ.

"ನನ್ಗೆ ಬೇಡ ಅದು, ಅವಳ ಜೊತೇಗೇ ಹೋಗ್ಲಿ ಅದು" ಎಂದ ಜಗು ಯಾವುದೋ ಕಲ್ಪನೆಯಿಂದ ಎಚ್ಚೆತ್ತುಕೊಳ್ಳುತ್ತಾ.

"ನೀನ್ಹೇಳೋದು ನಿಜಾನಾ ? ಹಾಗಾದರೆ ಆ ಹಾದರಗಿತ್ತೀನಾ ಸುಡು. ದೇವರೊಬ್ಬನಿಗೆ ಗೊತ್ತು ಎಷ್ಟು ಹೊತ್ತು ತಗೋತ್ತಾಳೋ ಬೂದಿ ಆಗೋಕೆ ?"

"ಸೀಮೆಎಣ್ಣೇಲಿ ನೆನೆಸಿ... ಹತ್ತುತ್ತೆ."

"ಆ ನತ್ತು ಯಾಕೆ ಬೇಡವಾಯ್ತು ನಿನಗೆ ? ಹಾಗನ್ನಿಸ್ತಾ ಮನ್ಸು ?" ಅಣಕಿಸಿದರು ಚಟ ಹೊತ್ತವರು.

ಅವನು ಮಾತನಾಡಲಿಲ್ಲ.

ಬೆಂಕಿಯ ಜ್ವಾಲೆಗಳು ಭುಗಿಲೆದ್ದವು. ಸೌದೆ ಚಟಪಟ ಗುಟ್ಟಿತು. ಶವ ಅತ್ತಿತ್ತ ತುಸು ಅಲುಗಾಡಿತು. ಚರ್ಮ ಸುಕ್ಕಾಗಿ ಬಳಿಕ ಕಪ್ಪು ಬಣ್ಣಕ್ಕೆ ತಿರುಗಿತು. ಜಗುನ ಕಣ್ಣುಗಳು ಚಿತೆಯ ಮೇಲೆಯೇ ಏಕಾಗ್ರಗೊಂಡವು. ಗಂಟೆಯೊಂದು ಉರುಳಿದ ಮೇಲೆ ಅವನು ಬಡಿಗೆ ಹಿಡಿದು ಚಿತೆಯ ಗುಡ್ಡೆಗೆ ತಿವಿದ. ತಲೆಬುರುಡೆ ಜಜ್ಜಲು ಇನ್ನೇನು ಸಮಯ ಸಮೀಪಿಸಿತ್ತು. ನಿಟ್ಟುಸಿರೊಂದು ಹೊರಬಿತ್ತು ಅವನಿಂದ.

ರುದ್ರಭೂಮಿಯ ತುತ್ತತುದಿಯಿಂದ ಗೂಬೆಯೊಂದು ಪೂತ್ಕಾರ ಹಾಕಲು ಪ್ರಾರಂಭಿಸಿತು. ರಣಹದ್ದುಗಳು ರೆಕ್ಕೆಗಳನ್ನು ಬಡಿದವು. ಗಂಡು ನರಿಯೊಂದು ಊಳಿಟ್ಟಿತು. ಶವದ ಕಟುವಾಸನೆ ಗಾಳಿಯಲ್ಲಿ ತೇಲುತ್ತಿತ್ತು.

ಶವದಹನ ಸುಗಮವಾಗಿ ನಡೆಯಿತು. ಮಳೆಯೂ ನಿಂತಿತ್ತು. ಚಟ್ಟ ಹೊತ್ತವರು ತಮ್ಮತಮ್ಮೊಳಗೆ ಖುಷಿಯಿಂದ ಹರಟೆ ಹೊಡೆಯುತ್ತಿದ್ದರು.

"ಆ ಸೂಳೆಯ ಆಭರಣಾನ ಅವನು ಮುಟ್ಟದೆ ಇದ್ದದ್ದು ಒಳ್ಳೆಯದೆ" ಎಂದ ಯಾರೋ ಒಬ್ಬ. ಅವನ ಮಾತಿಗೆ ಎಲ್ಲರಿಂದ ಏಕಕಂಠದ ಸಹಮತಿ ವ್ಯಕ್ತವಾಯಿತು.

"ಆ ಒಡವೆ ಜಗುಗೆ ಒಳ್ಳೇದು ತಾರದು" ಜಗು ಅಳುಕಿದ.

"ಸೂಳೆಯರ ಹಿಂದೆ ಸುತ್ತಿ ಅವಳ ಹೊಟ್ಟೆಯ ಫಸಲನ್ನು ಹಾಳುಮಾಡ್ದೋರೆಲ್ಲರ್ಗೂ ಇಂಥಾದ್ದೆ ಸಾವು ದಕ್ಕೋದು. ಎಷ್ಟೇ ಆಗಲಿ, ಧರ್ಮ ಅನ್ನೋದು ಇದೆ ನೋಡಿ. ನೀವು ಕಂಡೂ ಕಾಣದಂತೆ ಇರಕ್ಕಾಗಲ್ಲ" ಎಂದ ಮಗದೊಬ್ಬ.

"ನನ್ಗೊಂದು ಸಹಾಯ ಮಾಡ್ತೀರಾ – ಬಾಯ್ ಮುಚ್ಕೊಂಡು..."

"ಹೇ, ಬಾಯ್ ಮುಚ್ಚಿ" ಎಂದ ಜಗು ತಿಯಾದಿ. ಧ್ವನಿ ಕರ್ಕಶವಿತ್ತು.

*(ಒರಿಯಾ ಸಾಹಿತ್ಯ ಕ್ಷೇತ್ರದಲ್ಲಿ ಶ್ರೀ ಸಚ್ಚಿದಾನಂದ ರಾವುತ್ ರಾಯ್ (೧೯೧೬) ಖ್ಯಾತ ಹೆಸರು. ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಜ್ಞಾನಪೀಠ ಪ್ರಶಸ್ತಿ ವಿಜೇತರು. ಭಾರತ ಸರ್ಕಾರ ೧೯೬೨ರಲ್ಲಿ ಪದ್ಮಶ್ರೀ ಪ್ರಶಸ್ತಿ ನೀಡಿ ಗೌರವಿಸಿದೆ. ಅವರ ಈ ಸಣ್ಣಕತೆ ೧೯೯೧ರ ಇಂಡಿಯನ್ ಲಿಟರೇಚರ್‌ನಿಂದ ಹೆಕ್ಕಿದ್ದು.)*

**ಮೂಲ :** ಇಂಡಿಯನ್ ಲಿಟರೇಚರ್–೧೯೯೧
ಒರಿಯಾ ಮೂಲ : **ಸಚ್ಚಿದಾನಂದ ರಾವುತ್ ರಾಯ್**
ಕನ್ನಡಕ್ಕೆ : **ಸೊಂದಲಗೆರೆ ಲಕ್ಷ್ಮೀಪತಿ**
ನಂ. ೧೨೨೩, ೭ನೇ ಕ್ರಾಸ್, ಚಂದ್ರಾ ಬಡಾವಣೆ, ವಿಜಯನಗರ ಬೆಂಗಳೂರು – ೫೬೦ ೦೪೦

# ದಿ। ಕೆ. ಜಿ. ಸೋಮಶೇಖರ್



೧೯೪೬ರಲ್ಲಿ ಹಿರೇಕೇರೂರಿನಿಂದ ಬೆಂಗಳೂರಿಗೆ ವಿದ್ಯಾಭ್ಯಾಸಕ್ಕಾಗಿ ಬಂದ ಕೆ. ಜಿ. ಸೋಮಶೇಖರ್ ವಿಜಯ ಕಾಲೇಜಿನ ವಿದ್ಯಾರ್ಥಿಯಾಗಿದ್ದರು. ಓದಿನಲ್ಲಿ ಅಷ್ಟಾಗಿ ಒಲವು ಇರದಿದ್ದ ಸೋಮಶೇಖರ್ ಅವರಿಗೆ ಚಿತ್ರಕಲೆಯಲ್ಲಿ ವಿಶೇಷ ಆಸಕ್ತಿ. ಹಿರಿಯರಿಂದ ಯಾವುದೇ ತೆರನಾದ ಪ್ರೋತ್ಸಾಹವೂ ಇರಲಿಲ್ಲ. ಈ ಹಿನ್ನೆಲೆಯಲ್ಲಿ ತನ್ನ ಸ್ವಭಾವಕ್ಕೆ ತಕ್ಕಂತೆ ಚಿತ್ರಕಲೆಗೆ ಮನಸೋತ ಕೆ. ಜಿ. ಎಸ್.ರ ಪಾಲಿಗೆ ಯಾವುದೇ ವಿಧ್ಯುಕ್ತವಾದ ತರಬೇತಿ ಇರಲಿಲ್ಲ. ಒಂದರ್ಥದಲ್ಲಿ ತನ್ನದೇ ಆದ ತಾಂತ್ರಿಕತೆಯನ್ನು ರೂಢಿಸಿಕೊಂಡು ಸ್ವಂತಿಕೆ ಮೆರೆದದ್ದು ಇವರ ಹೆಚ್ಚುಗಾರಿಕೆ.

ಮೊದಲಿಗೆ, ೧೯೫೫ರಲ್ಲೇ ಗಂಧದ ಮರದ ಫಲಕಗಳ ಮೇಲೆ ಕಿರು ಭಾವಚಿತ್ರಗಳನ್ನು ರಚಿಸುವ ಹವ್ಯಾಸಕ್ಕೆ ಮೊರೆಹೋದ ಸೋಮಶೇಖರ್ ಅವರಿಗೆ ಶ್ರೀ ಆ್ಯನಿ ಬೆಸೆಂಟ್ ಅವರ ಕಾರ್ಯದರ್ಶಿಯಾಗಿದ್ದ ಜಿ. ವೆಂಕಟಾಚಲಂ ಅವರೊಡನೆ ಸಂಪರ್ಕ ಬೆಳೆಯಿತು. ಹತ್ತು ಹಲವು ಸಲಹೆಗಳನ್ನು ನೀಡುತ್ತ ಆಗಾಗ್ಗೆ ನೆರವಿಗೆ ಮುಂದಾಗುತ್ತಿದ್ದ ವೆಂಕಟಾಚಲಂ ಕೆ. ಜಿ. ಎಸ್. ಪಾಲಿಗೆ 'ಫ್ರೆಂಡ್, ಫಿಲಾಸಫರ್ ಆ್ಯಂಡ್ ಗೈಡ್' ಆಗಿಬಿಟ್ಟರೆಂದರೆ ಉತ್ಪ್ರೇಕ್ಷೆಯಾಗಲಾರದು.

೧೯೬೦ರ ಸುಮಾರಿಗೆ ಬಂಡಾಯದ ಮನೋವೃತ್ತಿಯ ಯುವ ಸೋಮಶೇಖರ್ ಹೊಸ ಬದುಕನ್ನು ಕಂಡುಕೊಳ್ಳಲು ಮುಂಬಯಿಗೆ ತೆರಳಿದ ಮೇಲೆ ಕಾಕತಾಳೀಯವೋ ಏನೋ ಎಂಬಂತೆ ಅವರಲ್ಲಿದ್ದ ಅದ್ಭುತ ಕಲಾವಂತಿಕೆ, ಪ್ರತಿಭೆಯನ್ನು ಗುರುತಿಸಿದ ಕೆ. ಕೆ. ಹೆಬ್ಬಾರ್, ಸರ್ ಕೊವಾಸ್ಜಿ ಜಹಂಗೀರ್, ಎಂ. ಆರ್. ಅರ್ಚೇಕರ್ ಮುಂತಾದ ಪ್ರಖ್ಯಾತ ಕಲಾವಿದರ ಪರಿಚಯವಾದುದು ಅವರ ವೃತ್ತಿಜೀವನಕ್ಕೆ ಒಂದು ಹೊಸ ತಿರುವು ನೀಡಿತು. ಅಂದಿನ ಸಂದರ್ಭದಲ್ಲಿ ಈ ಕಲಾವಿದರಿಗೆ ಒದಗಿಬಂದಿದ್ದ ವಿಶಿಷ್ಟ ಶೈಲಿ ಮತ್ತು ಚಿತ್ರಕಲೆ ರಚನೆಗಾಗಿ ಬಳಸುತ್ತಿದ್ದ ಸಾಧನಗಳಿಗೆ ಅವುಗಳದೇ ಆದ ವಿಶೇಷತೆ ಇತ್ತು. ಈ ವಿಧಾನ ಇತರರು ಅನುಸರಿಸುತ್ತಿದ್ದ ವಿಧಾನಗಳಿಗಿಂತ ತೀರಾ ಭಿನ್ನ. ಉನ್ನತಮಟ್ಟದ ಕಲಾವಿದನೆಂಬ ಹೆಸರು ಗಳಿಸುವ ನಿರ್ಣಾಯಕ ಗಳಿಗೆಯಲ್ಲೇ ದೃಷ್ಟಿದೋಷದ ಕಾರಣದಿಂದಾಗಿ ಸೋಮಶೇಖರ್ ಚಿತ್ರಕಲಾ ರಚನೆಗೆ ವಿದಾಯ ಹೇಳಲೇಬೇಕಾಗಿ ಬಂದ ದುರಂತವೂ ಘಟಿಸಿಹೋಯಿತು. ಆ ಹೊತ್ತಿಗಾಗಲೇ ಇವರ ಚಿತ್ರಗಳು ಸಾಕಷ್ಟು ಖ್ಯಾತಿ ಗಳಿಸಿದ್ದವು. ಕಿರು ಭಾವಚಿತ್ರ ರಚನೆ ತುಂಬ ಸೂಕ್ಷ್ಮದ ಕೆಲಸ.

೧೯೭೦ರ ದಶಕ ಅವರ ಬದುಕಿನ ಮತ್ತೊಂದು ಮಹತ್ತರ ಘಟ್ಟಕ್ಕೆ ನಾಂದಿ ಹಾಡಿತೆಂದೇ ಹೇಳಬೇಕು. ಆಪ್ತಮಿತ್ರ ಹಾಗೂ ಖ್ಯಾತ ಛಾಯಾಗ್ರಾಹಕ ಚೈತನ್ಯ ಭಾಯ್ ಪಟೇಲ್ ಛಾಯಾಚಿತ್ರ ಗ್ರಹಣ ಕಲೆಯಲ್ಲಿ ವಿಧ್ಯುಕ್ತವಾದ ತರಬೇತಿ ನೀಡಿ ಪ್ರೋತ್ಸಾಹಿಸಿದರು. ಹೀಗೆ ಆ ವೇಳೆಗಾಗಲೇ ಬದುಕಿನಲ್ಲಿ ಹತ್ತಾರು ಏಳುಬೀಳುಗಳನ್ನು ಕಂಡಿದ್ದ ಸೋಮಶೇಖರ್ ಮತ್ತೆ ಬೆಂಗಳೂರಿಗೆ ಬಂದು ನೆಲೆಸಿ ಛಾಯಾಚಿತ್ರಗ್ರಹಣ ವೃತ್ತಿಯಲ್ಲಿ ಸಂಪೂರ್ಣವಾಗಿ ತೊಡಗಿಕೊಂಡರು. ತಾನು ನಡೆದದ್ದೇ ದಾರಿ ಎಂಬ ಹಟಮಾರಿ ಸ್ವಭಾವದ ಕೆ. ಜಿ. ಎಸ್. ಮದುವೆ, ಮುಂಜಿಯಂತಹ ಯಾವುದೇ ಸಮಾರಂಭಗಳಿಗೆ ತಮ್ಮ ಕ್ಯಾಮೆರಾವನ್ನು ಬಳಸಲೇ ಇಲ್ಲ. ಬಣ್ಣದ ಚಿತ್ರಗಳನ್ನು ತೆಗೆಯಲೇ ಇಲ್ಲ. ಫ್ಲ್ಯಾಷ್ ಲೈಟ್ ಬಗ್ಗೆ ವಿಚಿತ್ರ ಅಲರ್ಜಿ. ಕಲಾವಿದನಿಗೆ ಹಣ ಸಂಪಾದನೆಯೇ ಸರ್ವಸ್ವ ಅಲ್ಲ ಎಂಬುದು ಅವರ ಗಟ್ಟಿ ನಿಲುವು. ಆಡಿದ ಮಾತಿನಂತೆ, ತಳೆದ ನಿಲುವಿನಂತೆ, ಕಡೆಯ ಉಸಿರಿರುವವರೆಗೂ ಈತ ಹಾಗೇ ಬದುಕಿ ಬಾಳಿದ್ದು ವಿಶೇಷ ಸಂಗತಿಯೇ ಸರಿ.

ತಮ್ಮ ಮಹತ್ವಾಕಾಂಕ್ಷೆಗೆ ಅನುಸಾರವಾಗಿ ನಾಡಿನ ಸಾಹಿತ್ಯಿಕ, ಸಾಂಸ್ಕೃತಿಕ ಮತ್ತು ಸಾಮಾಜಿಕ ಕ್ಷೇತ್ರಗಳ ದಿಗ್ಗಜರ ಅವಿಸ್ಮರಣೀಯವಾದ ಕಪ್ಪುಬಿಳುಪಿನ ಭಾವಚಿತ್ರಗಳನ್ನು ತಮ್ಮ ಕ್ಯಾಮೆರಾದಲ್ಲಿ ಸೆರೆಹಿಡಿದು ಸ್ವಂತಿಕೆ ಮೆರೆದಿದ್ದಾರೆ ಸೋಮಶೇಖರ್. ಸಂಗೀತಗಾರರಾದ ಮಲ್ಲಿಕಾರ್ಜುನ ಮನ್ಸೂರ್, ಭೀಮಸೇನ್ ಜೋಷಿ, ಗಂಗೂಬಾಯಿ ಹಾನಗಲ್..., ಸಾಹಿತಿಗಳಾದ ಡಿ.ವಿ.ಜಿ., ಬೀಚಿ, ಕುವೆಂಪು, ಬೇಂದ್ರೆ, ವಿ.ಸೀ., ಗೋಕಾಕ್, ಎಸ್. ವಿ. ರಂಗಣ್ಣ, ಕೆ. ಎಸ್. ನರಸಿಂಹಸ್ವಾಮಿ ಮುಂತಾದವರಲ್ಲದೆ, ಮದರ್ ತೆರೆಸಾ, ಸತ್ಯಜಿತ್ ರಾಯ್‌ರಂಥವರ ೧೩೦೦ಕ್ಕೂ ಮಿಕ್ಕ ಅಪೂರ್ವ ಭಾವಚಿತ್ರಗಳು ಅವರ ಅಪ್ರತಿಮ ಕಲಾವಂತಿಕೆಗೆ ಸಾಕ್ಷಿಯಾಗಿ ಬಹುಕಾಲ ಎಲ್ಲ ಸಾಹಿತ್ಯಾಸಕ್ತರ, ರಸಿಕರ ಮನ ತಣಿಸಲಿವೆ, ಸ್ಫೂರ್ತಿ ನೀಡಲಿವೆ. ಕೆ. ಜಿ. ಎಸ್. 'ಕಪ್ಪು–ಬಿಳುಪು ಛಾಯಾಚಿತ್ರಗಳ ಮಾಂತ್ರಿಕ' ಎಂದೇ ಪ್ರಸಿದ್ಧರಾಗಿದ್ದರು. ತನ್ನ ವೃತ್ತಿಜೀವನದುದ್ದಕ್ಕೂ ಯಾವುದೇ ಪ್ರಶಸ್ತಿಗಳಿಗಾಗಿ ಹಪಹಪಿಸದೆ, ಲಾಬಿ ಮಾಡದೆ "ನನ್ನ ಕಲೆ, ನನ್ನ ಶೈಲಿ" ಎಂದು ಬಾಳುತ್ತಲೇ ಕಳೆದ ೦೪.೧೨.೨೦೧೬ರಂದು ತಮ್ಮ ಬಂಧುಬಳಗದವರು, ಹಿತೈಷಿಗಳೆಲ್ಲರಿಗೂ ಅಂತಿಮ ವಿದಾಯ ಹೇಳಿದ ಕೆ. ಜಿ. ಸೋಮಶೇಖರ್ ದೇಶವಿದೇಶಗಳಲ್ಲಿ ತಮ್ಮ ಛಾಯಾಚಿತ್ರಗಳ ನೂರಾರು ಪ್ರದರ್ಶನಗಳನ್ನು ಸಂಘಟಿಸಿ ಕಲಾಸಕ್ತರ ಮೆಚ್ಚುಗೆಗೆ ಪಾತ್ರರಾಗಿದ್ದರು. ಹಲವಾರು ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಪ್ರಕಾಶನ ಸಂಸ್ಥೆಗಳು ಅವರ ಚಿತ್ರಗಳನ್ನು ಬಳಸಿಕೊಂಡಿರುವುದು ಹೆಮ್ಮೆಯ ಸಂಗತಿ.

ನಮ್ಮನ್ನಗಲಿರುವ ಈ ಅಪರೂಪದ ಕಲಾವಿದರಿಗೆ ನಮನಗಳು.

**ಎಸ್. ಸುರೇಂದ್ರ**
ಬೆಂಗಳೂರು

**ಕುವೆಂಪು ವೈದ್ಯ ಸಾಹಿತ್ಯ ಪುರಸ್ಕೃತರಿಗೆ ಅಭಿನಂದನೆಗಳು...**

ಕನ್ನಡ ವೈದ್ಯಸಾಹಿತ್ಯ ಪರಿಷತ್ತು ೨೦೦೭ರಿಂದ ೨೦೧೫ರವರೆಗಿನ ಅವಧಿಯ ಪ್ರಶಸ್ತಿಗಳನ್ನು ಇತ್ತೀಚೆಗೆ ಪ್ರಕಟಿಸಿದೆ. ಇವುಗಳಲ್ಲಿ ನವಕರ್ನಾಟಕ ಪ್ರಕಾಶನದ ಕೃತಿಗಳ ಪ್ರಶಸ್ತಿ ಪುರಸ್ಕೃತ ಲೇಖಕರಾದ ಡಾ॥ ಜಿ. ಪುರುಷೋತ್ತಮ (ಕಿವಿಮೊರೆತ, ತಲೆಸುತ್ತು – ೨೦೦೮), ಡಾ॥ ಹೆಚ್. ಆರ್. ಮಣಿಕರ್ಣಿಕಾ (ವನಿತೆಯರ ವ್ಯಾಧಿಗಳು–೨೦೧೦), ಡಾ॥ ನಾ. ಸೋಮೇಶ್ವರ (ನೆಮ್ಮದಿಯ ಬದುಕಿಗೆ ಲೈಂಗಿಕ ಸ್ವಚ್ಛತೆ – ೨೦೧೦), ಡಾ॥ ವಿ. ಪರಮೇಶ್ವರ (ಬೊಜ್ಜುದೇಹ – ೨೦೧೨), ಡಾ॥ ವಿನೋದ ಛಬ್ಬಿ (ಲೈಂಗಿಕ ಆರೋಗ್ಯ ಮತ್ತು ವ್ಯಕ್ತಿತ್ವ ವಿಕಾಸ – ೨೦೧೨) ಅವರಿಗೆ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ಹೃತ್ಪೂರ್ವಕ ಅಭಿನಂದನೆಗಳು.

# ನೊಬೆಲ್ ಪ್ರಶಸ್ತಿ ವಂಚಿತೆ ವೇರಾ ರುಬಿನ್

ಡಾ॥ ಪಿ. ಆರ್. ವಿಶ್ವನಾಥ್

**ಕಪ್ಪು ದ್ರವ್ಯದ ಸಂಶೋಧನೆಯನ್ನು ವೇರಾ ರುಬಿನ್ ೪೦ ವರ್ಷಗಳ ಹಿಂದೆ ನಡೆಸಿದ್ದರು. ಆದರೆ ಕಪ್ಪು ಚೈತನ್ಯದ ಆವಿಷ್ಕಾರಕ್ಕೆ ೧೩ ವರ್ಷಗಳಿಗೇ ನೊಬೆಲ್ ಪ್ರಶಸ್ತಿ ಬಂದುಬಿಟ್ಟಿತು. ಈ ಭೇದವೇತಕ್ಕೆ ? ಕಪ್ಪು ದ್ರವ್ಯಕ್ಕೆ ಪುರಾವೆ ಸಿಕ್ಕಿಲ್ಲ ಎಂದೇ ? ಅಥವಾ ಹಲವರು ವ್ಯಕ್ತಪಡಿಸಿರುವಂತೆ ಸಮಿತಿ ಮತ್ತೆ ಮಹಿಳಾ ವಿಜ್ಞಾನಿಯನ್ನು ನಿರ್ಲಕ್ಷಿಸಿದರೇ ?**

ಖ್ಯಾತ ಖಗೋಳ ವಿಜ್ಞಾನಿಗಳೆಂದರೆ ಯಾರು ? ಟೈಕೊ ಬ್ರಾಹೆ, ಗೆಲೆಲಿಯೊ, ವಿಲಿಯಮ್ ಹರ್ಶೆಲ್, ಎಡ್ವಿನ್ ಹಬಲ್...! ಈ ಪಟ್ಟಿಯಲ್ಲಿ ಕೊರತೆ ಏನಿರಬಹುದು ? ಎಲ್ಲಾ ಪುರುಷರು ! ಈ ಪಟ್ಟಿಯಲ್ಲಿ ಕೆರೋಲೀನ್ ಹರ್ಶೆಲಳ ಹೆಸರಿಲ್ಲ. ಎಷ್ಟೋ ಧೂಮಕೇತುಗಳನ್ನೂ, ನೆಬ್ಯುಲಗಳನ್ನೂ ಕಂಡುಹಿಡಿದಿದ್ದ ಕೆರೋಲೀನ್‌ಳನ್ನು ಇಂದಿಗೂ ಹೆಚ್ಚು ಜ್ಞಾಪಿಸಿಕೊಳ್ಳುವುದು ವಿಲಿಯಮ್ ಹರ್ಶೆಲನ ತಂಗಿ ಎಂದು ! ಆಕಾಶಕಾಯಗಳ ದೂರವನ್ನು ಹೇಗೆ ಕಂಡುಹಿಡಿಯುವುದು ಎಂದು ೨೦ನೆಯ ಶತಮಾನದ ಆದಿಯಲ್ಲಿ ತೋರಿಸಿದ ಹೆನ್ರಿಯೆಟ್ಟಾ ಲೇವಿಟ್‌ರ ಹೆಸರು ಬರುವುದು ಹಬಲ್ ಅವರ ವಿಶ್ವ ವಿಸ್ತಾರದ ಆವಿಷ್ಕಾರಕ್ಕೆ ನಾಂದಿಯಾಗಿ ಮಾತ್ರ! ಪಲ್ಸಾರಗಳ ಸಹ ಸಂಶೋಧಕಿಯಾದ ಜೋಸ್ಲಿನ್ ಬೆಲ್‌ರನ್ನು ಜ್ಞಾಪಕ ಇಟ್ಟುಕೊಳ್ಳುವುದು ನೊಬೆಲ್ ಪ್ರಶಸ್ತಿ ಭಾಜನರಾದ ಅಂಥೋನಿ ಹ್ಯೂಯಿಷ್‌ರ ವಿದ್ಯಾರ್ಥಿ ಎಂದು ! ಹೌದು, ಖಗೋಳ ವಿಜ್ಞಾನವೊಂದರಲ್ಲೇ ಅಲ್ಲ, ಹಿಂದಿನಿಂದಲೂ ಎಲ್ಲ ವಿಜ್ಞಾನ ಕ್ಷೇತ್ರಗಳಲ್ಲೂ ಮಹಿಳೆಯರ ಸಂಶೋಧನೆಗಳನ್ನು ಸರಿಯಾಗಿ ಗುರುತಿಸುವ ಪ್ರಯತ್ನಗಳೇ ನಡೆದಿಲ್ಲ. ಪ್ರಪಂಚದಲ್ಲೆಲ್ಲಾ ಬಹಳ ಖ್ಯಾತಿ ಗಳಿಸಿದ ಮೇರಿ ಕ್ಯೂರಿಯವರು ೨ ನೊಬೆಲ್ ಪ್ರಶಸ್ತಿಗಳನ್ನು ಗಳಿಸಿದರೂ ಸಮಾಜದ ಗೌರವ ಅವರಿಗೆ ಅಷ್ಟಾಗಿ ಸಿಗಲಿಲ್ಲ. ಮೊದಲನೆಯ ಬಾರಿ ಪತಿ ಪಿಯೆರ್ ಆಗ್ರಹ ಮಾಡಿದ ನಂತರವೇ ನೊಬೆಲ್ ಸಮಿತಿಯವರು ಮೇರಿಯವರ ಹೆಸರನ್ನು ಸೇರಿಸಿದರಂತೆ; ಎರಡನೆಯ ಬಾರಿ ಅವರು ಪ್ರಶಸ್ತಿ ಗಳಿಸಿದಾಗ ಪಾಲ್ ಲಂಜೆವಿನ್ ಎಂಬ ಮತ್ತೊಬ್ಬ ವಿಜ್ಞಾನಿಯೊಬ್ಬರ ಜೊತೆ ಸಂಬಂಧವಿಟ್ಟುಕೊಂಡಿದ್ದಾರೆಂಬ ಕಾರಣಕ್ಕೆ ಸ್ವೀಡನ್‌ಗೆ ಹೋಗಿ ಪ್ರಶಸ್ತಿಯನ್ನು ಸ್ವೀಕರಿಸಬಾರದೆಂದು ಅವರ ಮೇಲೆ ಆಗ್ರಹವಿದ್ದಿತು. ಸಮಾಜದ ಈ ಧೋರಣೆಯಿಂದ ಬೇಸತ್ತು ಮೇರಿ ಕ್ಯೂರಿ ಸ್ಟಾಕ್‌ಹೋಮ್‌ಗೆ ಹೋಗಿದ್ದು ಬೇರೆಯ ವಿಷಯ. ಡಿ.ಎನ್.ಎ. ಸಂಶೋಧನೆಗಳಿಗೆ ನೊಬೆಲ್ ಪ್ರಶಸ್ತಿಗೆ ವಾಟ್ಸನ್ ಮತ್ತು ಕ್ರಿಕ್ ಅವರ ಕೊಡುಗೆಗಳನ್ನು ಮಾತ್ರ ಪರಿಗಣಿಸಿ ರೊಸಲಂಡ್ ಫ್ರಾಂಕ್ಲಿನ್‌ರನ್ನು ನಿರ್ಲಕ್ಷಿಸಲಾಗಿದ್ದಿತು. ಕಳೆದ ನಾಲ್ಕು ದಶಕಗಳಿಂದಲೂ ಎಲ್ಲೆಲ್ಲೂ ಮಾತಾಗಿರುವ 'ಕಪ್ಪು ದ್ರವ್ಯ' (ಡಾರ್ಕ್ ಮ್ಯಾಟರ್) ಸಂಶೋಧನೆಗೆ ನೊಬೆಲ್ ಪ್ರಶಸ್ತಿ ದೊರಕಲಿಲ್ಲ; ಆ ಸಂಶೋಧಕಿ ಮಹಿಳೆ ಎಂದೇ ? ಈಗಂತೂ ಆ ಮಹಿಳೆಗೆ ಆ ಪ್ರಶಸ್ತಿ ಸಿಗುವುದಿಲ್ಲ. ಏಕೆಂದರೆ ಅವರು ಕಳೆದ ತಿಂಗಳು ಮೃತರಾದರು. ಹೆಸರು ವೇರಾ ರುಬಿನ್.

ಅಮೆರಿಕದ ದಕ್ಷಿಣ ಕ್ಯಾಲಿಫೋರ್ನಿಯ ಪ್ರದೇಶದಲ್ಲಿ ಸ್ಥಾಪಿತವಾಗಿರುವ ಎರಡು ದೂರದರ್ಶಕಗಳು ಖಗೋಳವಿಜ್ಞಾನದಲ್ಲಿ ಅನೇಕ ಆವಿಷ್ಕಾರಗಳಿಗೆ ಖ್ಯಾತಿ ಗಳಿಸಿವೆ. ಚಿಕ್ಕಂದಿನಿಂದಲೂ ಖಗೋಳ ವಿಜ್ಞಾನದಲ್ಲಿ ಆಸಕ್ತಿ ಇದ್ದ ಜಾರ್ಜ್ ಹೇಲ್ (೧೮೬೮–೧೯೩೮) ಆಗಿನ ಕಾಲದ ಹಲವಾರು ಅತಿ ಉತ್ತಮ ದೂರದರ್ಶಕಗಳನ್ನು ನಿರ್ಮಿಸಿದನು. ಅವುಗಳಲ್ಲಿ ಮುಖ್ಯವಾದವು ಲಾಸ್ ಏಂಜಲಿಸ್ ನಗರದ ಹತ್ತಿರದ ಮೌಂಟ್ ವಿಲ್ಸನ್ ವೀಕ್ಷಣಾಲಯದ ೨ ದೂರದರ್ಶಕಗಳು – ೧.೫ ಮತ್ತು ೨.೫ ಮೀಟರ್ ವ್ಯಾಸ ಮತ್ತು ಸ್ಯಾನ್ ಡಿಯಾಗೊ ನಗರದ ಬಳಿ ಇರುವ ಮೌಂಟ್ ಪಲೋಮಾರ್‌ನ ೫ ಮೀಟರ್ ದೂರದರ್ಶಕ. ಮೌಂಟ್ ವಿಲ್ಸನ್ ದೂರದರ್ಶಕಗಳನ್ನು ಬಳಸಿಕೊಂಡೇ ಹ್ಯಾರೊ ಶೇಪ್ಲೀ ನಮ್ಮ ಗ್ಯಾಲಕ್ಸಿಯ ನಿಜರೂಪವನ್ನು ಮತ್ತು ಎಡ್ವಿನ್ ಹಬಲ್ ವಿಶ್ವದ ವಿಸ್ತಾರ ಹೆಚ್ಚುತ್ತಿರುವದನ್ನು ಕಂಡುಹಿಡಿದಿದ್ದರು. ಮುಂದೆ ಪಲೋಮಾರ್ ಉಪಕರಣದಿಂದ ೧೯೫೦ ಮತ್ತು ೧೯೬೦ರ ದಶಕದ ಮುಖ್ಯ ಆವಿಷ್ಕಾರಗಳು ನಡೆದಿದ್ದವು. ಈ ಖ್ಯಾತ ದೂರದರ್ಶಕಗಳನ್ನು ಮೊದಲಿಂದ ಪುರುಷರೇ

ಉಪಯೋಗಿಸುತ್ತಿದ್ದು ಆ ಸಂಪ್ರದಾಯ ಬರುತ್ತ ಬರುತ್ತ ನಿಯಮವಾಗಿಬಿಟ್ಟಿತ್ತು.

೧೯೫೫ರಲ್ಲಿ ಇಂಗ್ಲೆಂಡಿನ ಖ್ಯಾತ ಖಗೋಳವಿಜ್ಞಾನಿ ದಂಪತಿಯೊಂದು ಪಲೋಮಾರ್‌ಗೆ ಸಂಶೋಧನೆ ಮಾಡಲು ಬಂದರು. ಅವರು ಇಂಗ್ಲೆಂಡಿನ ಜೆಫ್ ಮತ್ತು ಮಾರ್ಗರೆಟ್ ಬರ್ ಬ್ರಿಜ್. ಜಗತ್ತಿನ ಲಘು ರಾಶಿಯ ಮೂಲಧಾತುಗಳು ಮಹಾಸ್ಫೋಟದ ಸಮಯದಲ್ಲಿ ಉತ್ಪತ್ತಿಯಾದವು; ಇನ್ನೂ ಹೆಚ್ಚು ರಾಶಿಯ ಮೂಲಧಾತುಗಳು (ಕಬ್ಬಿಣದ ತನಕ) ನಕ್ಷತ್ರಗಳ ಕುಲುಮೆಯಲ್ಲಿ ತಯಾರಾದವು. ಆದರೆ ಹೆಚ್ಚು ದ್ರವ್ಯರಾಶಿಯ ಮೂಲಧಾತುಗಳೆಲ್ಲ (ಉದಾಹರಣೆಗೆ, ಚಿನ್ನ, ಬೆಳ್ಳಿ, ಯುರೇನಿಯಮ್ ಇತ್ಯಾದಿ) ಭಾರೀ ನಕ್ಷತ್ರಗಳ ಅಂತ್ಯ ಸಮಯದ ಸೂಪರ್ನೋವಾ ಆಸ್ಫೋಟನೆಯಲ್ಲೇ ಅಂತಹ ಮೂಲಧಾತುಗಳು ಹುಟ್ಟುತ್ತವೆ ಎಂದು ಹಾಯಲ್ ಮತ್ತು ಫೌಲರ್ ಜೊತೆ ಇವರೂ ೧೯೫೬ರಲ್ಲಿ ಪ್ರತಿಪಾದಿಸಿದ್ದರು. ಇದಕ್ಕೆ ಮುಂಚೆ ೨೬ರ ಪ್ರಾಯದ ಮಾರ್ಗರೆಟ್‌ಗೆ ಕಾರ್ನಗಿ ದತ್ತಿ ದಕ್ಕಲಿಲ್ಲ; ಕಾರಣ : ಮೌಂಟ್ ವಿಲ್ಸನ್‌ನಲ್ಲಿ ಹೆಂಗಸರಿಗೆ ಕೆಲಸ ಮಾಡಲು ಆಸ್ಪದವಿರಲಿಲ್ಲ. ಕಡೆಗೂ ೧೯೫೫ರಲ್ಲಿ ಅವರಿಗೆ ಅಲ್ಲಿ ಕೆಲಸ ಮಾಡಲು ಅನುಮತಿ ದೊರಕಿತು; ಅದೂ ಪತಿಯ ಸಹಾಯಕಳಾಗಿ ಮಾತ್ರ! ಅದಲ್ಲದೆ, ಅವರಿಬ್ಬರೂ ವೀಕ್ಷಣಾಲಯದ ಬಳಿ ವಾಸಮಾಡಲು ಅನುಮತಿ ಸಿಗದೆ ದೂರದಲ್ಲಿ ವಾಸಿಸಬೇಕಾಗಿ ಬಂದಿತು! ಇಷ್ಟೆಲ್ಲ ಅನುಭವಿಸಿದ ಮಾರ್ಗರೆಟ್ ೧೯೭೨ರಲ್ಲಿ ಇಂಗ್ಲೆಂಡಿನ ಪ್ರತಿಷ್ಠಿತ ಗ್ರೀನಿಚ್ ವೀಕ್ಷಣಾಲಯದ ನಿರ್ದೇಶಕರಾದದ್ದಲ್ಲದೆ ವಿಜ್ಞಾನದಲ್ಲಿ ಮಹಿಳೆಯರ ವಿರುದ್ಧ ಇದ್ದ ಧೋರಣೆಗಳನ್ನು ಪ್ರತಿಭಟಿಸುತ್ತಲೇ ಇದ್ದರು. ಅಮೆರಿಕದ ವೀಕ್ಷಣಾಲಯಗಳಲ್ಲಿನ ಮಹಿಳೆಯರ ವಿರುದ್ಧ ಇದ್ದ ಅಲಿಖಿತ ನಿಯಮಗಳನ್ನು ಕಡೆಗೂ ಪೂರ್ತಿ ತೊಡೆದುಹಾಕಿದರು ವೇರಾ ರುಬಿನ್. ೧೯೨೮ರ ಜುಲೈನಲ್ಲಿ ಅಮೆರಿಕದ ಫಿಲಡೆಲ್ಫಿಯಾ ನಗರದಲ್ಲಿ ಜನ್ಮತಾಳಿದ ವೇರಾರಿಗೆ ಮೊದಲಿಂದಲೂ ತಾರೆಗಳು ಸ್ವಾರಸ್ಯಕರವಾಗಿ ಕಂಡಿದ್ದವು. ೧೨ ವರ್ಷದ ಚಿಕ್ಕ ಹುಡುಗಿ "ಪ್ರತಿ ರಾತ್ರಿ ತಾನು ತಾರೆಗಳನ್ನು ನೋಡಿದ ನಂತರವೇ" ಮಲಗುತ್ತಿದ್ದಳಂತೆ. ತಂದೆ ಅವಳು ಒಂದು ದೂರದರ್ಶಕವನ್ನು ನಿರ್ಮಿಸಲು ಸಹಾಯಮಾಡಿದಾಗ ಆ ಬಾಲೆಗೆ ಖುಷಿಯೋ ಖುಷಿ! ಆದರೂ ಕಾಲೇಜು ಮೆಟ್ಟಲು ಹತ್ತುವ ಮೊದಲು ಶಾಲೆಯ ಶಿಕ್ಷಕರೊಬ್ಬರು ವಿಜ್ಞಾನದ ಹತ್ತಿರ ಸುಳಿಯಬೇಡ ಎಂದು ಎಚ್ಚರಿಸಿದರಂತೆ! ೧೯೪೮ರಲ್ಲಿ ಮಹಿಳೆಯರಿಗೇ ಮೀಸಲಾಗಿದ್ದ ವಾಸಾರ್ ಕಾಲೇಜಿನಲ್ಲಿ ಬಿ.ಎ. ಗಳಿಸಿದ ನಂತರ ಐನ್‌ಸ್ಟೈನ್ ನೆಲೆಸಿದ್ದ ಖ್ಯಾತ ಪ್ರಿನ್ಸ್‌ಟನ್ ವಿಶ್ವವಿದ್ಯಾಲಯದಲ್ಲಿ ವಿದ್ಯಾಭ್ಯಾಸ ಮುಂದುವರಿಸಬೇಕೆಂದಿದ್ದರೂ ಆ ಕನಸು ನನಸಾಗಲಿಲ್ಲ; ಪ್ರಿನ್ಸ್‌ಟನ್ ಬಗ್ಗೆ ಮಾಹಿತಿ ಕೇಳಿ ಬರೆದಿದ್ದ ವೇರಾರಿಗೆ ವಿದ್ಯಾಲಯದಿಂದ ಉತ್ತರ ಬರಲೇ ಇಲ್ಲ! ೧೯೭೫ರ ತನಕ ಪ್ರಿನ್ಸ್‌ಟನ್ ವಿದ್ಯಾಲಯದಲ್ಲಿ ಮಹಿಳಾ ವಿದ್ಯಾರ್ಥಿಗಳಿಗೆ ಖಗೋಳವಿಜ್ಞಾನದಲ್ಲಿ ಸ್ಥಾನವಿರಲಿಲ್ಲ! ಇದರ ನಂತರ ಕಾರ್ನೆಲ್‌ನಲ್ಲಿ ವಿದ್ಯಾಭ್ಯಾಸ ಮುಂದುವರಿಸಿದರು. ಅಲ್ಲಿ ಅವರ ಶಿಕ್ಷಕರು ನಕ್ಷತ್ರಗಳ ಬೆಳಕಿಗೆ ಕಾರಣ ಹುಡುಕಿದ್ದ ಹಾನ್ಸ್ ಬೇತಾ, ಮತ್ತು ಮಹಾ ಮೇಧಾವಿ ರಿಚರ್ಡ್ ಫೈನ್ಮನ್! ಅನಂತರ ಜಾರ್ಜ್‌ಟೌನ್ ವಿದ್ಯಾಲಯದಲ್ಲಿ ಪಿಎಚ್.ಡಿ.ಗೆ ಸೇರಿದಾಗ ಅವರ ಮಾರ್ಗದರ್ಶಕ ವಿಜ್ಞಾನ ಪುಸ್ತಕಗಳನ್ನು ಬರೆದು ಪ್ರಸಿದ್ಧಿ ಗಳಿಸಿದ್ದ ಖ್ಯಾತ ಭೌತಶಾಸ್ತ್ರಜ್ಞ ಜಾರ್ಜ್ ಗ್ಯಾಮೋವ್! ಅಲ್ಲೂ ಗ್ಯಾಮೋವ್‌ರ ಜೊತೆ ಮೊದಲ ಭೇಟಿ ವಿಚಿತ್ರವಾಗಿಯೇ ನಡೆಯಿತು. ಆ ವಿದ್ಯಾಲಯದ ನಿಯಮಗಳ ಪ್ರಕಾರ ಹೆಣ್ಣುಮಕ್ಕಳು ಅಧ್ಯಾಪಕರ ಕೋಣೆಯಲ್ಲಿ ಹೋಗಿ ನೋಡಬಾರದೆಂದಿತು! ಆದ್ದರಿಂದ ವೇರಾ ಗ್ಯಾಮೋವ್‌ರನ್ನು ಮೊದಲು ಸಂಧಿಸಿ ವಿಜ್ಞಾನ ಚರ್ಚಿಸಿದ್ದು ಕಾಲೇಜಿನ ಪಡಸಾಲೆಯಲ್ಲಿ! ಅಂತೂ ವೇರಾ ಈ ಎಲ್ಲ ಮೇರು ಶಿಕ್ಷಕರ ಗರಡಿಯಲ್ಲಿ ಅನುಭವ ಪಡೆದು ಸಂಶೋಧನಾ ಕ್ಷೇತ್ರಕ್ಕೆ ಕಾಲಿಡುವ ಮೊದಲು ಗೃಹಿಣಿಯ ಜೀವನವನ್ನು ನಿಭಾಯಿಸಬೇಕಾಗಿ ಬಂದಿತು. ತನ್ನ ೧೯ನೆಯ ವಯಸ್ಸಿನಲ್ಲೆ ತನ್ನ ಜೊತೆ ಓದುತ್ತಿದ್ದ ಜಾರ್ಜ್ ರುಬಿನ್ ಎಂಬ ಭೌತ ವಿಜ್ಞಾನಿಯನ್ನು ಮದುವೆಯಾಗಿ ಮುಂದಿನ ಹತ್ತು ವರ್ಷಗಳಲ್ಲಿ ನಾಲ್ಕು ಮಕ್ಕಳಿಗೆ ಜನ್ಮವಿತ್ತರು. ೨೨ನೆಯ ವಯಸ್ಸಿನಲ್ಲಿ ತಮ್ಮ ಮೊದಲನೆಯ ಕಂದನನ್ನು ಕಂಕುಳದಲ್ಲಿರಿಸಿಕೊಂಡು ಹಿಮಭರಿತ ಹವದಲ್ಲಿ ನೂರಾರು ಮೈಲು ಪ್ರಯಾಣ ಮಾಡಿ ಖಗೋಳವಿಜ್ಞಾನಿಗಳ ಸಭೆಗೆ ಹೋಗಿ ತಮ್ಮ ಪ್ರಬಂಧವನ್ನು ಮಂಡಿಸಿದರು. ೧೯೬೫ರಲ್ಲಿ ಅವರು ಪಲೋಮಾರ್ ವೀಕ್ಷಣಾಲಯದಲ್ಲಿ ಕೆಲಸ ಮಾಡಲು ಶುರುಮಾಡಿದರು. ಆಗ ತಾನೆ ಮಹಿಳೆಯರ ಮೇಲೆ ಇದ್ದ ನಿರ್ಬಂಧಗಳನ್ನು ಸಂಸ್ಥೆ ವಾಪಸ್ಸು ತೆಗೆದುಕೊಂಡ ನಂತರ ಅಲ್ಲಿಯ ಮೊದಲ ಮಹಿಳಾ ವಿಜ್ಞಾನಿಯಾದರು. ಅಲ್ಲಿ ಹೋದಾಗ ಮಹಿಳೆಯರಿಗೆ ಬೇರೆಯ ಶೌಚಾಲಯವಿರದಿದ್ದನ್ನು ಕಂಡು ಗಂಡಸರ ಶೌಚಾಲಯದ ಬಾಗಿಲ ಮೇಲೆ ವೇರಾ ಒಂದು ಲಂಗವನ್ನು ಚಿತ್ರಿಸಿದರಂತೆ. ಆದರೂ ತಮ್ಮ ಸಂಶೋಧನೆಗಳಿಗೆ ಮಹತ್ವವಿಲ್ಲದ್ದನ್ನು ಕಂಡು ಆಗ ಯಾರಿಗೂ ಬೇಡವೆನಿಸಿದ್ದ ಅಧ್ಯಯನಕ್ಕೆ ಕಾಲಿಟ್ಟರು. ಅದೇ ಕಪ್ಪು ದ್ರವ್ಯದ ಸಂಶೋಧನೆ!



ಅಗೋಚರ ದ್ರವ್ಯರಾಶಿಯ ಆವಿಷ್ಕಾರವನ್ನು ಮಾಡಿದ ವೇರಾ ರುಬಿನ್

ಈ ಸಂಶೋಧನೆ ಅವರನ್ನು ಪ್ರಖ್ಯಾತರನ್ನಾಗಿ ಮಾಡಿದಾಗ ಆ ಖ್ಯಾತಿಯನ್ನು ಅವರು ವಿಜ್ಞಾನದ ಪ್ರಚಾರಕ್ಕಾಗಿ ಬಳಸಿಕೊಂಡರು. ಅಷ್ಟೇ ಮುಖ್ಯವಾಗಿ ವಿಜ್ಞಾನ ಕ್ಷೇತ್ರದಲ್ಲಿ ಮಹಿಳೆಯರ ಅನಾದರಣೆಯ ವಿರುದ್ಧ ಹೋರಾಡಿದರು. ಸಮ್ಮೇಳನಗಳಲ್ಲಿ ಮಹಿಳಾ ಭಾಷಣಕಾರರಿದ್ದಲ್ಲಿ ಸಂಚಾಲಕರಿಗೆ ಚುರುಕು ಮುಟ್ಟಿಸುತ್ತಿದ್ದರು. ವಾಷಿಂಗ್‌ಟನ್ನಿನ ಪುರುಷರಿಗೇ ಮೀಸಲಾಗಿದ್ದ ಕ್ಲಬ್ಬಿನಲ್ಲಿ ಮಹಿಳೆಯರ ಪ್ರವೇಶಕ್ಕಾಗಿ ಹೊಡೆದಾಡಿದರು. ೨೦೧೬ರ ಡಿಸೆಂಬರ್ ೨೫ರಂದು ಅವರು ತಮ್ಮ ೮೮ರ ವಯಸ್ಸಿನಲ್ಲಿ ಕೊನೆಯುಸಿರೆಳೆದರು.

**ಕಪ್ಪು ದ್ರವ್ಯ**

ಭೂಮಿ ಮತ್ತು ಇತರ ಗ್ರಹಗಳು ಸೂರ್ಯನೆಂಬ ನಕ್ಷತ್ರವನ್ನು ಕೆಲವು ನಿಯಮಗಳ ಪ್ರಕಾರ ಪರಿಭ್ರಮಿಸುತ್ತವೆ (ಸುತ್ತುತ್ತವೆ) ಎಂದು ಪ್ರತಿಪಾದಿಸಿದವನು ೧೬ನೆಯ ಶತಮಾನದ ಮೇರು ವಿಜ್ಞಾನಿ ಯೊಹಾನಸ್ ಕೆಪ್ಲರ್. ಈ ಚಲನೆಗೆ ಕಾರಣ ದ್ರವ್ಯರಾಶಿಯ ಗುರುತ್ವಾಕರ್ಷಣೆ ಎಂಬುದನ್ನು ಹಲವಾರು ದಶಕಗಳ ನಂತರ ಪ್ರತಿಪಾದಿಸಿದವನು ಐಸ್ಯಾಕ್ ನ್ಯೂಟನ್. ಅದರ ಪ್ರಕಾರ ಎರಡು ವಸ್ತುಗಳ ನಡುವಿನ ಆಕರ್ಷಣೆ ಎರಡೂ ವಸ್ತುಗಳ ರಾಶಿಯ ಗುಣಲಬ್ಧವನ್ನು ಅವಲಂಬಿಸುತ್ತದೆ. ಆದರೆ ಆ ಆಕರ್ಷಣೆ ನ್ಯೂಟನ್‌ನ ಸಮೀಕರಣ ಕೊಡುವುದಕ್ಕಿಂತ ಹೆಚ್ಚಿದ್ದರೆ? ಆ ಸಮೀಕರಣವೇ ತಪ್ಪೋ? ಅಥವಾ ಆ ವಸ್ತುಗಳನ್ನು ನಮಗೆ ಕಾಣಿಸದ ದ್ರವ್ಯರಾಶಿ ಆವರಿಸಿರಬಹುದೇ? ಅಂತಹದ್ದು ಏನಾದರೂ ಇದ್ದಲ್ಲಿ, ಅದನ್ನು ನಾವು ಕಪ್ಪು (ಅಗೋಚರ) ದ್ರವ್ಯ ಎಂದು ಕರೆಯಬಹುದಲ್ಲವೆ?

ಕಳೆದ ಶತಮಾನದ ಶುರುವಿನಲ್ಲಿಯೇ ಈ ಕಪ್ಪು ದ್ರವ್ಯರಾಶಿಯ ಪರಿಕಲ್ಪನೆ ವಿಜ್ಞಾನ ವೃತ್ತಗಳಲ್ಲಿ ಹರಿದಾಡಲು ಪ್ರಾರಂಭಿಸಿದ್ದರೂ ಇದಕ್ಕೆ ಮೊದಲು ಪುರಾವೆಯನ್ನು ಕೊಟ್ಟವರು ಕ್ಯಾಲಿಫೋರ್ನಿಯದ ಖಗೋಳಜ್ಞ ಫ್ರೆಡ್ ಜ್ವಿಕಿ. ೧೯೩೦ರ ದಶಕದಲ್ಲೇ ನಡೆಸಿದ್ದ ಸಂಶೋಧನೆಯಿಂದ ನಮ್ಮಿಂದ ~೩೦೦ ಮಿಲಿಯ ಜ್ಯೋತಿರ್ವರ್ಷ ದೂರದಲ್ಲಿ ಕೋಮಾ ಎಂಬ ಗ್ಯಾಲಕ್ಸಿಗಳ ಸಮೂಹ (ಕ್ಲಸ್ಟರ್)ದ ಬಿಡಿ ಬಿಡಿ ಗ್ಯಾಲಕ್ಸಿಗಳ ವೇಗವನ್ನು ಕಂಡುಹಿಡಿದು ಅದರಿಂದ ಅವುಗಳ ದ್ರವ್ಯರಾಶಿಯನ್ನು ನಿರ್ಧರಿಸಿದರು. ಅದರ ಮೌಲ್ಯ ಅವು ಹೊರಸೂಸುವ ಪ್ರಕಾಶದಿಂದ ಲೆಕ್ಕ ಮಾಡಿದ ಒಟ್ಟು ದ್ರವ್ಯರಾಶಿ (ಗೋಚರ)ಗಿಂತ ಹತ್ತರಷ್ಟು ಹೆಚ್ಚಿತ್ತು. ಆದ್ದರಿಂದ ಆ ಗ್ಯಾಲಕ್ಸಿಗಳು ಒಟ್ಟುಗೂಡಿರಲು ಅವುಗಳ ಮಧ್ಯೆ ಪ್ರಕಾಶ ಹೊರಸೂಸದ, ಆದರೆ ಗುರುತ್ವಕ್ಕೆ ಜವಾಬ್ದಾರಿಯಾದ ಯಾವುದೋ ಕಾಣಿಸದ ದ್ರವ್ಯರಾಶಿ ಇರಬೇಕೆಂಬ ನಿರ್ಧಾರಕ್ಕೆ ಬಂದರು. ಜ್ವಿಕಿಯವರು ಆಧುನಿಕ ಖಗೋಳ ವಿಜ್ಞಾನದ ಹಲವಾರು ಮುಖ್ಯ ಪರಿಕಲ್ಪನೆಗಳ (ಸೂಪರ್ನೋವಾ, ನ್ಯೂಟ್ರಾನ್ ನಕ್ಷತ್ರ,

ಇತ್ಯಾದಿಗಳ) ಜನ್ಮದಾತರಾಗಿದ್ದರೂ ಅವರ ಸಿಡುಕತನದಿಂದಲೋ ಅಥವಾ ಎಲ್ಲರನ್ನೂ ಎದುರುಹಾಕಿಕೊಳ್ಳುತ್ತಿದ್ದ ವ್ಯಕ್ತಿತ್ವದಿಂದಲೋ ಏನೋ ಅವರಿಗಾಗಲೀ ಅವರ ಈ ಸಂಶೋಧನೆಗಾಗಲೀ ಪ್ರಚಾರ ಮತ್ತು ಖ್ಯಾತಿ ಸಿಗಲೇ ಇಲ್ಲ.

ಕೆಪ್ಲರನ ನಿಯಮಗಳ ಪ್ರಕಾರ ಸೂರ್ಯನನ್ನು ಸುತ್ತುತ್ತಿರುವ ಗ್ರಹಗಳ ವೇಗದ ಮೌಲ್ಯ ಕೇಂದ್ರದಿಂದ ದೂರ ಹೋಗುತ್ತಾ ಕಡಿಮೆಯಾಗುತ್ತದೆ : ಬುಧನಿಗಿಂತ ನಿಧಾನ ಭೂಮಿ; ಭೂಮಿಗಿಂತ ನಿಧಾನ ಗುರು; ಗುರುವಿಗಿಂತ ನಿಧಾನ ನೆಪ್ಚೂನ್. ಉದಾಹರಣೆಗೆ, ಕೇಂದ್ರದಿಂದ ಒಂದು ಖಗೋಳಮಾನ ದೂರ (ಭೂಮಿ–ಸೂರ್ಯರ ದೂರ)ದಲ್ಲಿರುವ ಗ್ರಹಕ್ಕಿಂತ ಎರಡು ಖಗೋಳಮಾನ ದೂರದ ಗ್ರಹ ನಾಲ್ಕರಷ್ಟು ನಿಧಾನವಾಗಿ ಹೋಗುತ್ತದೆ. ಸೌರಮಂಡಲದಂತೆಯೇ ಪ್ರತಿ ಗ್ಯಾಲಕ್ಸಿಯಲ್ಲಿಯೂ ನಕ್ಷತ್ರಗಳು ಕೇಂದ್ರವನ್ನು ಸುತ್ತುತ್ತಿರುತ್ತವೆ. ಕೆಪ್ಲರನ ನಿಯಮದ ಪ್ರಕಾರ ಗ್ಯಾಲಕ್ಸಿಯ ಕೇಂದ್ರದಿಂದ ಹೊರಹೋಗುತ್ತಾ ನಕ್ಷತ್ರಗಳ ವೇಗ ಕಡಿಮೆಯಾಗುತ್ತ ಹೋಗಬೇಕು, ಅಲ್ಲವೆ ?

೧೯೭೦ರ ದಶಕದಲ್ಲಿ ವೇರಾ ರುಬಿನ್ ಮತ್ತು ಸಂಗಡಿಗರು ಪಲೋಮಾರ್ ದೂರದರ್ಶಕವನ್ನು ಉಪಯೋಗಿಸಿ ಪಕ್ಕದ ಆಂಡ್ರೊಮೆಡಾ ಗ್ಯಾಲಕ್ಸಿಯ ವಿವಿಧ ಭಾಗಗಳಲ್ಲಿನ ನಕ್ಷತ್ರಗಳ ವೇಗವನ್ನು ಪರಿಶೀಲಿಸುತ್ತಿದ್ದು ಕೆಪ್ಲರ್ ನಿಯಮಕ್ಕೆ ಮತ್ತೊಂದು ಪುರಾವೆಯನ್ನು ನಿರೀಕ್ಷಿಸುತ್ತಿದ್ದರು. ಆದರೆ ಅವರು ಕಂಡಿದ್ದೇ ಬೇರೆ ! ಗ್ಯಾಲಕ್ಸಿಯ ಹೊರಭಾಗಗಳಲ್ಲೂ ಈ ಪರಿಭ್ರಮಣದ ವೇಗ ಕಡಿಮೆಯಿರಲಿಲ್ಲ ! ಅದರ ಬದಲು ನಿರೀಕ್ಷಿಸಿದ್ದಕ್ಕಿಂತ ಬಹಳ ಹೆಚ್ಚೇ ಇದ್ದಿತು. ಇದನ್ನೇ ಸೌರಮಂಡಲಕ್ಕೆ ಅನ್ವಯಿಸಿದರೆ ಗುರು, ಶನಿ, ಎಲ್ಲವೂ ಸುಮಾರು ಭೂಮಿಯ ವೇಗದಲ್ಲಿ ಸೂರ್ಯನನ್ನು ಸುತ್ತಬೇಕಾಗುತ್ತದೆ ! ಈ ಪರಿಣಾಮವನ್ನು ಬೇರೆ ವಿಜ್ಞಾನಿಗಳಿಗೆ ತಿಳಿಸಿದಾಗ ಏನೋ ತಪ್ಪಿರಬೇಕು, ಇನ್ನೂ ಹಲವಾರು ಗ್ಯಾಲಕ್ಸಿಗಳನ್ನು ಪರಿಶೀಲಿಸಿ ಎಂಬ ಸಲಹೆ ಸಿಕ್ಕಿತು. ರುಬಿನ್‌ರ ತಂಡ ಎಷ್ಟು ಗ್ಯಾಲಕ್ಸಿಗಳನ್ನು ಪರಿಶೀಲಿಸಿದ್ದರೂ ಇದೇ ಪರಿಣಾಮ : ಹೊರಗಿನ ನಕ್ಷತ್ರಗಳು ಒಳಗಿನ ನಕ್ಷತ್ರಗಳಷ್ಟೇ ವೇಗ ! ಆದ್ದರಿಂದ ನಕ್ಷತ್ರಗಳು ಯಾವುದೋ ಅಗೋಚರ ದ್ರವ್ಯರಾಶಿಯ ('ಡಾರ್ಕ್ ಮ್ಯಾಟರ್') ಪ್ರಭಾವಕ್ಕೆ ಒಳಗಾಗಿ ಹೆಚ್ಚು ವೇಗದಿಂದ ಸುತ್ತುತ್ತಿವೆ ಎಂದು ರುಬಿನ್ ವ್ಯಾಖ್ಯಾನಿಸಿ ಅಗೋಚರ ದ್ರವ್ಯರಾಶಿಯ ಪ್ರಮಾಣ ಗೋಚರ (ಕಾಣಿಸುವ) ದ್ರವ್ಯರಾಶಿಗಿಂತ ಸುಮಾರು ೧೦ರಷ್ಟು ಇರಬೇಕು ಎಂದು ನಿರ್ಧರಿಸಿದರು. "ಗ್ಯಾಲಕ್ಸಿಯ ಮಧ್ಯದಿಂದ ಹೊರಹೋಗುತ್ತಾ ಬೆಳಕೇನೋ ಕಡಿಮೆಯಾಗುತ್ತಾ ಹೋಗುತ್ತದೆ. ಆದರೆ ಬೆಳಕು ನಿಜ ದ್ರವ್ಯರಾಶಿಯ ಅಳತೆಯಿಲ್ಲ. ಗ್ಯಾಲಕ್ಸಿಯ ಹೊರಗೆ ಹೋಗುತ್ತ ಕಾಣಿಸುವ ದ್ರವ್ಯರಾಶಿ ಕಡಿಮೆಯಾಗುತ್ತ ಕಾಣಿಸದ ದ್ರವ್ಯರಾಶಿ ಹೆಚ್ಚಾಗುತ್ತ ಹೋಗುತ್ತದೆ. ಆದ್ದರಿಂದ ಗ್ಯಾಲಕ್ಸಿಯಲ್ಲೇ ಆಗಲಿ ವಿಶ್ವದಲ್ಲೇ ಆಗಲಿ ಕಾಣಿಸುವ ದ್ರವ್ಯರಾಶಿ ನಿಜ ದ್ರವ್ಯರಾಶಿಯ ಬಹಳ ಚಿಕ್ಕ ಅಂಶ ಮಾತ್ರ" ಎಂದು ಅವರು ಹೇಳಿಕೆ ಕೊಟ್ಟಿದ್ದರು. ಈ ಸಂಶೋಧನೆಯಿಂದ ಕಪ್ಪು ದ್ರವ್ಯದ ಅಸ್ತಿತ್ವ ಖಚಿತವಾಯಿತು.

ಈ ಕಪ್ಪು ದ್ರವ್ಯಕ್ಕೆ ಕಾರಣವೇನು ? ಗೋಚರ ದ್ರವ್ಯರಾಶಿ ಎಂದರೆ ನಮಗೆ ಕಾಣುವ ಜಗತ್ತು – ಹೈಡ್ರೊಜೆನ್, ಹೀಲಿಯಮ್ ಇತ್ಯಾದಿ ಪರಮಾಣುಗಳು ಮತ್ತು ಇವುಗಳಲ್ಲಿನ ಮೂರು ವಿಧದ ಕಣಗಳು – ಪ್ರೋಟಾನ್, ನ್ಯೂಟ್ರಾನ್ ಮತ್ತು ಎಲೆಕ್ಟ್ರಾನ್‌ಗಳು. ಈ ಕಣಗಳ ವಿವಿಧ ಪ್ರಕ್ರಿಯೆಗಳಲ್ಲಿ (ಬೈಜಿಕ ಸಂಲಯನ, ಸಿನ್ಕ್ರೊಟ್ರಾನ್ ವಿಕಿರಣ ಇತ್ಯಾದಿ) ಬೆಳಕು, ರೇಡಿಯೊ, ಕ್ಷ–ಕಿರಣಗಳು ಮತ್ತು ಇತರ ವಿದ್ಯುತ್ಕಾಂತೀಯ ತರಂಗಗಳು ಉತ್ಪತ್ತಿಯಾಗಿ ಈ ದ್ರವ್ಯರಾಶಿ ನಮಗೆ ಗೋಚರ ವಾಗುತ್ತದೆ. ಆದ್ದರಿಂದ ಅಗೋಚರ ದ್ರವ್ಯರಾಶಿ ಈ ಕಣಗಳಿಂದ ಬೇರೆಯದ್ದೇ ಇರಬೇಕು : ಅದು ಬೇರೆಯ ಕಣಗಳೊಂದಿಗೆ ಹೆಚ್ಚು ವರ್ತಿಸಲೂಬಾರದು ಮತ್ತು ವಿದ್ಯುದಂಶವೂ ಶೂನ್ಯವಿರಬೇಕು. ಆದ್ದರಿಂದ ಈ ಕಪ್ಪು ದ್ರವ್ಯದ ಕಣಗಳು – ವಿಂಪ್ಸ್ (ವೀಕ್ಲಿ ಇಂಟರ್‍ಯಾಕ್ಟಿಂಗ್ ಮ್ಯಾಸೀವ್ ಪಾರ್ಟಿಕಲ್) – ಗುರುತ್ವಾಕರ್ಷಣೆ ಮುಖ್ಯ ವಾದ್ದರಿಂದ ಇವುಗಳ ದ್ರವ್ಯರಾಶಿ ಸಾಕಷ್ಟು ಇರಲೇಬೇಕು. ನ್ಯೂಟ್ರಲಿನೋ ಎನ್ನುವ ಸೈದ್ಧಾಂತಿಕ ಕಣ ಈ ವಿಂಪ್ ಕಣದ ಗುಣಗಳನ್ನು ಹೊಂದಿದೆಯಾದರೂ ಯಾವ ಪ್ರಯೋಗವೂ ಅದನ್ನೂ ಕಂಡುಹಿಡಿದಿಲ್ಲ. ಬೇರೆಯೇ ಗುಣಗಳ ಈ ವಿಂಪ್ ಕಣಗಳನ್ನು ಕಂಡುಹಿಡಿಯಲು ಹಲವಾರು ಪ್ರಯತ್ನಗಳು ನಡೆಯುತ್ತಲೇ ಇವೆ. ಕುಬ್ಜ ಗ್ಯಾಲಕ್ಸಿಗಳು ಪ್ರಕಾಶವನ್ನು ಹೊರಸೂಸುತ್ತಿದ್ದರೂ ಅವುಗಳಲ್ಲಿನ ನಕ್ಷತ್ರಗಳು ಹೆಚ್ಚು ಚಲನೆಯನ್ನು ತೋರಿಸುತ್ತಿರುವುದರಿಂದ ಇವುಗಳಲ್ಲೂ ಅಗೋಚರ ದ್ರವ್ಯ ಹೆಚ್ಚು ಪ್ರಮಾಣದಲ್ಲಿರುವ ಸಾಧ್ಯತೆಯನ್ನು ಪ್ರಯೋಗಗಳು ಪರಿಶೀಲಿಸುತ್ತಿವೆ. ಆಳದ



*ಸುರುಳಿ ಸುತ್ತಿಕೊಂಡಿರುವ ನಮ್ಮ ಕ್ಷೀರಪಥ ಗ್ಯಾಲಕ್ಸಿಯ ಒಂದು ಚಿತ್ರ. ಇದರ ಅಗಲ ~1 ಲಕ್ಷ ಜ್ಯೋತಿರ್ವರ್ಷಗಳು. ಇದರಲ್ಲಿ ಹೊರಗಿನ ನಕ್ಷತ್ರಗಳೂ ಒಳಗಿನ ನಕ್ಷತ್ರಗಳಷ್ಟೇ ವೇಗದಲ್ಲಿ ಸುತ್ತುತ್ತಿವೆ ಎಂಬುದನ್ನು ರುಬಿನ್ ಕಂಡುಹಿಡಿದರು. ಇದಕ್ಕೆ ಎಲ್ಲೆಲ್ಲೂ ಹರಡಿರುವ ಕಪ್ಪು ದ್ರವ್ಯರಾಶಿಯೇ ಕಾರಣ ಎಂದು ಅನೇಕ ವಿಜ್ಞಾನಿಗಳ ನಂಬಿಕೆ*

ಗಣಿಗಳಲ್ಲಿ ಬಹಳ ನಿಖರ ಪ್ರಯೋಗಗಳೂ ನಡೆಯುತ್ತಿವೆ. ಅಮೆರಿಕದ ಮಿನಿಸೋಟಾ ಮತ್ತು ಸೌತ್ ಡಕೋಟಾ ಪ್ರಾಂತ್ಯದ ಗಣಿಗಳಲ್ಲಿ ಆಧುನಿಕ ಉಪಕರಣಗಳುಳ್ಳ ಪ್ರಯೋಗಗಳು ನಡೆಯುತ್ತಿವೆ. ಇದು ಹುಲ್ಲಿನ ಮೆದೆಯಲ್ಲಿ ಸೂಜಿಯನ್ನು ಕಂಡು ಹಿಡಿಯುವುದಕ್ಕಿಂತ ಕಷ್ಟದ ಕಾರ್ಯವಾಗಿದೆ. ಹಲವಾರು ವರ್ಷಗಳ ವೀಕ್ಷಣೆಯ ನಂತರವೂ ಒಂದು ತಂಡ ಈ ಕಣಗಳನ್ನು ಕಂಡುಹಿಡಿಯುವುದರಲ್ಲಿ ನಾವು ಸಫಲವಾಗಿಲ್ಲ ಎಂದು ಕೆಲವು ತಿಂಗಳ ಹಿಂದೆ ಹೇಳಿಕೆ ಕೊಟ್ಟಿತ್ತು. ಆದರೂ ಮತ್ತೂ ನಿಖರ. ಪ್ರಯೋಗಗಳು ನಡೆಯುತ್ತಿವೆ. ಕಪ್ಪು ದ್ರವ್ಯ ಕಣರೂಪದಲ್ಲಿ ಇರದಿರಬಹುದು, ಅದು ಒಂದು ರೀತಿಯದೋ, ಯಾವುದೋ ಸೂಪರ್‌ಫ್ಲೂಯ್ಡ್ ದ್ರವ ಮಾದರಿ ಇರಬಹುದೋ ಎಂದು ಹೊಸ ಆಲೋಚನೆಗಳಿವೆ. ಅಥವಾ ನ್ಯೂಟನ್‌ನ ಗುರುತ್ವದ ಪರಿಕಲ್ಪನೆಯನ್ನೇ ತಿದ್ದಬೇಕಾಗಬಹುದೇನೋ ! ಕಾರಣ ಏನೇ ಇರಬಹುದು. ಆದರೆ ವೇರಾ ರುಬಿನ್ ಒಮ್ಮೆ ಹೇಳಿದಂತೆ "ನನ್ನ ಸಂಶೋಧನೆಯಲ್ಲಿ ನನಗೆ ನಂಬಿಕೆ ಇದೆ." ಈ ಮಹಾ ಪ್ರಾಯೋಗಿಕ ಆವಿಷ್ಕಾರಕ್ಕೆ ಸರಿಯಾದ ಸಿದ್ಧಾಂತ ಬೇಕಷ್ಟೆ !

ಆದರೆ ೧೯೯೦ರ ದಶಕದ ಒಂದು ಸಂಶೋಧನೆಯಲ್ಲಿ ದೂರದ ಸೂಪರ್ನೋವಾಗಳನ್ನು ಪರಿಶೀಲಿಸಿದಾಗ ಅವು ಇರಬೇಕಾದ ಸ್ಥಳಕ್ಕಿಂತ ಇನ್ನೂ ಹೆಚ್ಚು ದೂರದಲ್ಲಿವೆ ಎಂದು ತಿಳಿಯಿತು. ಆದ್ದರಿಂದ ೧೯೩೦ರಲ್ಲಿ ಎಡ್ವಿನ್ ಹಬಲ್ ಪ್ರತಿಪಾದಿಸಿದ್ದ ವಿಶ್ವದ ವಿಸ್ತಾರದ ವೇಗ ನಿರೀಕ್ಷಿಸಿದ್ದಕ್ಕಿಂತ ಹೆಚ್ಚಾಗುತ್ತಿದೆ ! ಇದಕ್ಕೆ ಕಾರಣ ? ವಿಜ್ಞಾನಿಗಳು ಹೊಸ ಪರಿಕಲ್ಪನೆಯನ್ನು ಮಂಡಿಸಿದರು. ಅದೇ ಕಪ್ಪು ಚೈತನ್ಯ (ಶಕ್ತಿ) ! ಐನ್‌ಸ್ಟೈನರ ಖ್ಯಾತ ಸಮೀಕರಣವೊಂದರ ಪ್ರಕಾರ ಶಕ್ತಿ ಮತ್ತು ದ್ರವ್ಯರಾಶಿ ಒಂದೇ ನಾಣ್ಯದ ಎರಡು ಮುಖಗಳಾದ್ದರಿಂದ ಹಿಂದೆ ಬರೇ ಕಪ್ಪು ದ್ರವ್ಯವೆಂದು ಮಾತ್ರ ಪರಿಗಣಿಸುತ್ತಿದ್ದುದ್ದನ್ನು ಈಗ ದ್ರವ್ಯ ಮತ್ತು ಚೈತನ್ಯ ಎಂದು ಎರಡು ಭಾಗಗಳಾಗಿ ಮಾಡಲಾಗಿದೆ. ಕಳೆದ ವರ್ಷ ಪ್ಲಾಂಕ್ ಎಂಬ ಉಪಗ್ರಹ ವಿಶ್ವ ಹಿನ್ನೆಲೆಯ ವಿಕಿರಣಗಳನ್ನು ಪರಿಶೀಲಿಸಿ ಕಪ್ಪು ಚೈತನ್ಯ ೬೮%, ಕಪ್ಪು ದ್ರವ್ಯ ೨೭% ಮತ್ತು ನಮಗೆ ಕಾಣುವ ದ್ರವ್ಯರಾಶಿ ೫% ಎಂದು ತೋರಿಸಿದೆ.

ಕಪ್ಪು ದ್ರವ್ಯದ ಸಂಶೋಧನೆಯನ್ನು ವೇರಾ ರುಬಿನ್ ೪೦ ವರ್ಷಗಳ ಹಿಂದೆ ನಡೆಸಿದ್ದರು. ಆದರೆ ಕಪ್ಪು ಚೈತನ್ಯದ ಆವಿಷ್ಕಾರಕ್ಕೆ ೧೩ ವರ್ಷಗಳಿಗೇ ನೊಬೆಲ್ ಪ್ರಶಸ್ತಿ ಬಂದುಬಿಟ್ಟಿತು. ಈ ಭೇದವೇತಕ್ಕೆ ? ಕಪ್ಪು ದ್ರವ್ಯಕ್ಕೆ ಪುರಾವೆ ಸಿಕ್ಕಿಲ್ಲ ಎಂದೇ ? ಅಥವಾ ಹಲವರು ವ್ಯಕ್ತಪಡಿಸಿರುವಂತೆ ಸಮಿತಿ ಮತ್ತೆ ಮಹಿಳಾ ವಿಜ್ಞಾನಿಯನ್ನು ನಿರ್ಲಕ್ಷಿಸಿದರೇ ? ಒಂದು ಬಾರಿ ರುಬಿನ್ ಹೀಗೆ ನುಡಿದಿದ್ದರು : "ನಾನು ಮೂರು ನಂಬಿಕೆಗಳನ್ನು ಇಟ್ಟುಕೊಂಡಿದ್ದೇನೆ – ೧) ವಿಜ್ಞಾನದಲ್ಲಿ ಗಂಡಸೇ ಮಾಡುವುದು ಯಾವುದೂ ಇಲ್ಲ, (೨) ಪ್ರಪಂಚದ ಅರ್ಧ ಮೆದುಳುಗಳು ಮಹಿಳೆಯರದ್ದು, (೩) ವಿಜ್ಞಾನ ಸಂಶೋಧನೆ ನಡೆಸಲು ಎಲ್ಲರಿಗೂ ಅನುಮತಿ ಬೇಕಾಗುತ್ತದೆ. ಆದರೆ ಚಾರಿತ್ರಿಕ ಕಾರಣಗಳಿಂದಾಗಿ ಅದು ಹೆಂಗಸರಿಗಿಂತ ಗಂಡಸರಿಗೆ ಹೆಚ್ಚು ಸಿಗುತ್ತದೆ.

**ಡಾ॥ ಪಿ. ಆರ್. ವಿಶ್ವನಾಥ್**
ನಂ. ೯, ಕಾಳಪ್ಪ ಬ್ಲಾಕ್, ಬಸವನಗುಡಿ, ಬೆಂಗಳೂರು – ೫೬೦ ೦೦೪

# “ದೇಶದಿಂದ ಸ್ವಾತಂತ್ರ್ಯ ಅಲ್ಲ, ದೇಶದೊಳಗೆ ಸ್ವಾತಂತ್ರ್ಯ”

- ಕನ್ಹಯ್ಯ ಕುಮಾರ್

‘ಆಜಾದಿ ಕನ್ಹಯ್ಯ’ ಎಂದೇ ಪ್ರಖ್ಯಾತರಾದ ಜವಹರಲಾಲ್ ನೆಹರು ವಿಶ್ವವಿದ್ಯಾಲಯದ ವಿದ್ಯಾರ್ಥಿ ಮುಖಂಡ ಕನ್ಹಯ್ಯ ಕುಮಾರ್ ಕಳೆದ ತಿಂಗಳು ಬೆಂಗಳೂರಿಗೆ ಆಗಮಿಸಿದ್ದರು. ಅಖಿಲ ಭಾರತ ವಿದ್ಯಾರ್ಥಿ ಫೆಡರೇಷನ್‌ನ ಕರ್ನಾಟಕ ಶಾಖೆಯ ರಾಜ್ಯ ಮಟ್ಟದ ಸಮ್ಮೇಳನವನ್ನು ಉದ್ಘಾಟಿಸಲೆಂದು ಬಂದಿದ್ದ ಕನ್ಹಯ್ಯ ಅವರನ್ನು ನೋಡಲು, ಮಾತನಾಡಿಸಲು ವಿದ್ಯಾರ್ಥಿ, ಯುವಜನರು ತಂಡೋಪತಂಡವಾಗಿ ನೆರೆದಿದ್ದರು. ಭಾಷಣ, ಸಂದರ್ಶನ, ಸಭೆಗಳಲ್ಲಿ ಮುಳುಗಿಹೋಗಿದ್ದ, ಬಿಡುವಿಲ್ಲದ ಈ ವಿದ್ಯಾರ್ಥಿ ನಾಯಕನನ್ನು ಹೊಸತು ಪತ್ರಿಕೆಗೆಂದು ಸಂದರ್ಶಿಸಲು ಹರಸಾಹಸ ಪಡಬೇಕಾಯಿತು. ಸುಮಾರು ಅರ್ಧಗಂಟೆಯ ಕಾಲ ಬೆಳಗಿನ ತಿಂಡಿ ತಿನ್ನುತ್ತಲೇ ಮಾತನಾಡಿದರು.

**ಹೊಸತು** : ನಮಸ್ಕಾರ. ‘ಆಜಾದಿ ಕನ್ಹಯ್ಯ’ ಎಂದೇ ಖ್ಯಾತರಾದ ನಿಮ್ಮ ‘ಸ್ವಾತಂತ್ರ್ಯ’ದ ಪರಿಕಲ್ಪನೆಯೇನು?

**ಕನ್ಹಯ್ಯ** : ನಾನು ಈ ದೇಶದಿಂದ ಮುಕ್ತವಾಗಿ ಹೊರಗೆ ಹೋಗುವ ಸ್ವಾತಂತ್ರ್ಯ ಕೇಳುತ್ತಿಲ್ಲ. ನಾನು ಕೇಳುತ್ತಿರುವುದು ಸಂವಿಧಾನ ಪ್ರಣೀತವಾದ ಸ್ವಾತಂತ್ರ್ಯ. ಬಾಬಾ ಸಾಹೇಬ್ ಅಂಬೇಡ್ಕರ್ ರಚಿತ ಸಂವಿಧಾನದ ಚೌಕಟ್ಟಿನಲ್ಲಿಯೇ ಹೇಳಿರುವ ಸ್ವಾತಂತ್ರ್ಯವನ್ನು ಕೇಳುತ್ತಿರುವುದು. ಈ ದೇಶದ ಸಾಮಾಜಿಕ ಪಿಡುಗುಗಳಾದ ಹಸಿವು, ಜಾತಿ ವ್ಯವಸ್ಥೆ, ಮನುವಾದದಿಂದ ಮುಕ್ತವಾದ ಸ್ವಾತಂತ್ರ್ಯವನ್ನು ಕೇಳುತ್ತಿರುವುದು. ನಮ್ಮ ಸಮಾಜದಲ್ಲಿ ಅಸಮಾನತೆಯೆನ್ನುವುದು ಒಳಗಿನಿಂದಲೇ ಹುಟ್ಟಿಕೊಂಡ ವ್ಯವಸ್ಥೆಯಾಗಿದೆ. ಇದರ ನಿರ್ಮೂಲನ ಅಷ್ಟೊಂದು ಸುಲಭವಲ್ಲ. ಇಂದು ಸ್ವಾತಂತ್ರ್ಯದ ಮೇಲೆ ಗಂಭೀರವಾದ ಆಕ್ರಮಣ ನಡೆದಿದೆ. ವ್ಯವಸ್ಥಿತವಾದ ಆಕ್ರಮಣ ಅದು.

**ಹೊಸತು** : ನೀವು ಸಾರ್ವಜನಿಕ ಬದುಕಿಗೆ ಪ್ರವೇಶಿಸಿದ್ದು ಹೇಗೆ?

**ಕನ್ಹಯ್ಯ** : ನಾನು ಐದನೇ ತರಗತಿಯಲ್ಲಿ ಓದುತ್ತಿದ್ದಾಗ ಇಪ್ಟಾ (ಇಂಡಿಯನ್ ಪೀಪಲ್ಸ್ ಥಿಯೇಟರ್ ಅಸೋಸಿಯೇಷನ್) ಸೇರಿದೆ. ಅಂದಿನಿಂದಲೇ ನಾನು ಹಾಡಲು ಆರಂಭಿಸಿದೆ. ಬೀದಿ ನಾಟಕಗಳನ್ನು ಮಾಡುತ್ತಿದ್ದೆವು. ಹಿಂದಿ ಸಾಹಿತ್ಯ ಓದಲು ಪ್ರಾರಂಭಿಸಿದೆ. ಆನಂತರ ಅಲ್ಪಸ್ವಲ್ಪ ಇಂಗ್ಲಿಷ್ ಪುಸ್ತಕಗಳನ್ನೂ ಸಹ ಓದುತ್ತಿದ್ದೆ. ಜೀವನೋಪಾಯಕ್ಕಾಗಿ ನಾವು ಯಾವುದೇ ವೃತ್ತಿಯನ್ನು ಅನುಸರಿಸಿದರೂ ಮನುಷ್ಯರಾಗಿ ನಮಗೆ ಒಂದು ಸಾಮಾಜಿಕ ಹೊಣೆಗಾರಿಕೆ ಇರುತ್ತದೆ ಎಂಬುದು ನನಗೆ ಈ ಸಾಂಸ್ಕೃತಿಕ ಚಳವಳಿಯಿಂದ ಅರಿವಾಯಿತು. ನಾನು




ಸಂದರ್ಶಿಸಿದವರು
**ಎನ್. ಗಾಯತ್ರಿ ಮತ್ತು ಎ. ಜ್ಯೋತಿ**

ಒಂಭತ್ತನೆ ತರಗತಿಯಲ್ಲಿದ್ದಾಗ ಮೊಟ್ಟಮೊದಲ ಬಾರಿಗೆ ಸ್ನೇಹಿತರೆಲ್ಲರೂ ಒಗ್ಗೂಡಿ ನಮ್ಮ ಮೊಹಲ್ಲಾದಲ್ಲೇ **"ಹೋಲಿ ಮಿಲನ್"** ಸಮಾರಂಭ ವನ್ನು ಏರ್ಪಡಿಸಿದೆವು. ಬಹುಶಃ ಹೀಗೆ ಶಾಲಾದಿನ ಗಳಿಂದಲೇ ಸಾರ್ವಜನಿಕ ಚಟುವಟಿಕೆಯಲ್ಲಿ ನನ್ನನ್ನು ನಾನು ತೊಡಗಿಸಿಕೊಂಡಿದ್ದೇನೆಂದು ಹೇಳಬಹುದು. ಕಾಲೇಜಿನಲ್ಲಿ ಓದುವಾಗ ೨೦೦೨ರಲ್ಲಿ ನಾನು ಆಲ್ ಇಂಡಿಯಾ ಸ್ಟೂಡೆಂಟ್ಸ್ ಫೆಡರೇಷನ್ (ಎಐಎಸ್‌ಎಫ್) ಸೇರಿದೆ. ೨೦೦೨ರಿಂದ ಇಂದಿನವರೆಗೂ ಸುಮಾರು ೧೬ ವರ್ಷಗಳ ಕಾಲ ನಾನು ಎಐಎಸ್‌ಎಫ್‌ನ ಸದಸ್ಯನಾಗಿ ಕೆಲಸ ಮಾಡಿದ್ದೇನೆ. ನಿಮಗೆ ತಿಳಿದಿರುವಂತೆ ಎಐಎಸ್‌ಎಫ್ ನಮ್ಮ ದೇಶದ ಪ್ರಪ್ರಥಮ ರಾಷ್ಟ್ರಮಟ್ಟದ ವಿದ್ಯಾರ್ಥಿ ಸಂಘಟನೆ ಯಾಗಿದ್ದು, ೧೯೩೬ರಲ್ಲಿ ಸ್ಥಾಪನೆಗೊಂಡಿರುತ್ತದೆ. ಶಾಂತಿ, ಪ್ರಗತಿ ಮತ್ತು ವೈಜ್ಞಾನಿಕ ಸಮಾಜವಾದಗಳ ತಳಹದಿಯ ಮೇಲೆ ಕಾರ್ಯ ನಿರ್ವಹಿಸುವ ಎಐಎಸ್‌ಎಫ್ ಸಮಾಜದಲ್ಲಿ ನ್ಯಾಯ ಮತ್ತು ಸಮಾನತೆಯನ್ನು ಬಯಸುತ್ತದೆ. ನಾನು ವಿದ್ಯಾರ್ಥಿಯಾಗಿ ಅಧ್ಯಯನ ನಡೆಸುತ್ತಿದ್ದೇನೆ ಮತ್ತು ಈ ದೇಶದ ಪ್ರಜೆಯಾಗಿ ಸಮಾಜದ ಒಳಿತಿಗಾಗಿ ಹೋರಾಟಗಳಲ್ಲಿ ಪಾಲ್ಗೊಳ್ಳುತ್ತಿದ್ದೇನೆ.

**ಹೊಸತು** : ನಿಮ್ಮ ಈ ಹೋರಾಟದ ಬದುಕಿಗೆ ಒತ್ತಾಸೆಯಾದ ನಿಮ್ಮ ಕುಟುಂಬದ ಹಿನ್ನೆಲೆಯ ಬಗ್ಗೆ ತಿಳಿಸುವಿರಾ?

**ಕನ್ಹಯ್ಯ** : ನನ್ನ ತಂದೆ ಕಾರ್ಮಿಕನಾಗಿದ್ದರೂ ಮೂಲತಃ ನಮ್ಮದು ಭೂಹೀನ ಕೃಷಿಕೂಲಿಕಾರರ ಕುಟುಂಬವೇ. ನನ್ನ ತಾಯಿ ಅಂಗನವಾಡಿ ಕಾರ್ಯಕರ್ತೆಯಾಗಿ ಕೆಲಸ ಮಾಡುತ್ತಿದ್ದಾರೆ. ಅಣ್ಣ ಖಾಸಗಿ ಕಂಪನಿಯಲ್ಲಿ ಸೂಪರ್‌ವೈಸರ್ ಆಗಿ ಕೆಲಸ ಮಾಡುತ್ತಿದ್ದಾರೆ. ಒಬ್ಬ ಸಹೋದರಿ ವಿವಾಹಿತೆಯಾಗಿದ್ದಾಳೆ ಮತ್ತು ಇನ್ನೊಬ್ಬ ತಮ್ಮ ಯುಪಿಎಸ್‌ಸಿ ಪರೀಕ್ಷೆಗೆ ಸಿದ್ಧತೆ ನಡೆಸುತ್ತಿದ್ದಾನೆ.

ನಾನು ಮಿಶ್ರ ರಾಜಕೀಯ ಹಿನ್ನೆಲೆಯುಳ್ಳ ಕುಟುಂಬದಿಂದ ಬಂದಿದ್ದೇನೆ. ನನ್ನಜ್ಜ (ತಂದೆಯ ತಂದೆ) ಎಐಟಿಯುಸಿಯ ಸದಸ್ಯರಾಗಿದ್ದರು. ಅವರು ಬರೋನಿ ಥರ್ಮಲ್ ಕಾರ್ಪೊರೇಷನ್‌ನಲ್ಲಿ ಕೆಲಸ ಮಾಡುತ್ತಿದ್ದರು. ನನ್ನ ತಾತ (ನಾನಾ) ಕಾಂಗ್ರೆಸ್ ಪಕ್ಷದ ಸದಸ್ಯರಾಗಿದ್ದವರು. ಅವರು ಕಟ್ಟಾ ಕಾಂಗ್ರೆಸ್ಸಿಗ, ಗಾಂಧೀವಾದಿಯೂ ಹೌದು. ನನ್ನ ತಂದೆ ಚಿಕ್ಕವರಿದ್ದಾಗ ಸಿಪಿಐ (ಎಂಎಲ್)ನ ಸದಸ್ಯರಾಗಿ ದ್ದವರು. ಆದರೆ ಕೆಲಸಮಯದ ನಂತರ ಅವರು ಅದರಿಂದ ದೂರ ಸರಿದರು. ಇಷ್ಟೆಲ್ಲಾ ಇದ್ದರೂ ನನ್ನ ಇಡೀ ಕುಟುಂಬ ಮೊದಲಿನಿಂದಲೂ ಚುನಾವಣೆಯಲ್ಲಿ ಸಿಪಿಐ ಪಕ್ಷವನ್ನು ಬೆಂಬಲಿಸುತ್ತಾ ಬಂದಿದೆ. ನಮ್ಮ ಪ್ರದೇಶದಲ್ಲಿ ಸಿಪಿಐ ಬಹಳ ಪ್ರಭಾವಶಾಲಿಯಾಗಿದೆ. ಆದರೆ ಇತ್ತೀಚಿನ ದಿನಗಳಲ್ಲಿ ಹೊಸ ರಾಜಕೀಯ– ಆರ್ಥಿಕ ವಿದ್ಯಮಾನಗಳ ಹಿನ್ನೆಲೆಯಲ್ಲಿ ಮತ್ತು ಇತರ ಸಮಸ್ಯೆಗಳಿಂದಾಗಿಯೂ ಸಹ ಸಿಪಿಐ ತನ್ನ ನೆಲೆಯನ್ನು ಕಳೆದುಕೊಳ್ಳುತ್ತಿದೆ. ಹೀಗಾಗಿ ನನ್ನದು ಮಿಶ್ರ ರಾಜಕೀಯ ಹಿನ್ನೆಲೆಯ ಕುಟುಂಬ ಎಂದೇ ಹೇಳಬಹುದು.

**ಹೊಸತು** : ಹಿಂದೆ ಎಡಪಕ್ಷಗಳ ರಾಜಕೀಯ ನಾಯಕರಾಗಿ ರೂಪುಗೊಳ್ಳುತ್ತಿದ್ದವರು ವಿದ್ಯಾರ್ಥಿ ಸಂಘಟನೆಗಳಿಂದ ಬಂದವರಾಗಿರುತ್ತಿದ್ದರು. ಈಗ ಅಂತಹ ಸ್ಥಿತಿ ಇದೆಯೇ?

**ಕನ್ಹಯ್ಯ** : ನಾವು ಒಂದು ಸತ್ಯವನ್ನು ಅರ್ಥಮಾಡಿ ಕೊಳ್ಳಬೇಕಿದೆ. ಸಿಪಿಐನ ಬೆನ್ನೆಲುಬು ಎಐಎಸ್‌ಎಫ್ ಅಲ್ಲ, ಹಾಗೆಯೆ ಸಿಪಿಐ(ಎಂ)ನದ್ದು ಎಸ್‌ಎಫ್‌ಐ ಅಲ್ಲ. ಸಿಪಿಐ ಮತ್ತು ಸಿಪಿಐ(ಎಂ)ಗಳ ಆಧಾರಸ್ತಂಭ ಗಳಾಗಿರುವುದು ಎಐಟಿಯುಸಿ ಹಾಗೂ ಸಿಐಟಿಯು. ಎಡಪಕ್ಷಗಳು ಕೈಗಾರಿಕಾ ಸಂಬಂಧಗಳ ಆಧಾರದಲ್ಲೇ ರಚನೆಯಾದದ್ದು. ಈಗ ಕೈಗಾರಿಕಾ ಸಂಬಂಧಗಳು ಬದಲಾಗುತ್ತಿವೆ. ಈ ಪಕ್ಷಗಳು ಮೂಲತಃ ವಿದ್ಯಾರ್ಥಿ ಅಥವಾ ರೈತ ಚಳವಳಿಗಳನ್ನು ಆಧರಿಸಿಲ್ಲ.

**ಹೊಸತು** : ಅಂದರೆ, ಇಂದು ಎಡ ಚಳುವಳಿಗಳು ಕೃಷಿ ಪ್ರಧಾನ ಆಗಿಲ್ಲವೆಂದರ್ಥವೇ?

**ಕನ್ಹಯ್ಯ** : ಹೌದು, ಖಂಡಿತವಾಗಿಯೂ. ಕಮ್ಯುನಿಸ್ಟ್ ಪಕ್ಷದಲ್ಲಿ ಒಬ್ಬನೇ ಒಬ್ಬ ರೈತ ನಾಯಕನನ್ನು ತೋರಿಸಿ, ನೋಡೋಣ. ಹಿಂದೆಲ್ಲಾ ಸಾಕಷ್ಟು ಜನ ಕಮ್ಯುನಿಸ್ಟ್ ರೈತ ನಾಯಕರಿದ್ದರು, ಇಲ್ಲವೆಂದೇನಲ್ಲ. ಉತ್ತರಪ್ರದೇಶದ ಪೂರ್ವಭಾಗದಲ್ಲೂ ಕಮ್ಯುನಿಸ್ಟ್ ರೈತ ನಾಯಕರಿದ್ದರು. ಸಹಜಾನಂದ ಸರಸ್ವತಿ ಅವರು

ಕಮ್ಯುನಿಸ್ಟ್ ಪಕ್ಷದಲ್ಲಿರದೇ ಹೋದರೂ ಅವರು ಸಿಪಿಐಗೆ ಅತಿ ಸನಿಹದಲ್ಲಿದ್ದ ಕಿಸಾನ್ ಸಭಾ ನಾಯಕರಾಗಿದ್ದರು. ದಕ್ಷಿಣ ಭಾರತದಲ್ಲಿ ಆಂಧ್ರಪ್ರದೇಶ ಮತ್ತು ಕೇರಳಗಳಲ್ಲೂ ರೈತ ನಾಯಕರನ್ನು ನಾವು ನೋಡಬಹುದು. ಆದರೆ ಇವರೆಲ್ಲರ ನಂತರ ಈಗ ಯಾರೂ ಕಣ್ಣಿಗೆ ಕಾಣುವುದಿಲ್ಲ. ಈಗ ಪಂಜಾಬದಲ್ಲೂ ಸಹ ಯಾರೂ ಇಲ್ಲದಂತಾಗಿದೆ.

ನಾವು (ಕಮ್ಯುನಿಸ್ಟರು) ಭಾರತದ ಸಾಮಾಜಿಕ ಸಂಬಂಧಗಳನ್ನು ಗಣನೆಗೆ ತೆಗೆದುಕೊಂಡು ಕೆಲಸ ಮಾಡಲಿಲ್ಲವಾದ್ದರಿಂದ ಬಹಳಷ್ಟು ಕಳೆದುಕೊಂಡೆವು. ನಮ್ಮಲ್ಲಿ ಅದ್ಭುತ ದಲಿತ ನಾಯಕತ್ವವಿತ್ತು. ಅದನ್ನು ಮುಂದುವರಿಸಲು ವಿಫಲರಾದೆವು. ಪೆರಿಯಾರ್ ಸಿಪಿಐನಲ್ಲಿದ್ದರು. ಅವರು ಸಿಪಿಐ ಸ್ಥಾಪನೆಯಾಗುವಾಗ ಸ್ವಾಗತ ಸಮಿತಿಯ ಸದಸ್ಯರೂ ಆಗಿದ್ದರು. ಆದರೆ ನಂತರದ ದಿನಗಳಲ್ಲಿ ಸಿಪಿಐ ತೊರೆದು ಕಾಂಗ್ರೆಸ್ ಸೇರಿ ಅದರಿಂದಲೂ ಹೊರಬಂದರು. ಆದ್ದರಿಂದ ನಮ್ಮ ಮುಂದೆ ಕೆಲವು ಮೂಲ ತಾತ್ವಿಕ ಪ್ರಶ್ನೆಗಳಿವೆ. ಒಂದು, ಭಾರತೀಯ ಸಮಾಜದ ಆರ್ಥಿಕ ಸಂಬಂಧಗಳನ್ನು ಅರ್ಥೈಸಿಕೊಳ್ಳುವುದು; ಎರಡನೆಯದಾಗಿ ನಾವು ಎಐಟಿಯುಸಿ ಮತ್ತು ಸಿಐಟಿಯು ಎಂಬ ಅತಿ ದೊಡ್ಡ ಕಾರ್ಮಿಕ ಸಂಘಟನೆಗಳನ್ನು ಕಟ್ಟಿ ಬೆಳೆಸಿದ್ದರೂ ಸಹ ಅವು ಮತಗಳಾಗಿ ಪರಿವರ್ತನೆಯಾಗಲು ಏಕೆ ಸಾಧ್ಯವಾಗಿಲ್ಲ ಎಂಬುದು. ಅವುಗಳು ಕನಿಷ್ಠ ವೇತನ, ವೇತನ ಹೆಚ್ಚಳ ಮತ್ತು ಕಾರ್ಮಿಕ ಸಂಘದ ಚಟುವಟಿಕೆಗಳಿಗೆ ಹೆಚ್ಚು ಮಹತ್ವ ನೀಡಿವೆ. ನಮ್ಮ ಕಾರ್ಮಿಕ ಸಂಘಟನೆಗಳು ರಾಜಕೀಯ ಗುರಿಯನ್ನಿರಿಸಿಕೊಂಡು ಕೆಲಸ ಮಾಡಲು ವಿಫಲವಾಗಿವೆ. ಈಗ ಸಮಾಜದಲ್ಲಿ ಹೊಸ ಬಗೆಯ ದುಡಿಯುವ ವರ್ಗ ಹೊರಹೊಮ್ಮುತ್ತಿದ್ದು, ಆ ವರ್ಗದ ಕಾರ್ಮಿಕರನ್ನು ಸಂಘಟನೆಯೊಳಗೆ ಸೆಳೆಯಲು ನಾವು ಸನ್ನದ್ಧರಾಗಿಲ್ಲ. ಈ ಸಂಘಟನೆಗಳು ಒಂದು ರೀತಿಯಲ್ಲಿ ಸೀಮಾರೇಖೆ ತಲುಪಿದಂತಾಗಿವೆ. ಈಗ ಗೇಟ್ ಮೀಟಿಂಗ್‌ಗಳು ನಡೆಯುವುದಿಲ್ಲ. ಏಕೆಂದರೆ ಇನ್ನೊಂದೈದು ಅಥವಾ ಹತ್ತು ವರ್ಷಗಳಲ್ಲಿ ಇಡೀ ಕೈಗಾರಿಕಾ ವ್ಯವಸ್ಥೆಯನ್ನೇ ನಿರ್ಮೂಲನೆ ಮಾಡಲಾಗುತ್ತದೆ. ಕೈಗಾರಿಕಾ ಕ್ರಾಂತಿಯ ಯುಗದಲ್ಲಿದ್ದಂತೆ ಇಂದು ಲೇತ್ ಅಥವಾ ಇತರೆ ಯಂತ್ರಗಳನ್ನು ಬಳಸಿ ಕೆಲಸ ಮಾಡುವ ಕಾರ್ಮಿಕರ ಸಂಖ್ಯೆ ದಿನದಿಂದ ದಿನಕ್ಕೆ ಕ್ಷೀಣವಾಗುತ್ತಿದೆ. ಕಂಪ್ಯೂಟರ್ ಬಳಕೆ ಹೆಚ್ಚುತ್ತಿದೆ. ಹೊಸ ಉತ್ಪಾದನಾ ಪದ್ಧತಿ ಜೀವ ಪಡೆಯುತ್ತಿದೆ. ಹಾಗಾಗಿ ಇವೆಲ್ಲವೂ ನಮ್ಮ ಮುಂದಿರುವ ಸವಾಲುಗಳೆ. ನನ್ನ ಅಭಿಪ್ರಾಯ ತಪ್ಪಾಗಿರಬಹುದು. ಆದರೂ ನನ್ನ ಅನಿಸಿಕೆ ಇದು.

**ಹೊಸತು** : ದೇಶದ ಭವಿಷ್ಯವಾಗಿರುವ ನಮ್ಮ ಯುವಜನತೆಯ ಅಭಿಪ್ರಾಯಗಳು ನಮಗೆ ಬಹಳ ಮುಖ್ಯವೆನಿಸುತ್ತದೆ. ನಿಮ್ಮ ಮಾತು ಮುಂದುವರೆಸಿ.

**ಕನ್ಹಯ್ಯ** : ಕೈಗಾರಿಕಾ ಕ್ರಾಂತಿಯ ನಂತರದ ದಿನಗಳಲ್ಲೇ ಕಲ್ಯಾಣರಾಜ್ಯದ ಪರಿಕಲ್ಪನೆ ಹುಟ್ಟಿದ್ದು. ಆಗಲೇ ಕಲ್ಯಾಣರಾಜ್ಯ, ಕಾರ್ಮಿಕ ಸಂಘಟನೆ, ಮುಷ್ಕರ, ಕೆಲಸದ ಅವಧಿ, ಎಲ್ಲವೂ ಬಂದದ್ದು. ಆದರೆ ಈಗ ಕಾರ್ಮಿಕರು ನಿಗದಿತ ಕೆಲಸದ ಅವಧಿಗೆ ತಯಾರಿಲ್ಲ. ಅವರು "ಇನ್ಸೆಂಟೀವ್"ಗೋಸ್ಕರ ಹೆಚ್ಚು ಕಾಲ ದುಡಿಯಲು ಸಿದ್ಧರಿದ್ದಾರೆ.

ನಮ್ಮ ದೇಶದ ರಾಜಕೀಯದಲ್ಲಿ ಕಳೆದ ಒಂದು ವರ್ಷಗಳ ಹಿಂದೆ ಕನ್ಹಯ್ಯ ಕುಮಾರ್ ಅಂದರೆ ಯಾರಿಗೆ ಗೊತ್ತಿತ್ತು? ೨೦೧೬ರ ಫೆಬ್ರವರಿ ತಿಂಗಳಿನಲ್ಲಿ ಜವಹರಲಾಲ್ ನೆಹರು ವಿಶ್ವವಿದ್ಯಾಲಯದ ಮೆರವಣಿಗೆಯ ಸಭೆಯಲ್ಲಿ ದೇಶದ್ರೋಹದ ಘೋಷಣೆ ಕೂಗಿದ, ಎಂಬ ಸುಳ್ಳು ಆರೋಪ ಹೊತ್ತು ಬಂಧನಕ್ಕೊಳಗಾದ ನಂತರ ಇವರೊಬ್ಬ ರಾಜಕೀಯ ಹೀರೋ ಆಗಿ ಹೊರಹೊಮ್ಮಿದ್ದಾರೆ. ಇವರು ದೇಶದ ಯಾವುದೇ ಭಾಗಕ್ಕೆ ಹೋಗಲಿ, ಇವರ ಭಾಷಣವನ್ನು ಕೇಳಲು ಯುವಜನ ಕಿಕ್ಕಿರಿದು ಸೇರುತ್ತಾರೆ. ಭಾರತದ ಇಂದಿನ ಯುವಜನಾಂಗಕ್ಕೆ ಭರವಸೆಯ ಧ್ವನಿಯಾಗಿರುವ ಶ್ರೀ ಕನ್ಹಯ್ಯ ಕುಮಾರ್ ಜವಹರಲಾಲ್ ವಿಶ್ವವಿದ್ಯಾಲಯದ ವಿದ್ಯಾರ್ಥಿ ಸಂಘಟನೆಯ ಮಾಜಿ ಅಧ್ಯಕ್ಷ. ಅವರು ಅಖಿಲ ಭಾರತ ವಿದ್ಯಾರ್ಥಿ ಫೆಡರೇಷನ್‌ನ ನಾಯಕರೂ ಹೌದು. ಅವರ ತಂದೆ ಜೈಶಂಕರ ಸಿಂಗ್ ಬಿಹಾರದ ಬೇಗುಸರಾಯ್ ಜಿಲ್ಲೆಯ ಬಿಹಾತ್ ಹಳ್ಳಿಯಲ್ಲಿ ಕೃಷಿ ಕೂಲಿಗಾರ; ತಾಯಿ ಮೀನಾ ದೇವಿ ಅಂಗನವಾಡಿ ಕಾರ್ಯಕರ್ತೆ. ಇಬ್ಬರೂ ಕಮ್ಯುನಿಸ್ಟ್ ಪಕ್ಷದ ಬೆಂಬಲಿಗರು. ಶಾಲಾ ದಿನಗಳಲ್ಲಿ ಅತ್ಯಂತ ಬುದ್ಧಿವಂತ ವಿದ್ಯಾರ್ಥಿಯೆನಿಸಿಕೊಂಡ ಕನ್ಹಯ್ಯ, ಎಲ್ಲ ತರಗತಿಗಳಲ್ಲೂ ಪ್ರಥಮ ದರ್ಜೆಯಲ್ಲಿಯೇ ಉತ್ತೀರ್ಣನಾಗುತ್ತಾ ಸಂಗೀತ, ನಾಟಕದ ಅಭಿರುಚಿಯನ್ನು ಬೆಳೆಸಿಕೊಂಡರು. ನಳಂದ ಮುಕ್ತ ವಿಶ್ವವಿದ್ಯಾಲಯದಿಂದ ಸಮಾಜಶಾಸ್ತ್ರದಲ್ಲಿ ಎಂ.ಎ. ಪದವಿ ಪಡೆದ ನಂತರ, ಜೆ.ಎನ್.ಯು.ನ ಸ್ಕೂಲ್ ಆಫ್ ಇಂಟರ್‌ನ್ಯಾಷನಲ್ ಸ್ಟಡೀಸ್‌ನಲ್ಲಿ 'ಆಫ್ರಿಕನ್ ಅಧ್ಯಯನ'ದಲ್ಲಿ ಪಿಎಚ್.ಡಿ.ಯ ವಿದ್ಯಾರ್ಥಿಯಾಗಿ ಸೇರ್ಪಡೆಯಾದರು. ೨೦೧೫ರ ಸೆಪ್ಟೆಂಬರ್‌ನಲ್ಲಿ ಜೆ.ಎನ್.ಯು. ವಿದ್ಯಾರ್ಥಿ ಸಂಘಟನೆಯ ಅಧ್ಯಕ್ಷನಾಗಿ ಚುನಾಯಿತನಾದ ಕನ್ಹಯ್ಯ ಎ.ಐ.ಎಸ್.ಎಫ್.ಗೆ ಸೇರಿದ ಮೊದಲ ಜೆ.ಎನ್.ಯು. ವಿದ್ಯಾರ್ಥಿ ಸಂಘದ ಅಧ್ಯಕ್ಷರಾಗಿದ್ದಾರೆ. ಹಿಂದುತ್ವ ರಾಜಕೀಯಕ್ಕೆ ಪ್ರಬಲ ವಿರೋಧ ವ್ಯಕ್ತಪಡಿಸುತ್ತಿರುವ ರಾಜಕೀಯ ಯುವನಾಯಕರಾಗಿ ಹೊರಹೊಮ್ಮಿದ್ದಾರೆ. ೨೦೧೬ರ ಅಕ್ಟೋಬರ್‌ನಲ್ಲಿ 'ಬಿಹಾರದಿಂದ ತಿಹಾರ್‌ಗೆ' ಎಂಬ ಅವರ ಆತ್ಮಚರಿತ್ರೆಯು ಪ್ರಕಟವಾಗಿದೆ.





ಅವರಿಗೆ ಪ್ಯಾಕೇಜ್ ಬೇಕು. ಹೊಸ ಮಾದರಿಯ ಕಾರ್ಮಿಕ ವರ್ಗ ಹುಟ್ಟಿಕೊಂಡಿದೆ. ಅದನ್ನು ಸಂಘಟಿಸುವುದು ಬಹಳ ಕಷ್ಟವಾಗುತ್ತಿದೆ.

**ಹೊಸತು :** ತೀವ್ರವಾದಿ ಎಡಪಂಥೀಯರಿದ್ದ ನಿಮ್ಮ ಕುಟುಂಬದಲ್ಲಿ ನೀವು ಹೇಗೆ ಮತ ಚುನಾವಣೆಯನ್ನು ಒಪ್ಪುವ ಸಿಪಿಐ ಆಯ್ಕೆ ಮಾಡಿಕೊಂಡಿರಿ?

**ಕನ್ಹಯ್ಯ :** ತೀವ್ರವಾದಿ ಎಂದೇನೂ ಅಲ್ಲ, ಉದಾರವಾದಿ ಚಿಂತನೆಗಳನ್ನೂ ಒಳಗೊಂಡಿರುವ ಕುಟುಂಬ ನಮ್ಮದು ಎಂದು ಹೇಳಬಹುದು. ಮೊದಲಿಗೆ ಅದು ಕಾಕತಾಳೀಯವೆಂದರೂ ತಪ್ಪಿಲ್ಲ. ನಾನು ಜಾತೀಯತೆ ಮತ್ತು ಧಾರ್ಮಿಕ ಮೂಲಭೂತವಾದದ ವಿರುದ್ಧ ಇದ್ದವನು. ಕಾಲೇಜಿನಲ್ಲಿ ಅವುಗಳನ್ನು ವಿರೋಧಿಸುವಂತಹ ಸಂಘಟನೆಯೊಂದು ಬಂದಾಗ ಅದರೊಡನೆ ಸೇರುವುದು ಸಹಜವೇ. ನನ್ನ ಕಾಲೇಜಿನಲ್ಲಿ ಎಐಎಸ್‌ಎಫ್ ಸಕ್ರಿಯವಾಗಿದ್ದರಿಂದ ನಾನೂ ಅದರ ಭಾಗವಾದೆ. ಅದು ಎಐಎಸ್‌ಎಫ್ ಆಗಿರದೆ ಎಐಎಸ್‌ಎ ಆಗಿದ್ದರೂ ಬಹುಶಃ ನನ್ನಂತಹವರು ಅದರಲ್ಲಿ ಇರುತ್ತಿದ್ದರೇನೋ! ಗೊತ್ತಿಲ್ಲ. ಎಐಎಸ್‌ಎಫ್ ಸೇರಿದ್ದರಿಂದ ಮೊದಲು ಮಾರ್ಕ್ಸ್‌ವಾದವನ್ನು ಅಭ್ಯಾಸ ಮಾಡಿದೆ. ಎಐಎಸ್‌ಎಫ್ ಚರಿತ್ರೆ ಓದಿದಾಗ, ಯುಎಸ್‌ಎಸ್‌ಆರ್ ವಿಘಟನೆಯ ಬಗ್ಗೆ ತಿಳಿದುಕೊಂಡಾಗ ಮತ್ತು ಮಾವೊ ಮಾದರಿಯ ವೈಫಲ್ಯದ ಕುರಿತು ಅಧ್ಯಯನ ಮಾಡಿದಾಗ, ತೀವ್ರವಾದಿ ಎಡಪಂಥೀಯ ಮಾದರಿ ನಮ್ಮ ದೇಶದ ಸಮಸ್ಯೆಗಳನ್ನು ಬಗೆಹರಿಸುವುದಿಲ್ಲ ವೆಂಬುದು ಖಾತರಿಯಾಯಿತು. ನಿಜ, ಈ ವ್ಯವಸ್ಥೆಯ ವಿರುದ್ಧ ಸೇಡು ತೀರಿಸಿಕೊಳ್ಳುವುದು, ಅನ್ಯಾಯದ ವಿರುದ್ಧ ಸಿಡಿದೇಳುವುದು ಸಹಜವೇ. ಅದಕ್ಕಾಗಿ ಶಸ್ತ್ರಾಸ್ತ್ರ ಹಿಡಿಯುವುದು ಯೌವನದ ಒಂದು ಸಾಹಸವಷ್ಟೇ. ಆದರೆ ವ್ಯವಸ್ಥೆಯನ್ನು ವಿಶ್ಲೇಷಿಸಿದಾಗ, ವ್ಯವಸ್ಥೆಯನ್ನು ಅರ್ಥೈಸಿಕೊಂಡಾಗ ಅದು ವಿವೇಕದ ಕೆಲಸವಲ್ಲ ಎಂಬುದು ಅರಿವಾಗುತ್ತದೆ. ಲೆನಿನ್ ಹೇಳಿದಂತೆ ಸಮಾಜವಾದಕ್ಕೆ ಪ್ರಜಾಪ್ರಭುತ್ವ ಅನಿವಾರ್ಯ. ಜನರ ನಡುವೆ ಹೋಗಿ ಪ್ರಜಾಪ್ರಭುತ್ವದ ಮಾದರಿಗಳನ್ನು ಹುಡುಕಾಡಿ ಬೂರ್ಷ್ವಾ ಪ್ರಜಾಪ್ರಭುತ್ವವನ್ನು ನಾವು ಸಮರ್ಪಕವಾಗಿ ಅನ್ವೇಷಿಸಬೇಕು.

ಎಲ್ಲಿಯೂ ಪ್ರಜಾಪ್ರಭುತ್ವಕ್ಕೆ ಪರ್ಯಾಯವಿಲ್ಲ. ಪೋಲ್‌ಪೋಟ್, ಸ್ಟಾಲಿನ್‌ಗಳ ಆಡಳಿತದಲ್ಲೇನಾಯಿತು? ಕೊರಿಯಾದಲ್ಲಿ ಏನಾಗುತ್ತಿದೆ? ಚೀನಾದಲ್ಲಿ ಏನು ನಡೆಯುತ್ತಿದೆ? ಇವುಗಳನ್ನು ನಾವು ಒಪ್ಪಿಕೊಳ್ಳಲು ಸಾಧ್ಯವೇ ಇಲ್ಲ. ಜಗತ್ತಿನೊಳಗೆ ರಾಜಕೀಯ ಸಿದ್ಧ ಪರ್ಯಾಯವಿಲ್ಲ. ಏಕಪಕ್ಷ ಆಡಳಿತ ವ್ಯವಸ್ಥೆಯಿದ್ದ ಕ್ಯೂಬಾ ಮತ್ತು ವಿಯೆಟ್ನಾಮ್ ದೇಶಗಳು ಈಗ ಬಹುಪಕ್ಷ ವ್ಯವಸ್ಥೆಗೆ ಬದಲಾಗಬೇಕೆಂಬ ಚಿಂತನೆಯಲ್ಲಿವೆ. ಜಾಗತಿಕ ಆರ್ಥಿಕ ವ್ಯವಸ್ಥೆಯು ಅಲ್ಲೆಲ್ಲಾ ಮಾರುಕಟ್ಟೆ ತೆರೆಯಲು ಒತ್ತಡ ಹೇರುತ್ತಿದೆ. ಮಾರುಕಟ್ಟೆ ತೆರೆದಂತೆ ಸಮಾಜದಲ್ಲಿ ಹೊಸ ಬಂಡವಾಳಶಾಹಿ ವರ್ಗಗಳು ಸೃಷ್ಟಿಯಾಗುತ್ತವೆ. ಈ ವರ್ಗಗಳು ಹೊಸ ರಾಜಕೀಯ ಪಕ್ಷಗಳನ್ನು ಹುಟ್ಟುಹಾಕುತ್ತವೆ. ಹೀಗೆ ಬಹುಪಕ್ಷ ರಾಜಕೀಯ ಆಡಳಿತ ವ್ಯವಸ್ಥೆ ಆರಂಭವಾಗಿಯೇ ತೀರುತ್ತದೆ ಮತ್ತು ಚುನಾವಣೆಗಳು ನಡೆಯಲೇಬೇಕಾಗುತ್ತದೆ. ಏಕಪಕ್ಷ ಆಡಳಿತ ವ್ಯವಸ್ಥೆ ಇಂದಿನ ಪರಿಸ್ಥಿತಿಯಲ್ಲಿ ಸಲ್ಲದ ಮಾತು. ಇದು ನಮ್ಮ ಕಾಲದ ವಾಸ್ತವ ಎಂಬುದನ್ನು ನಾನು ಅರಿತು ಪ್ರಜಾಪ್ರಭುತ್ವದ ಹಾದಿಯನ್ನು ಆಯ್ದುಕೊಂಡಿರುವೆ. ಬುಲೆಟ್‌ನಿಂದ, ಶಸ್ತ್ರಾಸ್ತ್ರಗಳಿಂದ ಕ್ರಾಂತಿಯಾಗುತ್ತದೆಂಬ ಆಲೋಚನೆಯ ಸೋಂಕು ನನಗೆಂದೂ ತಗುಲಿಲ್ಲ.

**ಹೊಸತು :** ನೀವು ವಿಜ್ಞಾನದ ವಿದ್ಯಾರ್ಥಿಯಾಗಿ ಆನಂತರ ಕಲಾ ವಿಭಾಗವನ್ನು ಆರಿಸಿಕೊಂಡಿರಿ. ಕಾರಣ?

**ಕನ್ಹಯ್ಯ :** ಹೌದು, ನಾನು ಹತ್ತನೇ ತರಗತಿಯ ನಂತರ ಗಣಿತ, ಭೌತಶಾಸ್ತ್ರ ಮತ್ತು ರಸಾಯನಶಾಸ್ತ್ರಗಳನ್ನು ಆಯ್ದುಕೊಂಡಿದ್ದೆ. ಇಂದಿನ ಎಲ್ಲಾ ಪೋಷಕರಂತೆ ನನ್ನ ತಂದೆಯೂ ಸಹ ನಾನು ಇಂಜಿನಿಯರ್ ಆಗಬೇಕೆಂಬ ಬಯಕೆ ಹೊತ್ತಿದ್ದರು. ಆದರೆ ನನಗದು ಇಷ್ಟವಾಗದೆ ಹೊರಬಂದೆ. ನಾನು ಯಪಿಎಸ್‌ಸಿ ಬಗ್ಗೆ ಆಲೋಚನೆ ಮಾಡಿ ಭೂಗೋಳಶಾಸ್ತ್ರ, ಇತಿಹಾಸ ಮತ್ತು ಸಮಾಜಶಾಸ್ತ್ರಗಳನ್ನು ಆಯ್ದು ಕಲಾವಿಭಾಗದಲ್ಲಿ ಪದವಿಗೆ ಸೇರಿದೆ. ಪದವಿಯ ನಂತರ ಬಹಳಷ್ಟು ಓದಿಕೊಂಡೆ. ಅಧ್ಯಯನದಲ್ಲಿ ನನಗೆ ಅತ್ಯಂತ ಆಸಕ್ತಿ ಉಂಟಾಗಿ ಸಮಾಜಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿ ಗಳಿಸಿದೆ. ಜೆಎನ್‌ಯು ಸೇರಿ ಸಾಮಾಜಿಕ ಪರಿವರ್ತನೆಯ ವಿಷಯವಾಗಿ ಎಂ.ಫಿಲ್. ಅಧ್ಯಯನ ಮಾಡಿದೆ. ಪಶ್ಚಿಮ ಆಫ್ರಿಕಾದ ಸೆನೆಗಲ್ ಮತ್ತು ದಕ್ಷಿಣ ಆಫ್ರಿಕಾ ದೇಶಗಳಲ್ಲಿ ಸಾಮಾಜಿಕ ಪರಿವರ್ತನೆಯ ಕುರಿತು ಸಂಶೋಧನೆ ನಡೆಸುತ್ತಿರುವೆ. ೧೯೯೪ರಲ್ಲಿ ದಕ್ಷಿಣ ಆಫ್ರಿಕಾ ಸ್ವತಂತ್ರಗೊಂಡು ನೂತನ ಸಂವಿಧಾನವನ್ನು ಅಂಗೀಕರಿಸಿದ ನಂತರದ ಅವಧಿಯನ್ನು ನನ್ನ ಅಧ್ಯಯನಕ್ಕೆ ಬಳಸಿಕೊಂಡಿದ್ದೇನೆ. ಈ ಅವಧಿಯಲ್ಲಿ ಕೆಲವು ಜನಪರ ನೀತಿಗಳನ್ನು ಅನುಸರಿಸಲಾಗಿದೆ. ಈ ಸಂದರ್ಭದಲ್ಲಿ ಸಾಮಾಜಿಕ ಪರಿವರ್ತನೆ ಯಾವ ಹಂತದಲ್ಲಿ ಸಾಗಿದೆ? ಪರಿವರ್ತನೆ ನಡೆಯುತ್ತಿದೆಯೋ ಇಲ್ಲವೋ? ಕಲ್ಯಾಣರಾಜ್ಯದ ಪರಿಕಲ್ಪನೆಯನ್ನು ನಾಶ ಮಾಡುವಲ್ಲಿ ನವ-ಉದಾರವಾದದ ಪಾತ್ರವೆಷ್ಟು? ಕಲ್ಯಾಣರಾಜ್ಯದ ಹೆಸರಿಲ್ಲದೆ ಸಾಮಾಜಿಕ ಪರಿವರ್ತನೆ ಸಾಧ್ಯವೇ? ಹೀಗೆ ಹಲವಾರು ಪ್ರಶ್ನೆಗಳನ್ನಿಟ್ಟುಕೊಂಡು ಆಫ್ರಿಕಾ ದೇಶಗಳ ಸಾಮಾಜಿಕ ಪರಿವರ್ತನೆಯ ವಿಚಾರದಲ್ಲಿ ನಾನು ಅಧ್ಯಯನ ಮತ್ತು ಸಂಶೋಧನೆ ಮಾಡುತ್ತಿದ್ದೇನೆ. ನನ್ನ ಮಾರ್ಗದರ್ಶಕರು ಶ್ರೀಯುತ ಯಶವಂತ ಮಾಲಾಕಾರ್. ಹಳ್ಳಿಯಿಂದ ಇಂಜಿನಿಯರ್ ಆಗಲು ಪಟ್ಟಣಕ್ಕೆ ಬಂದ ನಾನು ಅಧಿಕಾರಿಯಾಗಲು ನಗರಕ್ಕೆ ಹೊರಟು ಅಂತಿಮವಾಗಿ ಜೆಎನ್‌ಯು ಸೇರಿ ಅಧ್ಯಯನ ಮಾಡುತ್ತಲೇ ಹೋರಾಟಗಾರನಾದೆ. ಇದು ನನ್ನ ಪರಿವರ್ತನೆ.

**ಹೊಸತು :** ಜೆಎನ್‌ಯು, ಹೈದರಾಬಾದ್ ಕೇಂದ್ರೀಯ ವಿಶ್ವವಿದ್ಯಾಲಯ, ಮುಂತಾದ ಕಡೆಗಳಲ್ಲಿ ವಿದ್ಯಾರ್ಥಿಗಳ ವಿರುದ್ಧ ಕೇಂದ್ರ ಸರ್ಕಾರ ತೆಗೆದುಕೊಂಡಿರುವಂತಹ ಸೇಡಿನ ನೀತಿಯ ಬಗ್ಗೆ ಏನು ಹೇಳುತ್ತೀರಿ?

**ಕನ್ಹಯ್ಯ :** ಇದೇ ಮೊದಲ ಬಾರಿಗೆ ಕೇಂದ್ರದಲ್ಲಿ ಬಲಪಂಥೀಯ ಸರ್ಕಾರ ಸಂಪೂರ್ಣ ಬಹುಮತದೊಂದಿಗೆ ಅಧಿಕಾರಕ್ಕೆ ಬಂದಿದೆ. ಹಾಗಾಗಿ ಶಿಕ್ಷಣ ಮತ್ತು ಸಂಶೋಧನಾ ಕೇಂದ್ರಗಳ ಕೇಸರೀಕರಣವೇ ಅದರ ಪ್ರಥಮ ಅಜೆಂಡಾ ಆಗಿದೆ. ನಿಯಮಗಳನ್ನು ಗಾಳಿಗೆ ತೂರಿ ತಮ್ಮವರನ್ನೇ ಉನ್ನತ ಶಿಕ್ಷಣ ಕೇಂದ್ರಗಳ ಮುಖ್ಯಸ್ಥರನ್ನಾಗಿಸಲು ಪ್ರಯತ್ನಿಸುತ್ತಿದ್ದಾರೆ. ಅವರು ಸ್ವಾಯತ್ತತೆಯನ್ನು ನಾಶ ಮಾಡಿ ಪ್ರಜಾಪ್ರಭುತ್ವವಿರೋಧಿ ನಡವಳಿಕೆಗಳನ್ನು ಸಾಮಾನ್ಯಗೊಳಿಸಲು ಯತ್ನಿಸುತ್ತಿದ್ದಾರೆ. ಹಾಗಾಗಿ ಇವೆಲ್ಲವುಗಳ ವಿರುದ್ಧದ ಪ್ರತೀಕಾರವೇ ಇದು ಎಂದು ಹೇಳಬಹುದು. ಆದರೆ ಮೊದಲು ಪ್ರತೀಕಾರಕ್ಕೆ ಕೈಹಾಕಿದ್ದು ವಿದ್ಯಾರ್ಥಿಗಳಲ್ಲ. ಕೇಂದ್ರ ಸರ್ಕಾರವೇ ವಿದ್ಯಾರ್ಥಿಗಳನ್ನು ಪ್ರಚೋದಿಸಿತು. ಉದಾಹರಣೆಗೆ, ಎಫ್‌ಟಿಐಐ ವಿಚಾರ ಗಮನಿಸಿ. ಈ ಉನ್ನತ ಕಲಾಕೇಂದ್ರದಲ್ಲಿ ವಿದ್ಯಾರ್ಥಿಗಳು ಪ್ರತಿಭಟಿಸುತ್ತಿರಲಿಲ್ಲ. ಸರ್ಕಾರವೇ ಗಜೇಂದ್ರ ಚೌಹಾಣನನ್ನು ಕಳುಹಿಸಿದ್ದು. ಆತ ಕೇವಲ ಬಿಜೆಪಿಗೆ ಸೇರಿದ ವ್ಯಕ್ತಿ ಮಾತ್ರವಲ್ಲ, ಮೋದಿಯ ಪರಮಭಕ್ತ. ಆತ ಮೋದಿಯನ್ನು ಕುರಿತು ಅನೇಕ ಸಾಕ್ಷ್ಯಚಿತ್ರಗಳನ್ನು ತಯಾರಿಸಿದ್ದಾನೆ. ಅವುಗಳಲ್ಲಿ ಮೋದಿಯನ್ನು ಸೂರ್ಯನಂತೆ ಬಿಂಬಿಸಿ ಆತ ಹಿಮಾಲಯಕ್ಕೆ ಹೋದಂತೆ ಅವೈಚಾರಿಕವಾದ ಚಿತ್ರಗಳನ್ನು ರೂಪಿಸಿದ್ದಾನೆ. ಆದ್ದರಿಂದ ತಮಗೆ ಸಿನಿಮಾಗಳ ವಿಷಯದಲ್ಲಿ ಯಾವ ಬಗೆಯ ವೈಚಾರಿಕ, ಪ್ರಗತಿಪರ ಚಿಂತನೆಗಳನ್ನು ಈತ

ಹೇಳಿಕೊಡಲು ಸಾಧ್ಯ ಎಂಬ ಸಂಶಯ ಮೂಡಿ ವಿದ್ಯಾರ್ಥಿಗಳು ಗಜೇಂದ್ರ ಚೌಹಾಣನನ್ನು ವಿರೋಧಿಸಲು ಆರಂಭಿಸಿದರು. ಇವರ ಆಡಳಿತದಲ್ಲಿ ಇಂತಹದ್ದು ಇದೇ ಮೊದಲ ಪ್ರಕರಣ ಎಂದು ಹೇಳಬಹುದು. ಈ ಸರ್ಕಾರವು ಪ್ರತಿರೋಧ ವ್ಯಕ್ತಪಡಿಸುವವರನ್ನು ಬಲ ಪ್ರಯೋಗದಿಂದ ಮೌನವಾಗಿಸುವ ಪ್ರಯತ್ನ ಮಾಡುತ್ತಿದೆ.



ತಮಿಳುನಾಡಿನ ಲೇಖಕ ಮುರುಗನ್ ಪೆರುಮಾಳ್ ಅವರನ್ನು ಮೌನಗೊಳಿಸಿದ್ದು, ಮದರಾಸು ಐಐಟಿಯ ಅಂಬೇಡ್ಕರ್–ಪೆರಿಯಾರ್ ಅಧ್ಯಯನ ಕೇಂದ್ರವನ್ನು ಮುಚ್ಚಲು ಯತ್ನಿಸಿದ್ದು, ನಂತರ ಆ ವಿಶ್ವವಿದ್ಯಾಲಯಕ್ಕೆ ಬಜೆಟ್‌ನಲ್ಲಿ ಕಡಿತ, ಬಜೆಟ್ ಅನುಷ್ಠಾನದಲ್ಲಿ ಅನುದಾನ ಕಡಿತ, ಹೀಗೆ ಅವರ ಸುತ್ತಿಗೆ ಮೊದಲು ಬಿದ್ದಿದ್ದು ವಿದ್ಯಾರ್ಥಿಗಳ ತಲೆಗಳ ಮೇಲೆ. ವಿದ್ಯಾರ್ಥಿಗಳಿಗೆ ಎನ್‌ಇಟಿ ಹೊರತುಪಡಿಸಿ ಇತರ ವಿದ್ಯಾರ್ಥಿವೇತನವನ್ನು ನೀಡುವುದಿಲ್ಲವೆಂದು ಯುಜಿಸಿ ತೀರ್ಮಾನಿಸಿತು. ಎಂ.ಫಿಲ್ ಮತ್ತು ಪಿಎಚ್.ಡಿ. ವಿದ್ಯಾರ್ಥಿಗಳಿಗೆ ನೀಡಲಾಗುವ ಈ ವಿದ್ಯಾರ್ಥಿವೇತನಕ್ಕೆ ಕತ್ತರಿ ಹಾಕುವ ಯತ್ನ ನಡೆಸಲಾಯಿತು. ಇದರ ವಿರುದ್ಧ ವಿದ್ಯಾರ್ಥಿಗಳು **"ಆಕ್ಯುಪೈ ಯುಜಿಸಿ"** ಎಂಬ ಹೆಸರಿನಲ್ಲಿ ತೀವ್ರವಾಗಿ ಪ್ರತಿಭಟಿಸಿದರು. ವಿದ್ಯಾರ್ಥಿಗಳು ಎಲ್ಲೆಡೆಯಿಂದ ಬಂದು ಯುಜಿಸಿ ಕಚೇರಿಯನ್ನು ಮುತ್ತಿಗೆ ಹಾಕಿದರು. ಇದು ರಾಷ್ಟ್ರಮಟ್ಟದಲ್ಲಿ ಸುದ್ದಿ ಆಯಿತು. ಆ ಸಂದರ್ಭದಲ್ಲಿ ಶ್ರೀಮತಿ ಸ್ಮೃತಿ ಇರಾನಿ ಬಂದು ರಸ್ತೆಯಲ್ಲೇ ಮಾತುಕತೆ ಮಾಡಬೇಕಾಯಿತು. ಇದೇ ಸಮಯದಲ್ಲಿ ರೋಹಿತ್ ವೇಮುಲನ ಸಾಂಸ್ಥಿಕ ಕೊಲೆ ನಡೆದದ್ದು. ಅಲ್ಲದೆ ಈ ದಾಳಿ ಇಂದು ನೀತಿ ನಿರ್ಣಾಯಕ ಹಂತದಲ್ಲಿ, ಸಾಂಸ್ಥಿಕ ಮಟ್ಟದಲ್ಲಿ, ವಿಶ್ವವಿದ್ಯಾಲಯಗಳಲ್ಲಿ, ಸಂಶೋಧನಾ ಕ್ಷೇತ್ರಗಳಲ್ಲಿ, ಹೀಗೆ ಎಲ್ಲಾ ಘಟ್ಟಗಳಲ್ಲೂ ನಡೆಯುತ್ತಿತ್ತು. ರಾಷ್ಟ್ರೀಯ ಸಂಸ್ಥೆಗಳಿಂದ ತಮ್ಮದೇ ಖಾಸಗಿ ಸಂಸ್ಥೆಗಳಾದ ಶ್ಯಾಮಪ್ರಸಾದ್ ಮುಖರ್ಜಿ ಸಂಸ್ಥೆ, ವಿವೇಕಾನಂದ ಸಂಸ್ಥೆ, ಮುಂತಾದವುಗಳಿಗೆ ಹಣ ವರ್ಗಾವಣೆ ಮಾಡಿಕೊಳ್ಳಲಾಗುತ್ತಿದೆ. ಯುವಜನ ಕಲ್ಯಾಣಕ್ಕಾಗಿ ಮೀಸಲಿರುವ ಸರ್ಕಾರದ ಹಣವನ್ನು ಕಮಲ್ ಕ್ಲಬ್‌ಗೆ ವರ್ಗಾಯಿಸಲಾಗಿದೆ. ಜಾರ್ಖಂಡ್‌ನಲ್ಲಿ ಆದಿವಾಸಿ ಯುವಜನತೆಯನ್ನು ಸೆಳೆಯಲು ಬಿಜೆಪಿ ಸೃಷ್ಟಿಸಿರುವ ಒಂದು ಕೂಟವೇ ಕಮಲ್ ಕ್ಲಬ್! ೨–೩ ಐಐಟಿಗಳ ಮುಖ್ಯಸ್ಥರು ರಾಜೀನಾಮೆ ನೀಡಿದ್ದಾರೆ. ಐಸಿಎಚ್‌ಆರ್‌ನ ನಿರ್ದೇಶಕರನ್ನು ಬದಲಿಸಿದ್ದಾರೆ. ಹೀಗೆ ಎಲ್ಲೆಡೆ ಉದಾರ ಚಿಂತನೆಗಳ ವಾಹಕಗಳಾಗಿರುವ ಸಂಸ್ಥೆಗಳನ್ನು ತಮ್ಮ ನಿಯಂತ್ರಣಕ್ಕೆ ಪಡೆಯಲು ಅವರು ಹೊಂಚುಹಾಕುತ್ತಿದ್ದಾರೆ. ಅಧಿಕಾರ ಪಡೆದೊಡನೆ ಶಿಕ್ಷಣ ಕ್ಷೇತ್ರದ ಹಿಡಿತ ಸಾಧಿಸಲು ಯತ್ನಿಸುತ್ತಿದ್ದಾರೆ. ಹಾಗಾಗಿ ವಿದ್ಯಾರ್ಥಿಗಳು ಪ್ರತಿರೋಧ ವ್ಯಕ್ತಪಡಿಸುತ್ತಿದ್ದಾರೆ. ಅಷ್ಟೇ ಅಲ್ಲ, ಉಪನ್ಯಾಸಕರನ್ನು ನಿಯಂತ್ರಣದಲ್ಲಿಟ್ಟುಕೊಳ್ಳಲು ಎಲ್ಲಾ ಕೇಂದ್ರೀಯ ವಿಶ್ವವಿದ್ಯಾಲಯಗಳಿಗೂ ಒಂದೇ ಪಠ್ಯಕ್ರಮ ಮಾಡಿ ಅವರನ್ನು ವರ್ಗಾವಣೆ ಮಾಡುವಂತಹ ನೀತಿಗೆ ಸರ್ಕಾರ ಕೈಹಾಕಿದೆ. ಉದಾಹರಣೆಗೆ ಜೆಎನ್‌ಯುನಲ್ಲಿರುವ ಉಪನ್ಯಾಸಕರನ್ನು ಬೇರಿನ್ನೆಲ್ಲೋ ವರ್ಗಾವಣೆ ಮಾಡಿದರೆ ಅವರು ಪ್ರತಿರೋಧ ವ್ಯಕ್ತಪಡಿಸಲು ಹೆದರಬಹುದೆಂಬುದು ಇವರ ಲೆಕ್ಕಾಚಾರ. ಒಟ್ಟಾರೆ ಉಪನ್ಯಾಸಕರು ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯದ ಹಿಡಿತದಲ್ಲಿರಬೇಕೆಂದು ಇವರ ಇಂಗಿತ. ಆದ್ದರಿಂದ ಬದಲಾಗುತ್ತಿರುವ ಇಂತಹ ನೀತಿಗಳ ವಿರುದ್ಧ ಮತ್ತು ಪ್ರಜಾತಂತ್ರವಿರೋಧಿ ಕ್ರಮಗಳ ವಿರುದ್ಧ ವಿದ್ಯಾರ್ಥಿಗಳು ಪ್ರತಿರೋಧ ವ್ಯಕ್ತಪಡಿಸಲು ಆರಂಭಿಸಿದ್ದಾರೆ.

ಕೇಂದ್ರದ ಮೋದಿ ಸರ್ಕಾರ ದೇಶದ ಎಲ್ಲಾ ಪ್ರಮುಖ ಉನ್ನತ ಶಿಕ್ಷಣ ಸಂಸ್ಥೆಗಳನ್ನೂ ಆಕ್ರಮಿಸಿಕೊಳ್ಳಲು ಯತ್ನಿಸಿದೆ. ಎಲ್ಲೆಲ್ಲಿ ಪ್ರತಿರೋಧ ವ್ಯಕ್ತವಾಗಿದೆಯೋ ಅವುಗಳನ್ನು ಗುರಿಮಾಡಿ ಅವುಗಳ ಮೇಲೆ ದಾಳಿ ಮಾಡಲಾಗುತ್ತಿದೆ. ಉದಾಹರಣೆಗೆ, ಜಾಧವಪುರ ವಿಶ್ವವಿದ್ಯಾಲಯ, ಹೈದರಾಬಾದ್ ಕೇಂದ್ರೀಯ ವಿಶ್ವವಿದ್ಯಾಲಯ ಮತ್ತು ಅಲಹಾಬಾದ್ ವಿಶ್ವವಿದ್ಯಾಲಯ. ಅಲಹಾಬಾದ್ ವಿವಿಯಲ್ಲಂತೂ ಓರ್ವ ಹೆಣ್ಣುಮಗಳು ಎಬಿವಿಪಿಯ ಅಭ್ಯರ್ಥಿಯನ್ನು ಸೋಲಿಸಿ ವಿದ್ಯಾರ್ಥಿ ಸಂಘದ ಅಧ್ಯಕ್ಷೆಯಾಗಿ ಚುನಾಯಿತಳಾದಳು. ಅವರ ಕಣ್ಣು ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಗಳ ಮೇಲೆ ಬಿದ್ದಿದೆ. ಅಲಿಘರ್ ಮುಸ್ಲಿಮ್ ವಿಶ್ವವಿದ್ಯಾಲಯವನ್ನು ಗುರಿಯಾಗಿಸಿದ್ದಾರೆ. ಜೆಎನ್‌ಯು ಇವರ ವಕ್ರದೃಷ್ಟಿಯಿಂದ ತಪ್ಪಿಲ್ಲ. ಎಲ್ಲೆಲ್ಲಿ ವಿದ್ಯಾರ್ಥಿ ಚಳವಳಿ ಜೀವಂತವಾಗಿದೆಯೋ ಅವುಗಳ ಮೇಲೆ ತಪ್ಪದೆ ದಾಳಿ ನಡೆಯುತ್ತಿದೆ. ಇಷ್ಟೆಲ್ಲಾ ಆದರೂ ವಿದ್ಯಾರ್ಥಿಗಳು ಒಂದಾಗಿ ಬೀದಿಗಿಳಿದು ಸರ್ಕಾರದ ಅನ್ಯಾಯ–ಅಕ್ರಮಗಳ ವಿರುದ್ಧ ಹೋರಾಟ ನಡೆಸಿದ್ದಾರೆ, ಇನ್ನೂ ನಡೆಸುತ್ತಲೇ ಇದ್ದಾರೆ.

**ಹೊಸತು :** ಎಐಎಸ್‌ಎಫ್‌ನಲ್ಲಿ ವಿದ್ಯಾರ್ಥಿನಿಯರ ಭಾಗವಹಿಸುವಿಕೆ ಎಷ್ಟು?

**ಕನ್ಹಯ್ಯ :** ಜೆಎನ್‌ಯು ಎಐಎಸ್‌ಎಫ್ ಘಟಕದಲ್ಲಿ ಸಮ ಸಮವಾಗಿದೆ. ಅದಕ್ಕೂ ಹೆಚ್ಚೆಂದೇ ಹೇಳಬೇಕು. ಆದರೆ ಅಖಿಲ ಭಾರತ ಮಟ್ಟದಲ್ಲಿ ಗಣನೆಗೆ ತೆಗೆದುಕೊಂಡರೆ, ಇದರ ಪ್ರಮಾಣ ತೀರಾ ಕಡಿಮೆ. ಇದೂ ಕೂಡ ನಮ್ಮ ಎಡಪಂಥೀಯ ಸಂಘಟನೆಗಳ ಮೇಲೆ ಇರುವ ಒಂದು ಗಂಭೀರ ಆರೋಪ, ನಿಜ.

**ಹೊಸತು :** ವಿದ್ಯಾರ್ಥಿ ಚಳವಳಿಗಳ ಮೇಲೆ ಜನಸಾಮಾನ್ಯರು ಮಾಡುವ ಮುಖ್ಯ ಆರೋಪವೆಂದರೆ ವಿದ್ಯಾರ್ಥಿಗಳು ರಾಜಕಾರಣದಲ್ಲೇಕೆ ತೊಡಗಬೇಕು ಎಂಬುದು. ತಮ್ಮ ಪ್ರತಿಕ್ರಿಯೆ?

**ಕನ್ಹಯ್ಯ :** ಸಮಾಜದಲ್ಲಿ ರಾಜಕಾರಣವೇ ಎಲ್ಲವನ್ನೂ ನಿರ್ಧರಿಸುತ್ತದೆ ಎಂದಾದಾಗ ನಮ್ಮ ವಿದ್ಯಾರ್ಥಿಗಳ ಭವಿಷ್ಯಕ್ಕೂ ಅದು ಅತ್ಯಂತ ಪ್ರಮುಖ ವಾಗುತ್ತದೆ. ನಮ್ಮ ಭವಿಷ್ಯ ರೂಪಿಸಿಕೊಳ್ಳಲು ನಾವು ರಾಜಕೀಯ ಹೋರಾಟದಲ್ಲಿ ತೊಡಗಲೇಬೇಕು.

**ಹೊಸತು :** ಕೊನೆಯದಾಗಿ, ವಿದ್ಯಾರ್ಥಿಗಳಿಗೆ ತಮ್ಮ ಸಂದೇಶ?

**ಕನ್ಹಯ್ಯ :** ವಿದ್ಯಾರ್ಥಿಗಳು ಕಲಿತ ವಿದ್ಯೆಯನ್ನು ಜೀವನದಲ್ಲಿ ಅಳವಡಿಸಿಕೊಳ್ಳಬೇಕು. ವಿಜ್ಞಾನ ಕಲಿಯುತ್ತಾರೆ, ಆದರೆ ವೈಜ್ಞಾನಿಕ ಚಿಂತನೆ ಇರುವುದಿಲ್ಲ. ಮಾನವ ಶಾಸ್ತ್ರ ಕಲಿತವರಿಗೆ ಮಾನವೀಯತೆಯ ಕೊರತೆಯಿದ್ದರೆ ಹೇಗೆ? ಆದ್ದರಿಂದ ಏನು ಕಲಿಯುತ್ತಾರೋ ಅದನ್ನು ಜೀವನದಲ್ಲಿ ಅಳವಡಿಸಿಕೊಳ್ಳುವುದು ಬಹಳ ಮುಖ್ಯ. ಇಂದು ಎಲ್ಲಾ ವಿಷಯಗಳ ಬಗ್ಗೆ ಸಾಕಷ್ಟು ಮಾಹಿತಿ ದೊರೆಯುತ್ತದೆ. ಆದರೆ ಕೈಲಿರುವ ಮಾಹಿತಿಯನ್ನು ವಿಮರ್ಶಿಸಿ ವಿಶ್ಲೇಷಣೆಗೊಳಪಡಿಸಿ ಅರ್ಥೈಸಿಕೊಳ್ಳಬೇಕು.

**ಹೊಸತು :** ನಮ್ಮೊಡನೆ ಇಷ್ಟು ಸಮಯ ಕೊಟ್ಟು ನಿಮ್ಮ ಅಭಿಪ್ರಾಯ ಹಂಚಿಕೊಂಡದ್ದಕ್ಕೆ ಹೊಸತು ಪರವಾಗಿ ವಂದನೆಗಳು.

**ಕನ್ಹಯ್ಯ :** ನಮಸ್ಕಾರ.

ಲೇಖನ ಸಿದ್ಧಪಡಿಸಿದವರು : **ಜ್ಯೋತಿ ಎ.**
ಎಸ್–೩, ನಂ. ೩೭, ೧೬ನೇ ಮುಖ್ಯರಸ್ತೆ, ಎಂ. ಸಿ. ಬಡಾವಣೆ, ವಿಜಯನಗರ, ಬೆಂಗಳೂರು–೪೦

# ಆರ್. ಎಸ್. ರಾಜಾರಾಮ್ ಅವರಿಗೆ ಅಭಿವಂದನೆ!



'ನವಕರ್ನಾಟಕದ ರಾಜಾರಾಮ್' – ಎಂದಕೂಡಲೇ ಅವರನ್ನು ಬಲ್ಲವರ ಕಣ್ಣುಮುಂದೆ ಜುಬ್ಬಾಧಾರಿಯಾದ, ಮಧ್ಯಮ ಎತ್ತರದ, ದುಂಡುಮುಖದ, ಬೋಳುನೆತ್ತಿಯ, ಕಪ್ಪು-ಬಿಳುಪು ಮಿಶ್ರದಾಡಿಯ, ಕನ್ನಡಕದ ಹಿಂದಿನಿಂದ ಹೊಳೆಯುವ ಸೂಕ್ಷ್ಮಕಣ್ಣುಗಳ ವ್ಯಕ್ತಿಯ ಚಿತ್ರ ಮೂಡಿಬರುತ್ತದೆ.

ನವಕರ್ನಾಟಕ ಪ್ರಕಾಶನವನ್ನು ಕರ್ನಾಟಕದ ಒಂದು ಪ್ರಮುಖ ಪ್ರಕಾಶನ ಸಂಸ್ಥೆಯನ್ನಾಗಿ ಅಭಿವೃದ್ಧಿಪಡಿಸಿರುವ ಖ್ಯಾತಿ ಅವರಿಗೆ ಸಲ್ಲುತ್ತದೆ. ಎಪ್ಪತ್ತೈದರ ಪ್ರಾಯದ ಆರ್. ಎಸ್. ರಾಜಾರಾಮ್ ಪುಸ್ತಕ ಪ್ರಕಾಶನ ಮತ್ತು ಮಾರಾಟ ಕ್ಷೇತ್ರಗಳಲ್ಲಿ ಸುಮಾರು ಐವತ್ತೈದು ವರ್ಷಗಳಷ್ಟು ಕಾಲ ಸಂಚರಿಸಿ ಬಂದಿದ್ದಾರೆ. 'ಪುಸ್ತಕಗಳ ಮೂಲಕ ಮನುಕುಲದ ಸೇವೆ' – ಎಂಬ ಧ್ಯೇಯವಾಕ್ಯದ ತೋರುಬೆಳಕಿನಲ್ಲಿ ಮುನ್ನಡೆಯುತ್ತ ನವಕರ್ನಾಟಕ ಸಂಸ್ಥೆಯನ್ನು ನಾಡಿನ ಪ್ರಮುಖ ಸಂಸ್ಥೆಯಾಗಿ ರೂಪಿಸಿರುವುದು ಅವರ ಪರಿಶ್ರಮಕ್ಕೆ ನಿದರ್ಶನವಾಗಿದೆ.

ಪುಸ್ತಕ ಪ್ರಕಾಶನ ಮತ್ತು ಮಾರಾಟ ಬರಿಯ ಲಾಭ ಗಳಿಕೆಯ ಉದ್ದೇಶದ ವ್ಯವಹಾರವಲ್ಲ, ಅದಕ್ಕೊಂದು ಸಾಮಾಜಿಕ ಆಯಾಮವಿದೆ ಎಂಬುದನ್ನು ನಂಬಿದವರು, ಅದರಂತೆ ಮುನ್ನಡೆದವರು.

ಪುಸ್ತಕಗಳನ್ನು ಅವರು ಬಿಳಿಕಾಗದದ ಮೇಲೆ ಅಕ್ಷರ ಗಳನ್ನು ಅಚ್ಚುಮಾಡಿದ ವಸ್ತುವೆಂದು ಪರಿಗಣಿಸಿದವರಲ್ಲ; ಪುಸ್ತಕಗಳಿಗೆ ಹೃದಯವಿದೆ, ವ್ಯಕ್ತಿತ್ವವಿದೆ ಎಂದು ಗುರುತಿಸಿ ಅವನ್ನು ಜ್ಞಾನಪ್ರಸಾರದ ಪರಿಣಾಮಕಾರಿ ಸಾಧನಗಳಾಗಿ ರೂಪಿಸಬಹುದು ಎಂಬುದನ್ನು ಮನಗಂಡವರು.

ಆರ್. ಎಸ್. ರಾಜಾರಾಮ್ ೧೯೪೧ರ ಜನವರಿ ೩೦ರಂದು, ಮಂಗಳೂರಿನ ಶ್ರೀರಾಮ್ ಮತ್ತು ರಾಜಮ್ಮ ದಂಪತಿಗಳ ಹಿರಿಯ ಮಗನಾಗಿ ಜನಿಸಿದರು. ಅವರು ಬಾಲ್ಯದಲ್ಲಿ ಓದಿದ್ದು ಮಂಗಳೂರು ಮತ್ತು ಪುತ್ತೂರು ಪೇಟೆಗಳಲ್ಲಿ. ಹೈಸ್ಕೂಲು ಕಲಿಕೆ ಮುಗಿಸಿದ್ದು ಮಂಗಳೂರಿನಲ್ಲಿ.

ಒಂದು ವರ್ಷದ ಮಗುವಾಗಿದ್ದಾಗ ತಾಯಿಯನ್ನು ಕಳೆದುಕೊಂಡರು. ಹೆತ್ತವ್ವನ ಅಗಲಿಕೆ ಎಳೆಯ ಹೃದಯದ ಮೇಲೆ ಪರಿಣಾಮ, ಅವರ ಜೊತೆಯಲ್ಲಿ ಉಳಿಯಿತು. ಹೊರಗಿನ ವಿದ್ಯಮಾನಗಳನ್ನು ಗಮನಿಸುವ ಪ್ರಾಯ ಬಂದಾಗ ಬಾಲ್ಯದ ನೋವು ಮರೆಯಾಯಿತು.

ಯುವಕರಾಗಿದ್ದಾಗ ಕಮ್ಯುನಿಸ್ಟ್ ಪಾರ್ಟಿಯ ಚಟುವಟಿಕೆಗಳತ್ತ ಆಕರ್ಷಿತರಾದರು. ಆಗಲೇ ಕಮ್ಯುನಿಸ್ಟ್ ಪಾರ್ಟಿಯ ಕಿರಿಯ ಸದಸ್ಯರೂ ಆದರು.

ತಂದೆಯೊಂದಿಗೆ ವಿಚಾರ ಸಂಘರ್ಷ ಉಂಟಾಯಿತು. ಬಾಲ್ಯದಿಂದಲೇ ಹುಟ್ಟಿದ ಮನೆಯೊಂದಿಗೆ ಅಂಟಿಯೂ ಅಂಟದಂತಿದ್ದ ಸಂಬಂಧ. ಕೊನೆಗೆ ಅವರು ಮನೆಯ ಸಂಪರ್ಕ ಕಳೆದುಕೊಂಡರು.

ಮುಂದೆ ಅವರು ಪುತ್ತೂರಿನ ಭಾರತ ಸೋವಿಯೆತ್ ಸಾಂಸ್ಕೃತಿಕ ಸಂಸ್ಥೆಯಲ್ಲಿ (ಇಸ್ಕಸ್) ಕೆಲಸಕ್ಕೆ ಸೇರಿದರು. ಅಲ್ಲಿಂದ ಬೆಂಗಳೂರು ನವಕರ್ನಾಟಕಕ್ಕೆ, ಮುಂದೆ ಮದರಾಸಿನಲ್ಲಿದ್ದ ಸೋವಿಯೆತ್ ವಾರ್ತಾ ಇಲಾಖೆಗೆ, ಮತ್ತೆ ಬೆಂಗಳೂರಿಗೆ – ಹೀಗೆ ಅವರ ಸಂಚಾರ.

ಮೊದಲಿಗೆ ನವಕರ್ನಾಟಕ ಪುಸ್ತಕದಂಗಡಿಯಲ್ಲಿ ಎಸ್. ರಾಮಚಂದ್ರ ಭಟ್ಟರ ಸಹಾಯಕರಾಗಿ, ಅನಂತರ ಜನಶಕ್ತಿ ಮುದ್ರಣಾಲಯದ ಮ್ಯಾನೇಜರಾಗಿ, ಮುಂದೆ ನವಕರ್ನಾಟಕ ಪ್ರಕಾಶನ ಸಂಸ್ಥೆಯಲ್ಲಿ ವ್ಯವಸ್ಥಾಪಕ ನಿರ್ದೇಶಕರಾದರು.

೧೯೬೦ ಮತ್ತು ಎಪ್ಪತ್ತರ ದಶಕಗಳಲ್ಲಿ ಅವರು ವಿದ್ಯಾರ್ಥಿ ಯುವಜನ ಸಭಾದ ಸಂಚಾಲಕರಾಗಿ ಯುವಕರ ಮತ್ತು ಹಿರಿಯರ ಒಂದು ವೃಂದವನ್ನು ರಚಿಸಿಕೊಂಡು ಸಾಮಾಜಿಕ ಕೆಡುಕುಗಳ ವಿರುದ್ಧ ಹೋರಾಟ ನಡೆಸಿದುದುಂಟು. ಅನ್ಯಾಯಗಳ ವಿರುದ್ಧ ಪ್ರತಿಭಟನೆ, ಜಾಥಾ, ಸಭೆಗಳನ್ನು ನಡೆಸುವ ಮೂಲಕ ಜನಜಾಗೃತಿ ಉಂಟುಮಾಡುವ ಕೆಲಸದಲ್ಲಿ ವಿದ್ಯಾರ್ಥಿ ಯುವಜನ ಸಭಾ ತೊಡಗಿಕೊಂಡಿರುತ್ತಿತ್ತು.

ಮುಂದೆ ಪುಸ್ತಕ ಪ್ರಕಾಶನ ಅವರ ಕಾರ್ಯಕ್ಷೇತ್ರವಾಯಿತು. ಮುದ್ರಣಾಲಯದ ಕೆಲಸವಾಗಲಿ, ಪುಸ್ತಕ ಪ್ರಕಾಶನ ವಾಗಲಿ, ಮಾರಾಟವಾಗಲಿ ಎಲ್ಲವನ್ನು ಅಚ್ಚುಕಟ್ಟಾಗಿ ನಿಭಾಯಿಸುವುದನ್ನೂ ರೂಢಿಸಿಕೊಂಡವರು ರಾಜಾರಾಮ್.

ಪುಸ್ತಕ ಪ್ರಕಾಶನದಲ್ಲಿ ಹಲವು ನೂತನ ಯೋಜನೆಗಳನ್ನು ಹಾಕಿಕೊಂಡು ಅವನ್ನು ಯಶಸ್ವಿಯಾಗಿ ಕಾರ್ಯರೂಪಕ್ಕೆ ತಂದಿದ್ದಾರೆ.

ಹೀಗೆ ಅವರ ತಲೆಯಲ್ಲಿ ರೂಪುತಳೆದು ಸಾಕಾರಗೊಂಡಿರುವ ಹಲವು ಯೋಜನೆಗಳ ಪೈಕಿ 'ಹೊಸತು' ಪತ್ರಿಕೆ ಸಹ ಸೇರುತ್ತದೆ. ಹೊಸ ವಿಚಾರಗಳ ಮೂಲಕ ಓದುಗರನ್ನು ಆಲೋಚನೆಗೆ ತೊಡಗಿಸುವ ಉದ್ದೇಶ ಅವರದು. 'ನೆಮ್ಮದಿಯ ನಾಳೆ ನಮ್ಮದು' ಎಂಬುದು 'ಹೊಸತು' ಧ್ಯೇಯ ವಾಕ್ಯ.

ರಾಜಾರಾಮ್ ತಮ್ಮ ಶಿಸ್ತು, ಕಾರ್ಯಶ್ರದ್ಧೆಯ ಮೂಲಕ ನಿರ್ಮಿಸಿದ ನವಕರ್ನಾಟಕ ಸುಮಾರು ೪೭೦೦ರಷ್ಟು ಪುಸ್ತಕಗಳನ್ನು ಪ್ರಕಟಿಸಿದೆ, ಏಳು ಶಾಖೆಗಳ ಮೂಲಕ ಪುಸ್ತಕ ಮಾರಾಟದಲ್ಲೂ ಹೊಸ ಎಲ್ಲೆಗಳನ್ನು ದಾಟಿದೆ. ನೂರಾರು ಲೇಖಕರ ಹಾಗೂ ಸಾವಿರಾರು ಓದುಗರ ಬಳಗವನ್ನು ಹೊಂದಿದೆ. ಇಬ್ಬರೊಂದಿಗೆ ಪ್ರಾರಂಭವಾದ ಸಂಸ್ಥೆಯಲ್ಲಿ ಈಗ ಅರವತ್ತರಷ್ಟು ಮಂದಿ ಕಾರ್ಯನಿರತರಾಗಿದ್ದಾರೆ.

* * *

ಆರ್. ಎಸ್. ರಾಜಾರಾಮ್ ಇವಿಷ್ಟು ವರ್ಷಗಳಲ್ಲಿ ನಡೆಸಿರುವ ಚಟುವಟಿಕೆಗಳನ್ನು ದಾಖಲಿಸುವ ಪ್ರಯತ್ನವಾಗಿ, ಇದೀಗ ಪರಂಜ್ಯೋತಿ ಅವರು ರಚಿಸಿರುವ, ರಾಜಾರಾಮ್‌ರ ಬದುಕು ಮತ್ತು ಸಾಧನೆಯ ಸ್ಥೂಲ ಪರಿಚಯ ಮಾಡಿ ಕೊಡುವ 'ಸೃಷ್ಟಿಯ ಸೆಲೆ' ಪ್ರಕಟವಾಗಿದೆ. ಎಂ. ಎಸ್. ಕೃಷ್ಣನ್ ಸ್ಮರಣ ಸಂಸ್ಥೆ ಈ ಕೃತಿಯನ್ನು ಪ್ರಕಟಿಸಿದೆ. ಈ ಕೃತಿಯಲ್ಲಿ ಅವರ ಮಕ್ಕಳು, ಸೊಸೆ ಮತ್ತು ಮೊಮ್ಮಗಳ ಲೇಖನಗಳಿವೆ.




ರಾಜಾರಾಮ್ ತಮ್ಮ ಪ್ರಾಯದ ಮತ್ತು ದೇಹಾರೋಗ್ಯದ ಕಾರಣ ನವಕರ್ನಾಟಕದ ವ್ಯವಸ್ಥಾಪಕ ನಿರ್ದೇಶಕರ ಹುದ್ದೆಯಿಂದ ಬಿಡುಗಡೆ ಕೋರಿದಾಗ, ಅವರ ಸನ್ಮಾನ ಹಾಗೂ ಪುಸ್ತಕ ಲೋಕಾರ್ಪಣೆ ಸಮಾರಂಭ ೧೯.೨.೨೦೧೭ ರಂದು ನಗರದ ಗಾಂಧಿ ಭವನದಲ್ಲಿ ಜರುಗಿತು.

ನವಕರ್ನಾಟಕ ಬಳಗದ ಲೇಖಕರು, ಓದುಗರು, ಹಿತೈಷಿಗಳು, ಸಿಬ್ಬಂದಿಗಳು, ರಾಜಾರಾಮರ ಬಂಧುಗಳು – ಹೀಗೆ ಸಭಾಂಗಣ ಕಿಕ್ಕಿರಿದಿತ್ತು. ಎ. ಆರ್. ಉಡುಪರ

ಸ್ವಾಗತ ಭಾಷಣದೊಂದಿಗೆ ಸಭೆ ಪ್ರಾರಂಭವಾಯಿತು. ಎಂ. ಎಸ್. ಕೃಷ್ಣನ್ ಸ್ಮರಣ ಸಂಸ್ಥೆಯ ಅಧ್ಯಕ್ಷರಾದ ನಾಡೋಜ ಕೋ. ಚೆನ್ನಬಸಪ್ಪ ಅಧ್ಯಕ್ಷತೆ ವಹಿಸಿದ್ದರು. ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾದ ಪ್ರೊ॥ ಎಸ್. ಜಿ. ಸಿದ್ಧರಾಮಯ್ಯ ಕೃತಿ ಲೋಕಾರ್ಪಣೆ ಮಾಡಿದರು. ಅವರು ತಮ್ಮ ಭಾಷಣದಲ್ಲಿ ರಾಜಾರಾಮ್ ನವಕರ್ನಾಟಕ ಪ್ರಕಾಶನವನ್ನು ನಮ್ಮ ನಾಡಿನ ಸಾಕ್ಷಿಪ್ರಜ್ಞೆಯಾಗಿ ರೂಪಿಸಿದ್ದಾರೆ, ಸಮಾಜದ ಹಿತಕ್ಕೆ ಪೂರಕವಾಗುವ ಪುಸ್ತಕ ಸಂಸ್ಕೃತಿಯನ್ನು ಬೆಳೆಸಿದ್ದಾರೆ ಎಂದರು.




ಅನಂತರ, ರಾಜಾರಾಮ್ ದಂಪತಿಯನ್ನು ಅಭಿವಂದಿಸಿ ಮಾತನಾಡಿದ ಡಾ॥ ಸಿ. ಆರ್. ಚಂದ್ರಶೇಖರ್ ರಾಜಾರಾಮ್‌ರೊಂದಿಗೆ ಸಂಪರ್ಕ ಏರ್ಪಟ್ಟ ದಿನಗಳನ್ನು ನೆನಪು ಮಾಡಿಕೊಂಡರು. ವೈದ್ಯಸಾಹಿತ್ಯಕ್ಕೆ ನವಕರ್ನಾಟಕ ನೀಡಿರುವ ಕೊಡುಗೆಯನ್ನು ಶ್ಲಾಘಿಸಿದರು.

ಲೇಖಕ ಬೊಳುವಾರು ಮಹಮ್ಮದ್ ಕುಂಞ, ವಿಶ್ವಕಥಾಕೋಶದ ಪ್ರಕಟಣೆಯ ಸಂದರ್ಭದಲ್ಲಿ ರಾಜಾರಾಮರ ಸಂಪರ್ಕಕ್ಕೆ ಬಂದ ದಿನಗಳನ್ನು, ಹಾಗೆಯೇ ತಮ್ಮಿಂದ ಪುನ್ನಪ್ರ ವಯಲಾರ್ ಹೋರಾಟದ ಕುರಿತು ಪುಸ್ತಕ ಬರೆಸಿದ್ದನ್ನು ನೆನಪು ಮಾಡಿಕೊಂಡರು.

ಡಾ॥ ಆರ್. ಪೂರ್ಣಿಮಾ ಸುಮಾರು ನಲವತ್ತು ವರ್ಷಗಳ ಹಿಂದೆ ತಮ್ಮಿಂದ 'ಸ್ನೇಹ–ಸೇತು' ಕೃತಿ ಬರೆಸಿ, ಕಲಾವಿದ ರೋರಿಕ್ ಮತ್ತು ದೇವಿಕಾರಾಣಿ ರೋರಿಕ್‌ರ ಸಮ್ಮುಖದಲ್ಲಿ ಲೋಕಾರ್ಪಣೆ ಮಾಡಿದ ದಿನಗಳನ್ನು ನೆನಪಿಸಿಕೊಂಡರು.

ಡಾ॥ ಜಿ. ರಾಮಕೃಷ್ಣ, ವಿದ್ಯಾರ್ಥಿ ಯುವಜನ ಸಭಾದ ಚಟುವಟಿಕೆಯ ದಿನಗಳನ್ನು ನೆನಪು ಮಾಡಿಕೊಂಡು, ಅದರ ಸಂಚಾಲಕರಾಗಿ ರಾಜಾರಾಮ್ ಯುವಕರನ್ನು ಹೇಗೆ ಆಕರ್ಷಿಸಿ ಅವರನ್ನು ಕಾರ್ಯಕ್ಕೆ ಹಚ್ಚುತ್ತಿದ್ದರು ಎಂಬುದನ್ನು ನೆನಪು ಮಾಡಿಕೊಂಡರು.

ಡಾ॥ ಎಚ್. ಎಸ್. ಗೋಪಾಲರಾವ್, 'ಕರ್ನಾಟಕ ಏಕೀಕರಣ ಇತಿಹಾಸ' ರಚಿಸಲು ರಾಜಾರಾಮ್ ತಮಗೆ ಯಾವ ರೀತಿಯಲ್ಲಿ ನೆರವಾದರು ಎಂಬುದನ್ನು ನೆನಪು ಮಾಡಿಕೊಂಡರು.

ಲೇಖಕ ಪರಂಜ್ಯೋತಿ ರಾಜಾರಾಮ್ ಮತ್ತು ಗೀತಾ ರಾಜಾರಾಮ್ ಅವರಿಗೆ ಅಭಿವಂದಿಸಿ, ಕೃತಿ ರಚಿಸಲು ಅವಕಾಶ ದೊರಕಿದ್ದಕ್ಕೆ ಸಂತೋಷ ವ್ಯಕ್ತಪಡಿಸಿದರು.

ಡಾ॥ ಸಿದ್ದನಗೌಡ ಪಾಟೀಲರು, ತಮ್ಮನ್ನು ನವಕರ್ನಾಟಕ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಾಗಿ ಸೂಚಿಸುವ ಮೂಲಕ ರಾಜಾರಾಮ್ ತಮ್ಮನ್ನು ಅಲ್ಲಿಗೆ ಕರೆತಂದುದನ್ನು ನೆನಪಿಸಿದರು.

ನವಕರ್ನಾಟಕ ಸಾಹಿತ್ಯ ಸಂಪದ ಮಾಲೆಯ ಸಂಪಾದಕರಾದ ಡಾ॥ ಪ್ರಧಾನ್ ಗುರುದತ್ತ ರಾಜಾರಾಮ್ ಅವರ ಕಾಯಕದ ಅಚ್ಚುಕಟ್ಟುತನವನ್ನು ನೆನಪು ಮಾಡಿಕೊಂಡರು.

ಟ್ರಸ್ಟ್‌ನ ಅಧ್ಯಕ್ಷರಾಗಿರುವ ಕೋ.ಚೆ. ಅವರು, ಅಂದು ಪ್ರಜಾವಾಣಿಯಲ್ಲಿ, 'ಕನ್ನಡ ಪುಸ್ತಕೋದ್ಯಮದ ಕೊಲಂಬಸ್' ಎಂಬ ಶೀರ್ಷಿಕೆಯಲ್ಲಿ, ಟಿ. ಆರ್. ಅನಂತರಾಮು ಬರೆದಿದ್ದ ಲೇಖನವನ್ನು ಪ್ರಸ್ತಾಪಿಸಿ, ಭಾರತವನ್ನು ಅರಸಿ ಹೊರಟ ಕೊಲಂಬಸ್ ದಾರಿತಪ್ಪಿ ಅಮೆರಿಕವನ್ನು ಶೋಧಿಸಿದ. ಅದೇ ರೀತಿ ಬೇರೆಲ್ಲೋ ಇರಬೇಕಾಗಿದ್ದ ರಾಜಾರಾಮ್ ದಾರಿತಪ್ಪಿ ಪ್ರಕಾಶನ ಕ್ಷೇತ್ರವನ್ನು ಪ್ರವೇಶಿಸಿ, ಮೆಚ್ಚುವಂಥ ಸಾಧನೆ ಮಾಡಿದ್ದಾರೆ ಎಂದರು.

ಟ್ರಸ್ಟ್‌ನ ಜಿ. ಬಾಬು ಅವರು ವಂದನಾರ್ಪಣೆ ಮಾಡಿದರು. ನವಕರ್ನಾಟಕದ ಸಿಬ್ಬಂದಿ ವರ್ಗ, ರಾಜಾರಾಮರ ಬಂಧು–ಬಳಗ, ಮಿತ್ರರಲ್ಲದೆ ಹಲವು ಲೇಖಕರು, ಹಿತೈಷಿಗಳು ನೆನಪಿನ ಕಾಣಿಕೆ ನೀಡುವ ಮೂಲಕ ಅವರನ್ನು ಅಭಿವಂದಿಸಿದರು.

**– ಕೆ. ಪಿ. ಸ್ವಾಮಿ**

## ಆರ್. ಎಸ್. ರಾಜಾರಾಮ್ ಅವರಿಗೆ ಆತ್ಮೀಯರ ಪತ್ರಗಳ ಆಯ್ದ ಭಾಗಗಳು

ರಾಜಾರಾಮ್ ಎಂದರೆ ನವಕರ್ನಾಟಕ ಮಾತ್ರವಲ್ಲ ಅವರು ನನ್ನಂಥವರ ಯೌವನ, ರಾಜಾರಾಮ್ ಎಂದರೆ ನನ್ನಂಥವರ ದಶಕಗಳ ಅರಿವು, ರಾಜಾರಾಮ್ ಎಂದರೆ ನನ್ನಂಥವರ ನೋಟ ಕೂಡ. ರಾಜಾರಾಮ್ ಎಂದಾಕ್ಷಣ ನನಗೆ ಅದು ನವಕರ್ನಾಟಕ ಮಾತ್ರವಲ್ಲ, ಸೋವಿಯೆತ್ ದೇಶ, ಬ್ರೆಕ್ಟ್, ಗಾರ್ಕಿ, ಟಾಲ್‌ಸ್ಟಾಯ್, ಚೆ ಗೆವಾರ... ಜಗತ್ತಿನ ಅಷ್ಟೂ ದೇಶಗಳ ಕಥೆಗಾರರು, ರಾಹುಲ ಸಾಂಕೃತ್ಯಾಯನ, ಜಾಗತೀಕರಣ, ಡಂಕೆಲ್ ಪ್ರಸ್ತಾವನೆ, ಜಿ. ರಾಮಕೃಷ್ಣ... ಹೀಗೆ ಎಲ್ಲವೂ. ಎಲ್ಲರೂ.

**– ಜಿ. ಎನ್. ಮೋಹನ್**

ನಿಮ್ಮ ನಿವೃತ್ತಿಯ ಸುದ್ದಿ ಹೊತ್ತ ಕಾಗದ ಬಂತು. ನಿಮ್ಮೊಂದಿಗೆ ವೈಯಕ್ತಿಕವಾಗಿ ಹತ್ತಿರದ ಸಂಬಂಧ ಇಲ್ಲದಿದ್ದರೂ ನವಕರ್ನಾಟಕ ಪ್ರಕಾಶನ ಮತ್ತು ಹೊಸತು ಪತ್ರಿಕೆಗಳ ಜೊತೆಗೆ ನಿಕಟ ಸಂಪರ್ಕವಿರುವ ನನಗೆ, ನೀವು ಮಾಡಿರುವ ಕೆಲಸಗಳ ಬಗೆಗೆ ವಿಶೇಷವಾದ ಆದರವಿದೆ. ಪುಸ್ತಕ ಮತ್ತು ಪತ್ರಿಕೆಯ ವ್ಯವಹಾರಗಳನ್ನು ಅದೆಷ್ಟು ನಿಷ್ಠೆಯಿಂದ ಮತ್ತು ಪ್ರಾಮಾಣಿಕತೆಯಿಂದ ನಡೆಸಬೇಕು ಎಂಬುದಕ್ಕೆ ನೀವು ಹಾಕಿರುವ ಮಾರ್ಗವು ನಮ್ಮೆಲ್ಲರಿಗೂ ಅನುಸರಣೀಯವಾದದ್ದು.

**– ಅಕ್ಷರ ಕೆ. ವಿ.**

My very best wishes on this well-earned respite from administrative work. I am sure intellectual engagement with social issues will continue.

Look forward to meeting you after my return from US, where I am now. My best wishes to you and colleagues.

***- Ullas Karanth***

Namaste Rajaramji, thanks for update. All of us fondly remember your warmth and human touch in all your interactions. Please take care.

***- Madan Gopal***

ರಾಜಾರಾಮ್ ಅವರೇ, ತಾವು ವ್ಯವಸ್ಥಾಪಕ ನಿರ್ದೇಶಕ ಸ್ಥಾನದಿಂದ ನಿವೃತ್ತರಾಗುತ್ತಿದ್ದು ಮುಂದೆ ಕಾರ್ಯಭಾರ ವಹಿಸಿಕೊಂಡವರಿಗೆ ಸಹಕರಿಸುವಂತೆ ಬರೆದಿದ್ದೀರಿ. ನಿಮ್ಮ ಐದು ದಶಕದ ಕಾಲಾವಧಿಯಲ್ಲಿ ನವಕರ್ನಾಟಕ ಸಂಸ್ಥೆಯನ್ನು ಉನ್ನತ ಮಟ್ಟಕ್ಕೆ ಏರಿಸಿದ್ದೀರಿ. ಇದರಲ್ಲಿ ತಮ್ಮ ಪರಿಶ್ರಮ ಶ್ಲಾಘನೀಯ. ತಾವು ನಿವೃತ್ತರಾದರೂ ನವಕರ್ನಾಟಕ ಅಂದಾಗ ರಾಜಾರಾಮ್ ಅವರ ಹೆಸರು ಜತೆಯಲ್ಲಿಯೇ ಬರುವಂತೆ ತಾವು ದುಡಿದು ಸಂಸ್ಥೆಯನ್ನು ಬೆಳೆಸಿದ್ದೀರಿ.

**– ಈ. ಬಸವರಾಜು**

ನಿಮ್ಮ ಪತ್ರ ಓದಿದೆ. ನಿಮ್ಮೊಂದಿಗೆ ನವಕರ್ನಾಟಕಕ್ಕೆ ಬಂದಾಗಲೆಲ್ಲ ಕಳೆದ ದಿನಗಳು ನೆನಪಾದುವು. ಕನ್ನಡದ ಓದುಗರಿಗೆ ನಿಮ್ಮ ಕೊಡುಗೆ ಯಾವ ಕಾಲಕ್ಕೂ

ಹಳತಾಗದು. ನಿಮ್ಮ ಮನಸ್ಸಿಗೆ ಇದು ಸದಾ ಮುದ ನೀಡಲಿ. ಆರೋಗ್ಯ ಸ್ಥಿತಿಯನ್ನು ಸುಧಾರಿಸಲು ಸಾಧ್ಯವಾಗಲಿ.

**– ಅಡ್ಯನಡ್ಕ ಕೃಷ್ಣ ಭಟ್**

ನಿಮ್ಮ ನಿವೃತ್ತಿಯ ವಿಷಯ ತಿಳಿದು ಒಮ್ಮೆಗೆ ಅವಕ್ಕಾದರೂ ನಿಮ್ಮ ಆರೋಗ್ಯದ ಸಮಸ್ಯೆ ನೆನೆದು ಸಮಾಧಾನಪಟ್ಟುಕೊಂಡೆ. ರಾಜ್ಯದಲ್ಲಿ ನವಕರ್ನಾಟಕ ಸಂಸ್ಥೆಯನ್ನು ಮಾದರಿ ಎಂಬಂತೆ ಕಟ್ಟಿ ಬೆಳೆಸಿದವರು ನೀವು. ಇದು ನಮ್ಮ ಮಾತ್ರವಲ್ಲ ಕರ್ನಾಟಕದ ಭಾಗ್ಯ ಕೂಡ. ನಾಡಿನೆಲ್ಲೆಡೆ ಓದುವ ಅಭಿರುಚಿಯನ್ನು ಬೆಳೆಸಬೇಕೆಂಬ ನಿಮ್ಮ ತುಡಿತ ಮನನೀಯ.

ಕನ್ನಡದಲ್ಲಿ ಲಭ್ಯವಿಲ್ಲದ ಮತ್ತು ವ್ಯಾವಹಾರಿಕವಾಗಿ ಅಷ್ಟೊಂದು ಲಾಭವಿಲ್ಲದಿದ್ದರೂ ಅನೇಕ ಮೌಲಿಕ ಕೃತಿಗಳನ್ನು ಪ್ರಕಟಿಸಿ ಜ್ಞಾನಾಸಕ್ತರಿಗೆ ನೀಡಿದ್ದು ಸ್ಮರಣೀಯ. ನಿಮ್ಮ ನಡೆ ನುಡಿಗಳಿಂದ, ಕಾರ್ಯವೈಖರಿಯಿಂದ ನಾವು ಕಲಿತದ್ದು ತುಂಬ ಇದೆ.

**– ಕಲ್ಲೂರು ನಾಗೇಶ**

ನಿಮ್ಮ ಆಡಳಿತಾವಧಿಯಲ್ಲಿ ಸ್ವತಂತ್ರವಾಗಿಯೇ ಪುಸ್ತಕೋದ್ಯಮಕ್ಕಿಳಿದ ನಾನು, ಅದನ್ನು ಮೂವತ್ತಾರು ವರ್ಷಗಳ ಬಳಿಕ ಮುಗಿಸುವಾಗ ಮಾತ್ರ 'ನಿಮ್ಮಲ್ಲಿ' ಲೀನವಾದ ಸಂತೋಷ ನನ್ನದು. ಅದನ್ನು ಮತ್ತೊಮ್ಮೆ ಸ್ಮರಿಸಿಕೊಂಡು ನಿಮ್ಮ ವಿಶ್ರಾಂತ ಜೀವನ ಸುಖಕರವಾಗಲಿ ಎಂದು ಹಾರೈಸುತ್ತೇನೆ.

**– ಅಶೋಕವರ್ಧನ**

ಅನಾರೋಗ್ಯದ ನಿಮಿತ್ತ ತಾವು ನಿವೃತ್ತಿ ಪಡೆಯುತ್ತಿರುವ ವಿಷಯ ತಿಳಿಯಿತು. ನವಕರ್ನಾಟಕ ಪ್ರಕಾಶನದ ಔನ್ನತ್ಯಕ್ಕೆ ತಮ್ಮ ಕೊಡುಗೆ ಅಸದೃಶ.

ತಾವು ಹಾಕಿಕೊಟ್ಟಿರುವ ಭದ್ರ ಬುನಾದಿಯ ಮೇಲೆ ಸಂಸ್ಥೆಯು ಚಿರಸ್ಥಾಯಿಯಾಗಿ ಅನುರಣಿಸುವುದರಲ್ಲಿ ಯಾವುದೇ ಸಂಶಯವಿಲ್ಲ.

ತಮ್ಮ ನಿವೃತ್ತ ಜೀವನ ಸುಖ, ಶಾಂತಿ, ನೆಮ್ಮದಿಗಳಿಂದ ಕೂಡಿರಲಿ ಎಂದು 'ಸಮಾಧಾನ ಆಪ್ತಸಲಹಾ ಕೇಂದ್ರ'ದ ಪರವಾಗಿ ಹಾರೈಸುತ್ತಿದ್ದೇನೆ.

**– ಎ. ಶ್ರೀನಿವಾಸಮೂರ್ತಿ**

ಹಿರಿಯರಾದ ರಾಜಾರಾಮ್ ಅವರಿಗೆ ವಂದನೆಗಳು. ನವಕರ್ನಾಟಕದ ಹುದ್ದೆಯಿಂದ ನೀವು ನಿವೃತ್ತರಾಗಿರಬಹುದು, ಆದರೆ ನಿಮ್ಮ ಮನಸ್ಸೆಲ್ಲಾ ಅಲ್ಲೇ ಇರುತ್ತದೆ ಎಂದು ಬಲ್ಲೆ. ನಿಮ್ಮ ವಿದ್ಯಾರ್ಥಿ ದೆಸೆಯಿಂದ ಭಾರತ ಕಮ್ಯುನಿಸ್ಟ್ ಪಕ್ಷಕ್ಕೆ, ನವಕರ್ನಾಟಕ ಸಂಸ್ಥೆಗೆ, ಕನ್ನಡ ನಾಡು–ನುಡಿಗೆ, ರಾಜ್ಯದ ಶೋಷಿತ–ದಮನಿತರ ಹಕ್ಕೊತ್ತಾಯಗಳಿಗೆ ನೀವು ನೀಡಿರುವ ಕೊಡುಗೆ ಅತ್ಯಪೂರ್ವವಾದುದು, ಚಿರಸ್ಥಾಯಿಯಾದುದು. ನವಕರ್ನಾಟಕವನ್ನು ಕಟ್ಟಿ ಬೆಳೆಸುವಲ್ಲಿ ನೀವು ಪಟ್ಟಷ್ಟೇ ಶ್ರಮವನ್ನು ಬೇರೊಬ್ಬರಿಂದ ನಿರೀಕ್ಷಿಸುವುದು ತುಸು ಕಷ್ಟಕರವಾದರೂ, ಆ ಸಂಸ್ಥೆಯನ್ನು ಉಳಿಸಿ ಬೆಳೆಸುವುದಕ್ಕೆ ನಾವೆಲ್ಲರೂ ನಮ್ಮಿಂದಾದಷ್ಟು ಶ್ರಮಿಸುತ್ತೇವೆ ಎನ್ನುವ ಭರವಸೆಯನ್ನು ನೀಡುತ್ತೇನೆ.

**ಡಾ॥ ಶ್ರೀನಿವಾಸ ಕಕ್ಕಿಲ್ಲಾಯ**



ನಿಮ್ಮ ನಿವೃತ್ತಿ ಜೀವನವು ಸುಖಕರವಾಗಿರಲೆಂದು ಹಾರೈಸುವೆ. ಕನ್ನಡ ಪ್ರಕಾಶನಕ್ಕೆ ನೀವು ಕೊಟ್ಟ ಕಾಣಿಕೆಯು ಅಮೂಲ್ಯವಾದುದು. ಅಸಮಾನವಾದುದು. ಅನುವಾದಗಳನ್ನು ನಿಮ್ಮಷ್ಟು ಕಾಳಜಿಯಿಂದ ಪ್ರಕಟಿಸುವವರು ಅಪರೂಪ. ಕನ್ನಡದ ಭಾವಜಗತ್ತು ಹಾಗೂ ಚಿಂತನೆಯ ಮೇಲೆ ನಿಮ್ಮ ಪ್ರಕಟಣೆಗಳ ಪರಿಣಾಮಗಳೇನು, ಅದರ ಮಹತ್ವವೇನು ಎಂಬುದನ್ನು ನಾವಿನ್ನೂ ಪೂರ್ತಿಯಾಗಿ ಗ್ರಹಿಸಿಲ್ಲ.

**– ವಿವೇಕ ಶಾನಭಾಗ**

ನವಕರ್ನಾಟಕ ಪ್ರಕಾಶನ ನಮ್ಮ ರಾಜ್ಯದಲ್ಲೇ ಪುರೋಗಾಮಿ ಪ್ರಕಾಶನವೆಂದು ಹೆಸರನ್ನು ಗಳಿಸಿದೆ. ಈ ಗರಿಮೆಯ ಹಿಂದೆ ಪ್ರಿಯ ರಾಜಾರಾಮ್ ಅವರ ಶ್ರಮ ಮತ್ತು ಕರ್ತೃತ್ವ ಶಕ್ತಿಯ ಛಾಪು ಇದೆ. ಅನೇಕ ಉದಯೋನ್ಮುಖ ಬರಹಗಾರರನ್ನು ಗುರುತಿಸಿ ಉತ್ತೇಜನವನ್ನು ನೀಡಿದ್ದಾರೆ. ಅವರ ನಿವೃತ್ತಿ ಜೀವನ ಸುಖಕರವಾಗಿರಲಿ.

**– ಎಂ. ಎಸ್. ಮುರಳಿ ಕೃಷ್ಣ**

ಮಾನ್ಯರಿಗೆ ವಂದನೆಗಳು. ತಮ್ಮ ಆರೋಗ್ಯಕ್ಕಾಗಿ ಪ್ರಾರ್ಥಿಸುತ್ತೇನೆ. ನೀವು ನಮ್ಮ ನಡುವಣ ದೊಡ್ಡ ಶಕ್ತಿ. ಕರ್ನಾಟಕದ ಜನಪರ ಚಳುವಳಿಗಳಿಗೆ ಬೌದ್ಧಿಕ ಮಾರ್ಗದರ್ಶನ ಮಾಡಿದ ಮಹನೀಯರು ತಾವು. ನಾವೆಲ್ಲ ನವಕರ್ನಾಟಕ ಪ್ರಕಾಶನ ದೊಂದಿಗೇ ಬೆಳೆದವರು ಮತ್ತು ಇಂದಿಗೂ ಭಾವುಕವಾಗಿ ಅದರೊಂದಿಗೆ ಇರುವವರು. ಸರ್ದೇಸಾಯಿಯವರ ಪುಸ್ತಕಗಳನ್ನು ಇಂಗ್ಲಿಷ್‌ನಲ್ಲಿ ಓದುವ ಯೋಗ್ಯತೆ ನಮಗಿರಲಿಲ್ಲ. ಆ ಕಾಲಕ್ಕೆ ನೀವದನ್ನು ಕನ್ನಡದಲ್ಲಿ ಕಡಿಮೆ ಬೆಲೆಯಲ್ಲಿ ನೀಡಿದಿರಿ. ಅವೆಲ್ಲ ನಾವು ನಮ್ಮನ್ನು ಜನಪರ ಹೋರಾಟಗಳೊಂದಿಗೆ ಗುರುತಿಸಿಕೊಳ್ಳುವಂತೆ ಮಾಡಿತು. ಕಾಲ ಪುರುಷಂಗೆ ಗುಣಂ ಅಣಂ ಇಲ್ಲ. ತಮಗೆ ವಿಶ್ರಾಂತಿಯ ಅಗತ್ಯವಿದೆ. ಹಾಗೆ ಇರುತ್ತಾ ನಮಗೆಲ್ಲ ಮಾರ್ಗದರ್ಶನ ಮಾಡುತ್ತಿರಿ. ಬೆಂಗಳೂರಿಗೆ ಬಂದಾಗ, ತಮಗೆ ಹೆಚ್ಚು ತೊಂದರೆಯಾಗದಂತೆ ಬಂದು ಭೇಟಿ ಮಾಡುವೆ. ವಂದನೆಗಳೊಂದಿಗೆ,

**– ಪುರುಷೋತ್ತಮ ಬಿಳಿಮಲೆ**

ಸಂತೋಷದ ಸುದ್ದಿ ಅಲ್ಲ. ನೆನಪುಗಳು ಹಿಂದೆ ಸರಿದು ಮೆಲುಕುತ್ತವೆ. ಆದರೆ ತಾವು ಸಮರ್ಥರನ್ನು ಆಯ್ಕೆ ಮಾಡಿ ಸಂಸ್ಥೆಯ ಮುನ್ನಡೆಗೆ ಚ್ಯುತಿ ಬಾರದಂತೆ ಮಾಡಿರುವ ವ್ಯವಸ್ಥೆ ಸಮಾಧಾನ ತಂದಿದೆ. ಸದ್ಯದಲ್ಲೇ ಬಂದು ಭೇಟಿ ಮಾಡುತ್ತೇನೆ. ನಿಮಗೆ ಶುಭವಾಗಲಿ.

**– ಡಾ॥ ವಿಜಯಾ**

ಶ್ರೀ. ರಾಜಾರಾಮರವರದು ಸಾರ್ಥಕ ಬದುಕು. ಜ್ಞಾನ ಭಂಡಾರವನ್ನು ಕನ್ನಡ ನಾಡಿನ ಆದರ್ಶ ಪುರುಷರಿಂದ ಹಿಡಿದು ದೀನ ದರಿದ್ರರಿಗೂ ಹರಡಿದ್ದಾರೆ. ಮನೆ ಮನೆಯ ಹೊಸಲಿಗೆ ತಲುಪಿಸಿದ್ದಾರೆ. ಇದೊಂದು ಮಹತ್ವದ ಕಾರ್ಯ. ರಾಜಾರಾಮ್‌ರವರು ಅಸೂಯಾರಹಿತರು, ಬೇಡುವವರಲ್ಲ, ಕಾಡುವ ಪ್ರಕೃತಿಯುಳ್ಳವರಲ್ಲ, ಉತ್ತಮ ದರ್ಜೆಯ ಸಂಘಟಕರು ಹಾಗೂ ಸೂಕ್ಷ್ಮ ಬುದ್ಧಿಯವರು. ಒಂದು ತರಹದಲ್ಲಿ ಸ್ಥಿತಪ್ರಜ್ಞರು ಮತ್ತು ಕರ್ಮಯೋಗಿ. ಅವರ ಜನಸೇವೆ (ಚಿರಕಾಲ) ನಿರಂತರವಾದುದು.

**– ಡಾ॥ ವಿ. ಪರಮೇಶ್ವರ**

ತಾವು ನವಕರ್ನಾಟಕ ಪ್ರಕಾಶನ ಕಾರ್ಯದಿಂದ ನಿವೃತ್ತರಾದ ಸುದ್ದಿ ಇದೀಗ ನನ್ನ ಸೋದರಿ ಶ್ರೀಮತಿ ಶಾಂತಾ ನಾಡಗೀರ (ಹುಬ್ಬಳ್ಳಿ) ತಿಳಿಸಿದ್ದಾಳೆ.

ಪಠ್ಯೇತರ ವೈಜ್ಞಾನಿಕ ವಿಷಯಗಳ ಪುಸ್ತಕಗಳನ್ನು ಜನಸಾಮಾನ್ಯರಿಗೆ ದೊರೆಯುವಂತೆ ಮಾಡುವ ಕಾರ್ಯ ಕಷ್ಟಸಾಧ್ಯವಾಗಿದ್ದರೂ ಆ ದಿಸೆಯಲ್ಲಿ ತಾವು ಯಶಸ್ವಿಯಾಗಿದ್ದೀರಿ ಎಂಬುದು ಸಂತೋಷದ ವಿಷಯ.

**– ಡಾ॥ ಆನಂದ ದೇಶಪಾಂಡೆ**

ಸರ್, ಒಂದೇ ಒಂದು ಮಾತು. ನೀವು ತುಂಬಾ ಅಪರೂಪದವರು. ನೀವು ನವಕರ್ನಾಟಕ ಸಂಸ್ಥೆಯನ್ನು ಕಟ್ಟಿ ಬೆಳೆಸಿದ ರೀತಿ ಮಾತ್ರ ಬೆರಗು ಹುಟ್ಟಿಸುವಂಥದ್ದು.

ಅದೆಷ್ಟು ವಿಷಯಗಳು... ಅದೆಷ್ಟು ಪುಸ್ತಕಗಳಿಗೆ ನೀವು ರೂಪ ಕೊಟ್ಟಿದ್ದೀರಿ.

**– ರವಿ ಅಜ್ಜೀಪುರ**

# ನಗದು ರದ್ದತಿ : ಜನರ ಸ್ಥೈರಣೆ ; ಕೆಲವು ಪ್ರಶ್ನೆಗಳು

ನಗದು ರದ್ದತಿ ಯೋಜನೆಯೊಂದೇ ಅಲ್ಲದೆ, ನಮ್ಮ ಜನ ಇಂತಹ ಅನೇಕ ಪ್ರಸಂಗಗಳ ಬಗೆಗೆ ಮೌನ ವಹಿಸುತ್ತಾರೆ ಅಥವಾ ಯಥಾಸ್ಥಿತಿವಾದಕ್ಕೆ ಜೋತು ಬೀಳುತ್ತಾರೆ. ಧರ್ಮ, ಜಾತಿ, ಪಂಥ, ಭಾಷೆ, ಪ್ರಾಂತ್ಯ, ಗಡಿ ಮುಂತಾದ ವಿಷಯಗಳ ಬಗೆಗೆ ಅವರು ಭಾವನಾತ್ಮಕವಾಗಿ ಪ್ರತಿಕ್ರಿಯಿಸುವಷ್ಟು (ಹಲವು ಬಾರಿ ಅತಿರೇಕವಾಗಿ) ದಾರಿದ್ರ್ಯ, ಅನಕ್ಷರತೆ, ಅಸಮಾನತೆ, ಕೋಮುವಾದ, ಮೂಲಭೂತವಾದ ಮುಂತಾದ ಜ್ವಲಂತ ಸಮಸ್ಯೆಗಳು ಮತ್ತು ಇತರ ಸಾಮಾಜಿಕ ಪಿಡುಗುಗಳಿಗೆ ಸ್ಪಂದಿಸುವುದಿಲ್ಲ.

**ಮ. ಶ್ರೀ. ಮುರಳಿ ಕೃಷ್ಣ**

**ದೃಶ್ಯ 1 :** ಟ್ರಾಫಿಕ್ ಜಂಕ್ಷನ್‌ನಲ್ಲಿ ವಾಹನ ದಟ್ಟಣೆ ಜಾಸ್ತಿ ಇದೆ. ಕೆಂಪು ಚಿಹ್ನೆ ಬಿದ್ದು ಎರಡೂವರೆ ನಿಮಿಷಗಳಾಗಿವೆ. ಹಸಿರು ಚಿಹ್ನೆ ಬಿದ್ದೊಡನೆ ಒಂದೇ ಸಮನೆ ಕಿವಿಗಡಚಿಕ್ಕುವ ಹಾರನ್‌ಗಳ ಶಬ್ದ. ಹಾಗೆ ಹಾರನ್ ಒತ್ತುವವರಿಗೆ ತಮ್ಮ ಮುಂದೆ ಅನೇಕ ವಾಹನಗಳು ನಿಂತಿವೆ ಎಂಬುದು ತಿಳಿದಿರುತ್ತದೆ. ಆದರೂ ಅವರು ತಮ್ಮ ಬೆರಳುಗಳನ್ನು ಈ ಕ್ರಿಯೆಗೆ ಹಚ್ಚಲು ಹಾತೊರೆಯುತ್ತಾರೆ.

**ದೃಶ್ಯ 2 :** ಅದೊಂದು ಜನ – ವಾಹನನಿಬಿಡ ರಸ್ತೆ. ಇಬ್ಬರು ಸವಾರರು ಕೋಪೋದ್ರಿಕ್ತರಾಗಿ ಪರಸ್ಪರ ವಾಚಾಮಗೋಚರ ಬೈದುಕೊಳ್ಳುತ್ತಿರುತ್ತಾರೆ. ಇದರಿಂದ ಟ್ರಾಫಿಕ್ ಜಾಮ್ ಆಗುತ್ತದೆ. ಬೇರೆಯವರಿಗೆ ತೊಂದರೆಯಾಗುತ್ತದೆ ಎಂಬ ಪರಿವೆಯೇ ಇಲ್ಲದೆ "ನೀನು–ತಾನು", "ಬೋ... ಮಗ ಸೂ... ಮಗ" ಇತ್ಯಾದಿ ಅವಾಚ್ಯ ಪದಗಳ ಪ್ರಯೋಗದಲ್ಲಿ ನಿರತರಾಗಿರುತ್ತಾರೆ. ನಂತರ ತಿಳಿಯುವ ವಿಷಯ – ಇಬ್ಬರಿಗೂ ಗಾಯಗಳಾಗಿರುವುದಿಲ್ಲ ಮತ್ತು ಅವರ ವಾಹನಗಳಿಗೂ ಜಖಂ ಆಗಿರುವುದಿಲ್ಲ.

**ದೃಶ್ಯ 3 :** ಬ್ಯಾಂಕೊಂದರ ಶಾಖೆಯಲ್ಲಿ ಒಬ್ಬ ಗ್ರಾಹಕ ಕೆಂಗಣ್ಣು ಬಿಡುತ್ತ ಜೋರುದನಿಯಲ್ಲಿ ಕೂಗುತ್ತಿರುತ್ತಾರೆ. ತಿಂಗಳ ಮೊದಲ ದಿನವಾದ್ದರಿಂದ ಗ್ರಾಹಕರ ನೂಕುನುಗ್ಗಲು ಅಧಿಕವಿರುತ್ತದೆ. "ಅರ್ಧಗಂಟೆಯಾದರೂ ನನ್ನ ಟೋಕನ್ ಕರೆದಿಲ್ಲ. ಈ ಬ್ಯಾಂಕ್ ಮಂದಿ ನಮ್ಮ ಹಣದಿಂದ ಜೀವನ ನಡೆಸುತ್ತಾರೆ. ಆದರೂ ಇವರ ಕೊಬ್ಬು ನೋಡಿ... ಒಂದಕ್ಕಿಂತ ಒಂದು" – ಇಂತಹ ಘಟನೆಗಳು ನಮ್ಮ ಬ್ಯಾಂಕುಗಳಲ್ಲಿ ಆಗಾಗ್ಗೆ ಜರುಗುತ್ತಿರುತ್ತವೆ.

ಮೇಲೆ ಪ್ರಸ್ತಾಪಿಸಿರುವ ಮೂರು ಘಟನೆಗಳು ಭಿನ್ನವಾಗಿದ್ದರೂ, ಅವುಗಳಲ್ಲಿ ಒಂದು ಬಗೆಯ ಸಾಮ್ಯತೆಯಿದೆ. ಅದು ನಮ್ಮ ಜನರಲ್ಲಿ ಬೆಳೆಯುತ್ತಿರುವ ಅಸಹನೆಯ ಸ್ವಭಾವ. ಚಿಕ್ಕ ಚಿಕ್ಕ ವಿಷಯಗಳಿಗೂ ಸಿಡಿಮಿಡಿಗೊಳ್ಳುವ ಪ್ರವೃತ್ತಿ. ಇದು ಸಾರ್ವಜನಿಕ ವಲಯಕಷ್ಟೇ ಸೀಮಿತವಾಗಿಲ್ಲ. ಜನರ ಜೀವನದ ಎಲ್ಲ ಸ್ತರಗಳಲ್ಲಿ ಆಗಾಗ್ಗೆ ಸ್ಫೋಟಗೊಳ್ಳುತ್ತಿರುತ್ತದೆ.

ಕೇಂದ್ರ ಸರ್ಕಾರ ನಗದು ರದ್ದತಿಯನ್ನು ಘೋಷಿಸಿ ಎರಡು ತಿಂಗಳುಗಳಾದವು. ನವೆಂಬರ್ 8ರ ಮಧ್ಯರಾತ್ರಿಯಿಂದ ಚಲಾವಣೆಯಲ್ಲಿದ್ದ ಶೇ. 85ರಷ್ಟು ರೂ. 500/– ಮತ್ತು ರೂ. 1000/– ಮುಖಬೆಲೆಯ ನೋಟುಗಳು ಅಮಾನ್ಯಗೊಂಡವು. ಸಾಮಾನ್ಯ ಜನರು ಅನೇಕ ತೆರನಾದ ಬವಣೆಗಳಿಗೆ ತುತ್ತಾದರು. ಒಂದು ವರದಿಯ ಪ್ರಕಾರ 90ಕ್ಕೂ ಹೆಚ್ಚು ಮಂದಿ ಬ್ಯಾಂಕ್ ಶಾಖೆಗಳ ಮುಂದೆ ಕ್ಯೂಗಳಲ್ಲಿ ನಿಂತಿದ್ದಾಗಲೇ ಅಸುನೀಗಿದರು. ರೈತರು, ಕೃಷಿ ಕೂಲಿಕಾರರು, ದಿನಗೂಲಿ ನೌಕರರು, ಅನೌಪಚಾರಿಕ ವಲಯದ ದುಡಿಮೆಗಾರರು ಮತ್ತು ನಮ್ಮ ಸಮಾಜದ ಅಂಚಿನಲ್ಲಿರುವವರೇ ಈ ಯೋಜನೆಯಿಂದ ಹೆಚ್ಚಾಗಿ ಬಾಧಿತರಾಗಿರುವವರು.

ಸುಮಾರು ಮೂರು ಲಕ್ಷ ಸಣ್ಣ, ಮಧ್ಯಮ ಮತ್ತು ವ್ಯಷ್ಟಿ (ಮೈಕ್ರೊ) ಘಟಕಗಳನ್ನು ಪ್ರತಿನಿಧಿಸುವ ಅಖಿಲ ಭಾರತ ಉತ್ಪಾದಕರ ಸಂಘ ಮಾರ್ಚ್ 2017ರ ವೇಳೆಗೆ ಶೇ. 55ರಷ್ಟು ವರಮಾನ ಹಾಗೂ ಶೇ. 60ರಷ್ಟು ಕೆಲಸಗಳ ಲುಕ್ಸಾನಾಗುತ್ತದೆ ಎಂದು ಅಂದಾಜಿಸಿದೆ. ಈ ವಲಯದಲ್ಲಿ ಈಗಾಗಲೇ ಸುಮಾರು 4 ಲಕ್ಷಕ್ಕಿಂತಲೂ ಹೆಚ್ಚು ಮಂದಿ ತಮ್ಮ ಕೆಲಸವನ್ನು ಕಳೆದುಕೊಂಡಿದ್ದಾರೆ ಎಂದು ಹೇಳಲಾಗುತ್ತಿದೆ. ಉದ್ಯೋಗವಂಚಿತರಾದವರಲ್ಲಿ ಅನೇಕರು ತಮ್ಮ ಸ್ವಂತ ಊರುಗಳು, ಗ್ರಾಮಗಳಿಗೆ ವಾಪಸ್ಸಾಗಿದ್ದಾರೆ. ಇದೇ ಕಾರಣಕ್ಕೆ ನಮ್ಮ ಗ್ರಾಮೀಣ ಪ್ರದೇಶಗಳಲ್ಲಿ ಚಾಲ್ತಿಯಲ್ಲಿರುವ ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ





ಉದ್ಯೋಗ ಖಾತ್ರಿ ಯೋಜನೆಯಡಿಯ ಕೆಲಸಗಳಿಗೆ ಈಗ ಬೇಡಿಕೆ ಹೆಚ್ಚಾಗಿದೆ.

ಪರಿಸ್ಥಿತಿ ಹೀಗಿರಬೇಕಾದರೆ, ಮೇಲೆ ಉಲ್ಲೇಖಿಸಿರುವ ಮೂರು ದೃಶ್ಯಗಳ ಹಿನ್ನೆಲೆಯಲ್ಲಿ ನಮ್ಮ ಸಾಮಾನ್ಯ ಜನತೆ ನಗದು ರದ್ದತಿ ಯೋಜನೆಯಿಂದ ಉಂಟಾಗಿರುವ ಸಂಕಷ್ಟಗಳಿಂದ ರೋಸಿ ತಮ್ಮ ಆಕ್ರೋಶವನ್ನು ವ್ಯಾಪಕವಾಗಿ ವ್ಯಕ್ತಪಡಿಸಬೇಕಿತ್ತು. ಎಲ್ಲೋ ಕೆಲವು ಸ್ಥಳಗಳಲ್ಲಿ ಸ್ವಲ್ಪ ಗಲಾಟೆಗಳಾಗಿದ್ದರೂ, ಬಹುತೇಕ ಜನರು ಗೊಣಗಿಕೊಳ್ಳುತ್ತಲೇ ಶಾಂತಿಯಿಂದ ತಮ್ಮ ವ್ಯವಹಾರಗಳನ್ನು ನಡೆಸುತ್ತಿದ್ದಾರೆ. ತಮ್ಮದೇ ಹಣವನ್ನು ಬ್ಯಾಂಕುಗಳಿಂದ ಪಡೆಯಲು ಮಿತಿಗಳನ್ನು ಹೇರಿದ್ದರೂ, ಹೆಚ್ಚಾಗಿ ವಿಚಲಿತರಾಗದೆ ತಮ್ಮ ದೈನಂದಿನ ಜೀವನಗಳಲ್ಲಿ ಮುಳುಗಿಹೋಗಿದ್ದಾರೆ. ಈ ಪರಿಯ ಸ್ಪಂದನಕ್ಕೆ ಕಾರಣಗಳೇನು?

ಅನೇಕ ವರ್ಷಗಳ ತರುವಾಯ ನಮ್ಮ ದೇಶದಲ್ಲಿ ಒಬ್ಬ ಬಲಿಷ್ಠ, ಸಮರ್ಥ ನಾಯಕ ಪ್ರಧಾನ ಭೂಮಿಕೆಗೆ ಬಂದಿದ್ದಾನೆ. ಆತ ತನ್ನ ವೈಯಕ್ತಿಕ ಜೀವನವನ್ನು ಕಡೆಗಣಿಸಿ ದೇಶದ ಹಿತದಲ್ಲಿ ದುಡಿಯಲು ಕಟಿಬದ್ಧನಾಗಿದ್ದಾನೆ. ಆದರೆ ವಿಪಕ್ಷಗಳು ಏನೇನೋ ಕ್ಯಾತೆ ತೆಗೆದು ಆತನ ಕಾಲೆಳೆಯಲು ಪ್ರಯತ್ನಿಸುತ್ತಿವೆ. ಆದುದರಿಂದ ಆತನ ಕೈಗಳನ್ನು ಬಲಪಡಿಸಬೇಕು ಎಂಬರ್ಥದಲ್ಲಿ ಈ ಯೋಜನೆ ಕುರಿತು ಸಾಮಾನ್ಯ ಜನರು ಸಹಮತವನ್ನು ವ್ಯಕ್ತಪಡಿಸುತ್ತಿದ್ದಾರೆಯೇ? ಈ ರೀತಿಯ ಜನರ ಮನೋಭಾವಕ್ಕೆ ವಿಪಕ್ಷಗಳ ಅನೈಕ್ಯ ನಡೆಗಳು ಎಷ್ಟು ಕಾರಣ?




ಈ ಸರ್ಕಾರ ಅಸ್ತಿತ್ವಕ್ಕೆ ಬಂದ ತರುವಾಯ ರಾಷ್ಟ್ರವಾದ, ರಾಷ್ಟ್ರಭಕ್ತಿ, ರಾಷ್ಟ್ರಪ್ರೇಮ ಮುಂತಾದುವು ಅತಿ ವಿಜೃಂಭಣೆಯಿಂದ ಪ್ರದರ್ಶಿತಗೊಳ್ಳುತ್ತಿವೆ. ನಮ್ಮ ಪ್ರಧಾನಿ ಮೋದಿ ಸಹ ಆಗಾಗ್ಗೆ ತಮ್ಮ ಭಾವನಾತ್ಮಕ ಭಾಷಣಗಳಲ್ಲಿ ಇವುಗಳಿಗೆ ಒತ್ತು ಕೊಟ್ಟು ಜನರನ್ನು ಮೋಡಿ ಮಾಡುತ್ತಾರೆ. ಪ್ರಜೆಗಳನ್ನು ಉದ್ದೇಶಿಸಿ ಮಾತನಾಡುತ್ತ ಅವರು, "ಎಷ್ಟೇ ಕಷ್ಟವಾದರೂ ಸಹಿಸಿಕೊಳ್ಳಿ.....ಈ ಯೋಜನೆ ಸಫಲವಾಗಲು ಐವತ್ತು ದಿನಗಳ ಸಮಯ ಕೊಡಿ... ನಾನು ಕಪ್ಪು ಹಣವನ್ನು ಮಟ್ಟಾ ಹಾಕುತ್ತೀನಿ...." ಎಂದು ಮನವಿ ಮಾಡಿಕೊಂಡರು. ರಾಷ್ಟ್ರವಾದದ ಎಳೆಯನ್ನು ಜಾಣ್ಮೆ ಹಾಗೂ ಜಾಗರೂಕತನದಿಂದ ತಮ್ಮ ಭಾಷಣದಲ್ಲಿ ಹೆಣೆದು ಜನರನ್ನು ವಿವಶಗೊಳಿಸುವುದರಲ್ಲಿ ಸಫಲರಾಗಿದ್ದಾರೆಯೇ ನಮ್ಮ ಪ್ರಧಾನಿ? ಜೊತೆಗೆ, ಈ ನಗದು ರದ್ದತಿ ಯೋಜನೆಯ ವಿರೋಧಿಗಳನ್ನು ರಾಷ್ಟ್ರದ್ರೋಹಿಗಳೆಂದೇ ಸಾಮಾಜಿಕ ಜಾಲತಾಣಗಳು ಮತ್ತು ಇತರೆಡೆಗಳಲ್ಲಿ ಬಿಂಬಿಸಲಾಗುತ್ತಿದೆ.

ನಮ್ಮಲ್ಲಿ ಅನೇಕರು ಪುರಾಣಗಳನ್ನು ಇತಿಹಾಸವೆಂದೇ ಪರಿಗಣಿಸುತ್ತಾರೆ. ನಮ್ಮ ನಾಗರಿಕತೆಯಲ್ಲಿ ತ್ಯಾಗ, ಬಲಿದಾನಗಳಿಗೆ ಗಮ್ಯ ಸ್ಥಾನವಿದೆ. ಇತರ ಕಾರಣಗಳ ಜೊತೆ ರಾಮ ಪಿತೃವಾಕ್ಯವನ್ನು ಪರಿಪಾಲನೆ ಮಾಡಿ ರಾಜ್ಯಾಧಿಕಾರವನ್ನೇ ತ್ಯಾಗ ಮಾಡಿ ನಮ್ಮ ಜನಮಾನಸದಲ್ಲಿ 'ಮರ್ಯಾದಾ ಪುರುಷೋತ್ತಮ'ನೆಂದೇ ನೆಲೆಸಿದ್ದಾನೆ. ಹಾಗೆಯೇ ಸತ್ಯ ಹರಿಶ್ಚಂದ್ರ ಕೂಡ ಆದರಣೀಯನಾಗಿದ್ದಾನೆ. ಹೀಗಾಗಿ ಜನರು ರಾಷ್ಟ್ರದ ಹಿತದಲ್ಲಿ ಉತ್ತಮ ನಾಳೆಗಳಿಗಾಗಿ ಪ್ರಸ್ತುತ ಸ್ವಲ್ಪ ತ್ಯಾಗ ಮಾಡಬೇಕು ಎಂದು ನಮ್ಮ ಪ್ರಧಾನಿ ಮಾಡಿದ ವಿನಂತಿ ವಿಶೇಷ ಪರಿಣಾಮವನ್ನು ಬೀರಿತೆ?

ನಗದು ರದ್ದತಿ ಯೋಜನೆಯೊಂದೇ ಅಲ್ಲದೆ, ನಮ್ಮ ಜನ ಇಂತಹ ಅನೇಕ ಪ್ರಸಂಗಗಳ ಬಗೆಗೆ ಮೌನ ವಹಿಸುತ್ತಾರೆ ಅಥವಾ ಯಥಾಸ್ಥಿತಿವಾದಕ್ಕೆ ಜೋತು ಬೀಳುತ್ತಾರೆ. ಧರ್ಮ, ಜಾತಿ, ಪಂಥ, ಭಾಷೆ, ಪ್ರಾಂತ್ಯ, ಗಡಿ ಮುಂತಾದ ವಿಷಯಗಳ ಬಗೆಗೆ ಅವರು ಭಾವನಾತ್ಮಕವಾಗಿ ಪ್ರತಿಕ್ರಿಯಿಸುವಷ್ಟು (ಹಲವು ಬಾರಿ ಅತಿರೇಕವಾಗಿ) ದಾರಿದ್ರ್ಯ, ಅನಕ್ಷರತೆ, ಅಸಮಾನತೆ, ಕೋಮುವಾದ, ಮೂಲಭೂತವಾದ ಮುಂತಾದ ಜ್ವಲಂತ ಸಮಸ್ಯೆಗಳು ಮತ್ತು ಇತರ ಸಾಮಾಜಿಕ ಪಿಡುಗುಗಳಿಗೆ ಸ್ಪಂದಿಸುವುದಿಲ್ಲ. ಪ್ರಸ್ತುತ ಸುದ್ದಿಯಲ್ಲಿರುವ ತಮಿಳುನಾಡಿನ ಜಾನಪದ ಕ್ರೀಡೆ ಜಲ್ಲಿಕಟ್ಟು ವಿಷಯವನ್ನೇ ಗಮನಿಸೋಣ. ಹೌದು, ಇದು ತಮಿಳು ಸಂಸ್ಕೃತಿಯ ಒಂದು ಜನಪ್ರಿಯ ಕ್ರೀಡೆ. ಇದರ ನಿಷೇಧವನ್ನು ಹಿಂಪಡೆಯಬೇಕೆಂದು ಆ ರಾಜ್ಯಾದ್ಯಂತ ವ್ಯಾಪಕ ಪ್ರತಿಭಟನೆಗಳು ಜರುಗಿದವು. ಅಧಿಕ ಸಂಖ್ಯೆಯಲ್ಲಿ ಯುವಕರು ಭಾಗವಹಿಸಿದರು. ಆದರೆ ಇದೇ ಬಗೆಯ ಸ್ಪಂದನ ಸಮಷ್ಟಿಯ ಹಿತದಲ್ಲಿ ಜರುಗುವ ಪ್ರತಿಭಟನೆಗಳಿಗೆ ಸಿಗುತ್ತಿತ್ತೇ ? ಸಾಮಾನ್ಯವಾಗಿ ಈ ಪ್ರಶ್ನೆಗೆ ಉತ್ತರ ನಕಾರಾತ್ಮಕವಾಗಿರುತ್ತದೆ. ಬೇರೆ ರಾಜ್ಯಗಳಲ್ಲೂ ಇದೇ ಕಥೆ.

ಕಾರ್ಲ್ ಮಾರ್ಕ್ಸ್ 'ಪರಕೀಯತೆ' ಎಂಬ ಪರಿಕಲ್ಪನೆ ಕುರಿತು ಚರ್ಚಿಸಿದ್ದಾನೆ. ಅದರಂತೆ ವ್ಯಕ್ತಿಗಳು ಇತರ ವ್ಯಕ್ತಿಗಳಿಂದ ಅಥವಾ ಒಂದು ನಿರ್ದಿಷ್ಟ ಸನ್ನಿವೇಶದಿಂದ ಅಥವಾ ಒಂದು ಪ್ರಕ್ರಿಯೆಯಿಂದ ವಿಮುಖರಾಗುತ್ತಾರೆ. ಇದಕ್ಕೆ ತತ್ವಶಾಸ್ತ್ರೀಯ, ಸಾಮಾಜಿಕ ಮತ್ತು ಮನಶ್ಶಾಸ್ತ್ರೀಯ ಆಯಾಮಗಳಿರುತ್ತವೆ. ಈ ಪರಿಕಲ್ಪನೆಯ ತೆಕ್ಕೆಯಲ್ಲಿ ನಮ್ಮ ಅನೇಕ ಮಂದಿ ಸಿಲುಕಿದ್ದಾರೆಯೇ? ಇಂತಹ ಧೋರಣೆಗೆ ನಮ್ಮ ಅಸಂಖ್ಯಾತ ಜನರು ಅಪಾರವಾಗಿ ತಲೆತಲಾಂತರಗಳಿಂದ ನಂಬುತ್ತ ಬಂದಿರುವ ಕರ್ಮಸಿದ್ಧಾಂತದ ಕೊಡುಗೆಗಳೇನು?

ಕೆಲವು ವರ್ಷಗಳ ಹಿಂದೆ ಚುನಾವಣಾ ಆಯೋಗದ ಮುಖ್ಯ ಆಯುಕ್ತರಾಗಿದ್ದ ಟಿ. ಎನ್. ಶೇಷನ್ ಚುನಾವಣೆಗಳಿಗೆ ಸಂಬಂಧಿಸಿದಂತೆ ಕೆಲವು ಸುಧಾರಣೆಗಳನ್ನು ಜಾರಿಮಾಡಿದರು. ಅವರು ಮೆಚ್ಚಲು ಅರ್ಹವಾದಂತಹ ಕ್ರಮಗಳನ್ನು ಜಾರಿಗೊಳಿಸಿದ್ದೇನೋ ನಿಜ. ಆದರೆ ನಮ್ಮಲ್ಲಿ ಹೆಚ್ಚಿನವರು ಅವರನ್ನು 'ಅವತಾರ ಪುರುಷ'ನೆಂದೇ ಭಾವಿಸಿದರು. ಅಣ್ಣಾ ಹಜಾರೆಯವರ ವಿಚಾರದಲ್ಲೂ ಹೀಗೆಯೇ ಆಯಿತು. ಇದೀಗ ಮೋದಿಯವರ ಸರದಿ. ವ್ಯಕ್ತಿವಾದ ಶ್ರೇಷ್ಠತೆಯ ವ್ಯಸನಿಗಳಾಗುತ್ತಿದ್ದಾರೆಯೇ ನಮ್ಮ ಹೆಚ್ಚಿನ ಮಂದಿ?

ಈ ಯೋಜನೆ ತನ್ನ ಉದ್ದೇಶಗಳನ್ನು ಈಡೇರಿಸಿಕೊಳ್ಳಲು ಸೋತರೂ, ಯಾರೂ ಹಿಂದೆ ಮಾಡದಿದ್ದನ್ನು ಈ ಒಬ್ಬ ವ್ಯಕ್ತಿ (ಪ್ರಧಾನಿ ಮೋದಿ) ಧೈರ್ಯದಿಂದ ಮಾಡಿದರು ಎಂದು ಸಾಮಾನ್ಯ ಜನರು ಮೆಚ್ಚುಗೆ ವ್ಯಕ್ತಪಡಿಸಿದ್ದಾರೆಂದರೆ ಅಚ್ಚರಿಯಿಲ್ಲ. ಆಡಳಿತ ಪಕ್ಷದ ರಾಜಕೀಯ ಪಯಣದಲ್ಲಿ ಇದೊಂದು ಮೈಲಿಗಲ್ಲಾಗಬಹುದು. ಏನಾಗಬಹುದೆಂದು ಕಾಲವೇ ಹೇಳುತ್ತದೆ, ಅಲ್ಲವೇ?



**ಮ. ಶ್ರೀ. ಮುರಳಿ ಕೃಷ್ಣ**
ನಂ.೩೮, ೩ನೇ ಕ್ರಾಸ್, ರಾಜ್ ಗಾರ್ಡನಿಯಾ ಲೇಔಟ್
ತುರಹಳ್ಳಿ, ಸುಬ್ರಮಣ್ಯಪುರ ಅಂಚೆ, ಬೆಂಗಳೂರು – ೫೬೦ ೦೬೧

"...ವ್ಹೋರ್ರ ಯಾಡ್ಡೆರ್ ...ಖೇತೇಮ್ ಕಾಯ್ ಕರ್ರಾನ್ರ್...? ಸೀತಪ್ಪನ ಬಾಯಿಯಿಂದ ಹೊಲಸು ಹೊರಬಿತ್ತು. ನಿನ್ನೆ ತನ್ನನ್ನು ಹಂಗಿಸಿದ್ದ ಪುಂಡರು ಮನಸ್ಸಿನಲ್ಲಿ ಹಾದುಹೋದರು. ಮೊದಲ ಬಾರಿ ಮಗ ಹೆಂಡತಿಯ ಮೇಲೆ ಸಿಟ್ಟಾಗಿರುವದನ್ನು ಕಂಡ ಸೀತಪ್ಪನ ತಾಯಿ, ಹೊಲದ ಕಡೆಗೆ ಹೋದದ್ದಕ್ಕೆ ಈ ಪರಿ ವ್ಯಗ್ರಗೊಂಡಿರುವ ಮಗನ ಮನಸ್ಸು ಅರ್ಥವಾಗದಂತಾಗಿ ಪಿಳಿಪಿಳಿ ದಿಟ್ಟಿಸತೊಡಗಿದಳು.

# ಸುಡು ಬೇಸಿಗೆಯ ಒಂದು ಹಗಲುಗನಸು

ಚ. ಲಿಂಗರಾಜ ಸೊಟ್ಟಪ್ಪನವರ

"ಎಷ್ಟು ಕುಬ್ಜನಾಗಿ ಹೋಗಿದ್ದೆನಲ್ಲಾ ನಾನು..." ತನ್ನಲ್ಲೆ ಗೊಣಗಿಕೊಂಡ ಸೀತಪ್ಪ. ಆ ವಿಚಾರ ಅವನ ಆಳಕ್ಕಿಳಿದು ಮನಸ್ಸನ್ನು ಅಲ್ಲೋಲಕಲ್ಲೋಲಗೊಳಿಸಿತ್ತು. ಹತಾಶೆಯಿಂದ ಜರ್ಜರಿತನಾಗಿಹೋಗಿದ್ದ. ಆ ಹುಡುಗಿ ಅವತ್ತು ತನ್ನನ್ನು ಹೇಗೆ ನೋಡಿದ್ದಳು? ನೆನಪಿಸಿಕೊಳ್ಳಲು ಪ್ರಯತ್ನಿಸಿದ, ಸಾಧ್ಯವಾಗಲಿಲ್ಲ. ಯಾಕೆಂದರೆ ಅವಳ ಮುಖ ನೋಡುವ ಧೈರ್ಯವಿರಲಿಲ್ಲ. ಎಲ್ಲ ನೆನಪಾಗುತ್ತಿದ್ದಂತೆ ಒಳಗಿನಿಂದ ಒತ್ತರಿಸಿಕೊಂಡು ಬಂದಿತು. "ಥೂ...ಹೆಣಗಾ..." ಎಂದು ಜರಿದ ಹಾಗಾಯಿತು.

✳ ✳ ✳

ಲಚ್ಚಿ ಅಕ್ಕನ ಮಗಳು, ತನಗಿಂತ ಹದಿನೈದು ವರ್ಷ ಚಿಕ್ಕವಳು. ತಾಂಡಾದ ಆಚೆ ಹೋಗಿ ಕಲಿತಿದ್ದು ಅಷ್ಟಕ್ಕಷ್ಟೆ, ಎಸ್ಸೆಸೆಲ್ಸಿ ಅನ್ನೋದು ಹೆಸರಿಗಷ್ಟೆ. ಮಾವ ಅದನ್ನೇ ದೊಡ್ಡ ಪವಾಡ ಎನ್ನುವಂತೆ ಬಡಾಯಿ ಕೊಚ್ಚಿಕೊಳ್ಳುತ್ತಿದ್ದದ್ದು ಸೀತಪ್ಪನಿಗೆ ನಗು ತರಿಸುತ್ತಿತ್ತು. ಈ ಸಾರಿ ದೀಪಾವಳಿ ಹಬ್ಬಕ್ಕೆ ಇಷ್ಟುದ್ದ ಕೊಂಬಿನ ಟಗರನ್ನು ಬ್ಯಾಟಿ ಬಿಟ್ಟಿದ್ದ. ಇದರಿಂದ ತನ್ನ ಕಾರಬಾರಿತನ ತೋರಿಸಲು ಆ ಮೂಲಕ ಸೀತಪ್ಪನನ್ನು ಮೆಚ್ಚಿಸುವದು ಅವನ ಉದ್ದೇಶ ಆಗಿತ್ತು. ಅವನು ತಾಂಡಾಕ್ಕೆ ಕಾರಬಾರಿಯೂ ಆಗಿದ್ದ. ಯಾವಾಗಲೂ ಬಿಳಿ ಅಂಗಿ ಧೋತರ ಓರೆಯಾಗಿ ಹಾಕಿಕೊಳ್ಳುತ್ತಿದ್ದ ಬಿಳಿ ಟೊಪ್ಪಿಗೆ ಹಾಕಿಕೊಂಡಿರುತ್ತಿದ್ದ. ಬಹುಶಃ ರಾತ್ರಿಯೂ. ಹೀಗಾಗಿ ಆಯಕಟ್ಟಿನ ಜಾಗದಲ್ಲಿ ಕಿಮಟು ಎದ್ದುಕಾಣುವಂತಿರುತ್ತಿತ್ತು. ದಪ್ಪ ಮೀಸೆ ಮೇಲೆ ಪದೇ ಪದೇ ಕೈ ಹಾಕುತ್ತ ಜಿರ್ಕೀ ಚಪ್ಪಲ್ ಹಾಕಿಕೊಂಡು ನಡೆಯುತ್ತಿದ್ದರೆ... ಇಡೀ ತಾಂಡಾ ಹುಬ್ಬೇರಿಸಿಕೊಂಡು ನೋಡುತ್ತಿತ್ತು. ಸೀತಪ್ಪನ ಅಪ್ಪ ತಾಂಡಾಗೆ ಗೌಡ ಆಗಿದ್ದ, ಅಲ್ಲದೆ ಸೀತಪ್ಪ ಮಾಸ್ತರ್. ಇವರೊಂದಿಗಿನ ಸಂಬಂಧ ತನ್ನ ಧಿಕಾವ್‌ನ್ನು ಇನ್ನಷ್ಟು ಹೆಚ್ಚಿಸಬಲ್ಲದೆಂಬ ಲೆಕ್ಕಾಚಾರವೂ ಅವನಿಗಿತ್ತು.

ಸೀತಪ್ಪನಿಗೂ ತನ್ನದು ಗೌಡಕಿ ಮನೆತನ... ತನ್ನವರಲ್ಲೂ ಗೌಡ್ರು ಇದ್ದಾರೆ ಎಂಬುದು ಹೆಮ್ಮೆಯ ವಿಷಯವಾಗಿತ್ತು. ಅದನ್ನು ತಾನು ಕೆಲಸ ಮಾಡುವ ಶಾಲೆಯಲ್ಲೂ ಹೇಳಿಕೊಂಡು ಬೀಗಿದ್ದ. ತಾವೇನೂ ಕಡಿಮೆಯಲ್ಲ ಎಂದು ತೋರಿಸಿಕೊಳ್ಳುವ ಹಂಬಲ ಅವನದು. ಒಮ್ಮೆ ಎಲ್ಲರೂ ಊಟಕ್ಕೆ ಕುಳಿತಾಗ, ಒಬ್ಬ ಮೇಷ್ಟ್ರು, "...ನಾವ್ ಸಣ್ಣಾರಿದ್ದಾಗ, ನಿಮ್ಮ ಮಂದಿ ಕಂಡು–ಯಾಡೀರೋ... ಬಾಪುರ್ರೋ... ಗಾಡೀ ಹತ್ತೀ ಓಡೀರ್‍ರೋ... ಅಂತಿದ್ವೀ..." ಅಂದಾಗ ಎಲ್ಲರೂ ಕೊಕ್ಕಾಡಿ ನಕ್ಕಿದ್ದರು. ಅವಮಾನವಾದಂತಾಗಿ ತಾನೂ ಹುಸಿ ನಗೆ ವ್ಯಕ್ತಪಡಿಸಿದ್ದ.

"ನಿಮ್ಮ ಮಂದಿ ಬಾರೀ ಇಂಪ್ರೂ್ಯ...ಆಗ್ಯಾರ..." ಅನ್ನೋದನ್ನ ಇತರೆ ಮಂದಿ ಬಾಯಿಂದ ಕೇಳಿದಾಗ ಸಂತೋಷವಾಗುತ್ತಿತ್ತು. ಆದರೆ ಯಾವುದರಲ್ಲಿ ಎಂಬ ಪ್ರಶ್ನೆ ಕಾಡುತ್ತಿತ್ತು. ಉಳಿದ ದಲಿತರನ್ನು ದಾಟಿ ನೌಕರಿ, ಸರಕಾರಿ ಯೋಜನೆ ಗಿಟ್ಟಿಸಿಕೊಳ್ಳುವದೇ ಇಂಪ್ರೂ್ಯವ್‌ಮೆಂಟ್ ಅಂತಾ ಒಪ್ಪಿಕೊಳ್ಳುವದು ಸರಿಯೆನಿಸಲಿಲ್ಲ. ತನ್ನವರು ಅವ್ರಿಗಿಂತ ತುಸು ಮ್ಯಾಲ್ರೀ...ಅಂತಾ



ಲಿಂಗವಂತ ಮಂದಿ ಮುಂದ ಹೇಳಿಕೊಂಡಿದ್ದಕ್ಕ ನಾಚಿಕೆಯೆನಿಸಿತ್ತು. ತಾನು ಓದಿ ಮಾಸ್ತರ್‌ನಾದರೂ ತನ್ನ ಜನ, "...ಏ... ಸೀತ್ಯಾ ಆವ್ರೇ... ಮಾಸ್ತರ್ ಕುಂಡಾ ಹಾವ್‌ರ್ರೇ..." ಅಂತಾ ಸಂಬೋಧಿಸುವದು ಮುಜುಗರ ಉಂಟುಮಾಡುತ್ತಿತ್ತು. ಇದು ತನ್ನದ್ವೊಬ್ಬನದಲ್ಲದೆ ಇತರರ ಪಾಡೂ ಆಗಿತ್ತು.

ಸವಣೂರು ಸಂತೆಗೆ ತನ್ನ ಯಾಡೀ ಜೊತೆಗೆ ಹೋಗಲು ಮುಜುಗರವಾಗುತ್ತಿತ್ತು. ಆಕೆಯ ತೆರೆದ ಬೆನ್ನು, ಅರೆಬರೆ ಹೊಟ್ಟೆ, ಎದೆ ತೋರುವಂತಿರುವ ಡ್ರೆಸ್ಸು... ಜೋರುಜೋರಾಗಿ ಎಲ್ಲೆಂದರಲ್ಲಿ ತಮ್ಮ ಭಾಷೆ ಮಾತನಾಡುವದು... ಮೀನು ಮಾಂಸ ಮಾರುವವರೊಂದಿಗಿನ ಚೌಕಾಸಿಯ ವಾಚಾಟ... ಇತರೆ ಜನರು "ಯೇ ಯಾಡೀ..." ಅಂತಾ ಏಕವಚನದಲ್ಲಿ ಕರೆಯುವದು... ಸೀತಪ್ಪನಿಗೆ ಹಿಂಸೆಯಾಗುತ್ತಿತ್ತು. ತನ್ನ ಹಾಸ್ಟೆಲಿನ ಯಾರಾದರೂ ಹುಡುಗರು ಇದನ್ನೆಲ್ಲ ನೋಡಿಯಾರು... ಎಂಬ ಆತಂಕದಲ್ಲೇ ಸಂತೆ ಮುಗಿದುಹೋಗುತ್ತಿತ್ತು. ಸಂತೆ ಯಾವತ್ತಿಗೂ ಅವನಿಗೆ ಸಂಭ್ರಮವೆನಿಸಲೇ ಇಲ್ಲ. ಬೀಡು ಬೀಸಾಗಿ ಗಂಡಸರೊಂದಿಗೆ ವ್ಯವಹರಿಸುವ ಅವ್ವನ ಬಗ್ಗೆ ಸಿಟ್ಟು ಬರುತ್ತಿತ್ತು. ಹಾಗೆಯೇ ಇದನ್ನು ಆಕ್ಷೇಪಿಸದ ಅಪ್ಪನ ಬಗ್ಗೆ ಸಿಟ್ಟು, ಕನಿಕರ ಒಟ್ಟಿಗೆ ಉಂಟಾಗುತ್ತಿದ್ದವು. ಈ ಜಾತಿಯಲ್ಲಿ ಯಾಕಾದರೂ ಹುಟ್ಟಿದೆನೋ... ಅಂತ ಅಂದುಕೊಂಡಿದ್ದ. ಈ ಯಾತನೆಯಿಂದ ಮನಸ್ಸು ಮುಕ್ತಿ ಬಯಸುತ್ತಿತ್ತು. ಅಂತೆಯೆ ಒಮ್ಮೊಮ್ಮೆ ಇತರೆ ಜಾತಿಯ ಹುಡುಗಿಯರ ಬಗ್ಗೆಯೂ ಯೋಚಿಸಿದ್ದ.

* * *

ಬರುವ ದೀಪಾವಳಿಗೆ ತನಗೆ ಅಕ್ಕನ ಮಗಳನ್ನೇ ನಿಕ್ಕಿ ಮಾಡುವ ಮಾವ ಮತ್ತು ತನ್ನ ಮನೆಯವರ ಮಸಲತ್ತು ತಿಳಿದು ನಿರಾಸೆಯಾಗಿದ್ದ. ಅದೇ ಪರಿಸರದಲ್ಲಿ ಬೆಳೆದ ಹುಡುಗಿಯನ್ನು ಮದುವೆಯಾಗಲು ಮನಸ್ಸು ಒಪ್ಪುತ್ತಿಲ್ಲ. ಡ್ರೆಸ್ ಒಂದನ್ನು ಹೊರತಾಗಿಸಿದರೆ ಆ ಹುಡುಗಿಯೋ ಅವ್ವ ಅಕ್ಕನಂತೆಯೆ. ಅವಳನ್ನು ನೋಡಿದರೆ ಥೇಟ್ ಅಕ್ಕನನ್ನು ಕಂಡ ಹಾಗೆಯೇ! ಸೀತಪ್ಪನಿಗೆ ವಿವರಿಸಲಾಗದ ಸಂಕಟ.

ತಾನು ಒಬ್ಬನೇ ಗಂಡುಮಗ. ಅಪ್ಪ ಅವ್ವ ಕೂಲಿ ಮಾಡಿ ಕುರಿ ಕಾಯ್ದು ತನ್ನನ್ನು ಓದಿಸಿದ್ದಾರೆ... ಬೆಳೆಸಿದ್ದಾರೆ. ಇನ್ನು ಅಕ್ಕ, ಮಾವನ ನೆರವಿಲ್ಲದಿದ್ದರೆ... ತಾನು ಕುರಿ ಹಿಂಡಿನ ಹಿಂದೆ ದೋಟಿ ಹೆಗಲ ಮೇಲೆ ಹಾಕಿಕೊಂಡು ಹೋಗಿರುತ್ತಿದ್ದೆ. ಅಲ್ಲದೆ, ಅಕ್ಕನ ಮಗಳು ಮನೆಯವರನ್ನು ಅಕ್ಕರೆಯಿಂದ ನೋಡಿಕೊಳ್ಳುತ್ತಾಳೆ... ಎಂಬ ಹಿರಿಯರ ಹಿತೋಪದೇಶ ಕೇಳಿ ಮನಸ್ಸು ಹೊಯ್ದಾಡತೊಡಗಿತ್ತು. ಶಾಲೆಯಲ್ಲಿ ಈ ವಿಷಯ ಚರ್ಚೆಗೆ ಬಂದು ಸೀತಪ್ಪ ಮುಜುಗರ ಅನುಭವಿಸುವಂತಾಗಿತ್ತು. ವಯಸ್ಸಿನ ಅಂತರದ ಅಪಾಯಗಳ ಬಗ್ಗೆ... ರಕ್ತಸಂಬಂಧಿ ಮದುವೆಗಳಿಂದ ಆಗುವ ಅನಾಹುತಗಳ ಬಗ್ಗೆ ಕೇಳಿ ಭಯವಾಯಿತು. ...ಮತ್ತ "ಎಸ್ಟೀ ಮಂದ್ಯಾಗ ಇವ್ವೆಲ್ಲಾ ಕಾಮನ್ ತಗರ್ರೀ... ಏನ್ ಮಾಡಾಕ್ಕಾಕೇತಿ? ಹಿಂದ್ ಎಷ್ಟ್ ಜನಾ ಆಗಿಲ್ಲ? ಈಗ್ಲೂ ಆಗೋರು ಅದಾರ..." ಎಂಬ ಸಿಬ್ಬಂದಿಯವರ ಮಾತು ಕೇಳಿ ಚುಚ್ಚಿದಂತಾಯಿತು. ಆದರೆ ಕೊನೆಯ ಅರ್ಧದ ಮಾತು ಸಾಂತ್ವನ ಹೇಳಿತು. ಗೊಂದಲ ವಿಟ್ಟುಕೊಂಡೇ ಸೀತಪ್ಪ ತನ್ನೂರ ಬಸ್ಸು ಹತ್ತಿದ.

ಕುರಿ ಕಡಿದು ಇಡೀ ತಾಂಡಾಕ್ಕೆ ಸೀತಪ್ಪನ ಮಾವ ಊಟ ಹಾಕಿಸಿದ್ದ. ತನ್ನಂತ ಶೂರನೇ ಇಲ್ಲ ಎಂಬಂತಹ ಸಾಹುಕಾರಿಕೆ ಗತ್ತು ಅವನದು. ಸೇವಾಲಾಲರ ಗುಡಿಯ ಕಟ್ಟಿ ಮೇಲೆ ಹಿರಿಯರಾದಿ ಎಲ್ಲರೂ ಸೇರಿದ್ದರು. ಡಣ್ಣ...ಜಣ್ಣ...ತಾಟು ಬಡಿಯುತ್ತ ಭಜನೆ, ರೋದನದಂತಹ ಹಾಡು ಊರಾಚೆ ಕೇಳುತ್ತಿತ್ತು. ಹೆಂಗಸರು ಬಾಗಿ ಬಾಗಿ ಓಲಾಡುತ್ತ ಮೂಗಿನಲ್ಲೇ ಹಾಡುತ್ತಿದ್ದರು. ಇಡೀ ತಾಂಡಾದಲ್ಲಿ ತುಂಬಿದಂತಹ ವಾತಾವರಣ. ತನ್ನ ಹಟ್ಟಿಯ ದೀಪಾವಳಿ, ಇತರರ ದೀಪಾವಳಿಗಳೆರಡನ್ನೂ ತುಲನೆ ಮಾಡತೊಡಗಿದ. ಇದೇ ವಾತಾವರಣದಲ್ಲಿ ಬೆಳೆದ ತನಗೆ ಹೀಗೇಕೆ ಅನಿಸುತ್ತದೆ ಎಂಬುದಕ್ಕೆ ಅವನಲ್ಲಿ ಸ್ಪಷ್ಟತೆ ಇರಲಿಲ್ಲ.

ಸೀತಪ್ಪನ ಮಾವ ಎಲ್ಲರನ್ನೂ ಗುಡಿ ಆವರಣದಲ್ಲಿ ಸೇರಿಸಿದ. ಸೀತಪ್ಪನ ಮನೆಯವರೂ ಸೇರಿಕೊಂಡರು. ಬೀಗರನ್ನು ಕೀಟಲೆ ಮಾಡುತ್ತ ಹೆಂಗಸರು ಬರಮಾಡಿಕೊಂಡರು. ಮದ್ಯದಲ್ಲಿ ಭಟ್ಟಿ ಸಾರಾಯಿಯ ಮೂರ್‍ನಾಲ್ಕು ಕೊಡಪಾನಗಳು. ಸುತ್ತ ಕುಳಿತು ತಂಬಿಗೆಗೆ ಬಾಗಿಸಿಕೊಂಡು ಮೇಲೆತ್ತುತ್ತಿದ್ದರು. ಈ ಕ್ರಿಯೆ ಮುಂದುವರಿದಿರುವಂತೆಯೇ ಬೀಗತನದ ವಿಷಯ ಪ್ರಸ್ತಾಪವಾಯಿತು. ಹಾಗೆ ನೋಡಿದರೆ ಅಲ್ಲಾವ ಮಾತುಕತೆಯೂ ನಡೆಯಲಿಲ್ಲ. ಒಮ್ಮೆಲೇ ಘೋಷಣೆ ಯಾಯಿತು. ಮುಖಂಡರೆನಿಸಿಕೊಂಡವರು ಕೊಡುವ ತೆಗೆದುಕೊಳ್ಳುವ ಮಾತನಾಡಿದರು. ಸೀತಪ್ಪನ ಅಪ್ಪ ಮೇಲೆದ್ದು ನಿಂತು... "ನಾ ತಾಂಡೆಕ್ಕ ಗೌಡಾ ಅದೀನೂ ... ಮನೀ ಮಗ್ಳೂ ಮನಿಗ್ಗ ಬಂದ್ಲೂ ...ಇನ್ನ್ಯಾತರದು ವ್ಯೇವಾರು...?" ಅಂದು ಜೋಲಾಡುತ್ತ ಕೂತ. ಮದುವೆ ಪಕ್ಕೀಯಾಯಿತು. ದಿನವೂ ನಿಕ್ಕಿಯಾಯಿತು.

* * *

"...ಮೂರ್‍ನಾಕ್ ವರ್ಸಾ ಆತೂ. ಇನ್ನೂ ಏಣೂ ಚೀಂಯ್ಯಾ...ಇಲ್ಲಾ, ಪೀಂಯ್ಯಾ...ಇಲ್ಲಾ, ...ಹೋಗ್ಪಾ ಯಣ್ಣಾ ನೀ ವಳೇಂವಾ ಅದೀ. ಹ್ಯೇಂತಿಯೇನ್ ಪೂಜ್ಯಾ ಮಾಡಾಕ್ಕ ಮಾಡ್ಕೇಂಡಿಯೇನ್..." ಊರಿಗೆ ಹೋದಾಗ ಹೆಂಗಸರು ತರಾಟೆಗೆ ತೆಗೆದುಕೊಂಡರು. ಓರಗೆಯವರು, ಮಾವಂದಿರು ಸಲುಗೆಯಿಂದಲೆ ಕೆಣಕಿದರು. ಲಚ್ಚಿ ಮೇಲೆ ಕಣ್ಣಿಟ್ಟಿದ್ದ ಕೆಲ ಪುಂಡರು "...ಏಣಾ...ಇಣ್ಣೂ ಮುಟ್ಯೆಯಿಲ್ಲನಪಾ... ನಾ ಆಗಿದ್ರಾ ಹೀಂಗಣೂ... ಕಾರ್‍ಬಾರಿ ಮಾಂವ ನೋಕ್ರಿ ನೋಡಿ ಕೊಟ್ಟಾಣು, ಹೋಲ್ವ್ಯಾರ್‍ಯಾಗ ದುಡೆಗ್ಗ ಗಡಸ್ ಇರ್‍ರ್‍ತ್ರೇಪಾ...ನಂಗ ಕೊಟ್ಟಿದ್ರ...ಇಟೊತ್ತಣು?" ...ಕಿವಿಗೆ ಬಿದ್ದ ಮಾತುಗಳು ಎದೆಗೂ ಬಿದ್ದವು. ಹಲ್ಲು ಕಡಿಯುವಂತೆ ಮಾಡಿದವು. ಹೊಟ್ಟೆಯೊಳಗಿನ ಸಿಟ್ಟು ಹೊಟ್ಟೆಯೊಳಗೆ ಒದ್ದಾಡಿತು. ಮುಖದ ಮೇಲೆ ಹೇಡಿ ನಗೆ ತೋರಿಸುತ್ತಲೇ ಮನೆ ಸೇರಿದ.

ಅವತ್ತಿನ ರಾತ್ರಿ ಸಜ್ಜಾಯಿತು. ಹಿಂದಿನ ರಾತ್ರಿಗಳು ಹೀಗೆ ಹುರುಪಿನಿಂದ ಶೃಂಗಾರಗೊಂಡು ಹಾಗೆ ಸರಿದುಹೋಗಿದ್ದವು. ಆ ನೆನಪಿನ ಗಂಟು ಬೇಡವೆಂದರೂ ಬಿಚ್ಚಿಕೊಂಡಿತು. ಕಹಿ ನೆನಪುಗಳನ್ನು ಮರೆಮಾಚುವ ಪ್ರಯತ್ನ ಮಾಡತೊಡಗಿದ. ಆದರೆ ಹಿಂದಿನ ಅನುಭವ ತನ್ನ ಬಲಹೀನತೆಯನ್ನು ಮನವರಿಕೆ ಮಾಡಿಕೊಟ್ಟಿತ್ತು. ಹಾಗೆಯೇ ತನ್ನ ಶಕ್ತಿ ಸೆಲೆಯ ಪರಿಚಯವನ್ನೂ ಒದಗಿಸಿತ್ತು. ಅಕ್ಕನಂತೆ ಕಾಣುವ ಲಚ್ಚಿ ಕಂಡು ಹುರುಪು ಇಳಿದುಹೋಗಿತ್ತು. ಲಚ್ಚಿ ಎದುರು ತಾನು ಹ್ಯಾಪ್ಲ್ಯಾ ಎನಿಸಿತ್ತು. ಈಗ ಸೀತಪ್ಪ ಹವಣಿಸಿ ಕುಳಿತ. ಈ ಸಾರಿ ಅಕ್ಕನ ಮುಖ ಚಹರೆ ನೆನಪು ಮಾಡಿಕೊಳ್ಳದಿರಲು ನಿರ್ಧರಿಸಿದ. ಲಚ್ಚಿಯ ಮುಖ ಕಾಣದಿರದಂತೆ ಲೈಟ್ ಆರಿಸಿದ... ಬೇಕಿದ್ದನ್ನೆಲ್ಲ ನೆನಪಿಸಿಕೊಳ್ಳುವ... ಅದನ್ನು ಅನುಭವಿಸುವ ಅವಕಾಶ ಕಲ್ಪಿಸುವ ಕತ್ತಲು ಮುದ ನೀಡತೊಡಗಿತು. ಬೆಳಕಿಗಿಂತ ಕತ್ತಲು ಮುಂದುವರಿಯಲು ಅನುವು ಮಾಡಿಕೊಡತೊಡಗಿತ್ತು... ಸೀತಪ್ಪ ಆನಂದ ತುಂದಿಲನಾಗಿ ಮುಂದುವರಿಯುತ್ತಿದ್ದ... ಅಂಥದೇ ಕ್ಷಣದಲ್ಲಿ ಲಚ್ಚಿ ಹ್ಞಾಂ... ಮಾಮಾರೇ... ಎಂದು ಮುಲುಗಿದಳು. ಕಾರ್ಗತ್ತಲಲ್ಲಿ ಮಿಂಚು ಕೋರೈಸಿದಂತೆ ಸೀತಪ್ಪನಿಗೆ ಪಳ್ಳನೆ ಅಕ್ಕನ ಮುಖ ಕಂಡಂತಾಯಿತು. ಸೀತಪ್ಪ ಜರ್‍ರನೇ ಇಳಿದು ಹೋಗುತ್ತಿದ್ದಂತೆ ಕುಬ್ಜನಾಗತೊಡಗಿದ. ಇಡೀ ಊರೇ ಒಟ್ಟಾಗಿ "ಏ ಹೆಣಗಾ..." ಎಂದು ಕೇಕೆಹಾಕಿದಂತಾಯಿತು.

ಒಮ್ಮೆಲೆ ಬೆಚ್ಚಿ ಎದ್ದು ಕುಳಿತ ಸೀತಪ್ಪ ಸುತ್ತಲೂ ನೋಡಿದ. ಪೂರ್ತಿಯಾಗಿ ಬೆವೆತುಹೋಗಿದ್ದಾನೆ. ಬೆವರು ದಳದಳನೆ ಇಳಿಯುತ್ತಿದೆ. ಬಿಸಿಲ ಧಗೆ ಸಹಿಸಲಾಗದೆ ಗಾಳಿ ಬಯಸಿ ಹೊರಗಡೆ ಚಪ್ಪರದಲ್ಲಿ ಮಲಗಿರುವದು ಗಮನಕ್ಕೆ ಬಂದಿತು. ಸಾವರಿಸಿಕೊಳ್ಳಲು ಕೆಲ ಸಮಯ ಬೇಕಾಯಿತು. ಬೆವರು ಇಳಿದುಹೋಗಿ ದಾಹವಾಗಿತ್ತು. "ಯ್ಯೇ ಲಚ್ಚಿ... ಪಾಣೀ ಲಾವ್ರೇ..." ಎಂದು ಕೂಗಿದ. ಯಾವ ಪ್ರತಿಕ್ರಿಯೆಯೂ ಬರಲಿಲ್ಲ. ಮತ್ತೆ ಅಸಹನೆಯಿಂದ ಕಿರುಚಿ ಕೂಗಿದ. ಸೀತಪ್ಪನ ಅವ್ವ ದಡಬಡಾಯಿಸುತ್ತ ನೀರಿನ ತಂಬಿಗೆ ಹಿಡಿದು ಬಂದಳು. ಸೀತಪ್ಪ ಆಚೆ ಕಣ್ಣಾಡಿಸುವದನ್ನು ಗ್ರಹಿಸಿದ ಆಕೆ, "ಲಚ್ಚೀ ಹೋಲದ್ದ ಕಡ್ಯಾಕ ಹೋಗ್ಯಾಳ್" ಎನ್ನುತ್ತಲೇ,

"...ವ್ಹೋರ್‍ರ ಯಾಡ್ಡೆರ್ ...ಖೇತೇಮ್ ಕಾಯ್ ಕರ್‍ರಾರ್...? ಸೀತಪ್ಪನ ಬಾಯಿಯಿಂದ ಹೊಲಸು ಹೊರಬಿತ್ತು. ನಿನ್ನೆ ತನ್ನನ್ನು ಹಂಗಿಸಿದ್ದ ಪುಂಡರು ಮನಸ್ಸಿನಲ್ಲಿ ಹಾದುಹೋದರು. ಮೊದಲ ಬಾರಿ ಮಗ ಹೆಂಡತಿಯ ಮೇಲೆ ಸಿಟ್ಟಾಗಿರುವದನ್ನು ಕಂಡ ಸೀತಪ್ಪನ ತಾಯಿ, ಹೊಲದ ಕಡೆಗೆ ಹೋದದ್ದಕ್ಕೆ ಈ ಪರಿ ವ್ಯಗ್ರಗೊಂಡಿರುವ ಮಗನ ಮನಸ್ಸು ಅರ್ಥವಾಗದಂತಾಗಿ ಪಿಳಿಪಿಳಿ ದಿಟ್ಟಿಸತೊಡಗಿದಳು.

**ಚ. ಲಿಂಗರಾಜ ಸೊಟ್ಟಪ್ಪನವರ**
'ರೇಣುಕಾ ನಿಲಯ', ಕಾಳೆ ಬಿಲ್ಡಿಂಗ್, ವಿದ್ಯಾನಗರ (ಪಶ್ಚಿಮ)
ಹಾವೇರಿ – ೫೮೧ ೧೧೦



ವೀರಶೈವ ಮತ್ತು ಲಿಂಗಾಯತ ಎರಡೂ ಒಂದೇ ಅಥವಾ ಬೇರೆ ಬೇರೆಯೇ ಎಂಬ ವಿಷಯದಲ್ಲೂ ಇಂತಹ ಸಂಘರ್ಷ, ಚರ್ಚೆ ಮೇಲಿಂದ ಮೇಲೆ ನಡೆಯುತ್ತಲೇ ಇರುತ್ತದೆ. ಜಾತಿ ಗಣತಿಯಲ್ಲಿ ಲಿಂಗಾಯತ ಎಂದು ಬರೆಸಬೇಕೆಂದು ಕೆಲವು ವಿರಕ್ತ ಮಠಾಧೀಶರು, ವೀರಶೈವ ಎಂದೇ ಬರೆಸಬೇಕು ಎಂದು ಕೆಲವು ಪಂಚಪೀಠದವರು ವಾದಿಸುತ್ತಿದ್ದಾರೆ. ಈ ಎರಡು ವಾದಿಗಳ ನಡುವೆ ನಾವು ಯಾವ ಪಂಥಕ್ಕೆ ಸೇರಿದವರು ? ಎಂಬ ಗೊಂದಲ ಲಿಂಗಾಯತರಿಗೆ ಉಂಟಾಗಿದೆ. ವೀರಶೈವ ಎನ್ನುವುದು ಧರ್ಮ ಸೂಚಕ, ಲಿಂಗಾಯತ ಎನ್ನುವುದು ಮತ ಸೂಚಕ. ಹೀಗಾಗಿ ವೀರಶೈವ-ಲಿಂಗಾಯತ ಎರಡೂ ಒಂದೇ ಎಂಬ ವಿಶ್ಲೇಷಣೆಯೂ ಆರಂಭವಾಗಿದೆ.

# ವೀರಶೈವ-ಲಿಂಗಾಯತ ಎಂಬ ರೂಪಕ ರಂಪಾಟ

**ಭಾ**ರತದ ಜಾತಿ, ಮತ, ಪಂಥಗಳಲ್ಲಿ ವೈಚಾರಿಕತೆಯಲ್ಲಿ ಇರುವ ಭಿನ್ನತೆ ಆಚರಣೆಯಲ್ಲಿ ಅಷ್ಟಾಗಿ ಕಂಡುಬರುವದಿಲ್ಲ. ಲಿಂಗಾಯತವು ಮೂರ್ತಿ-ಸ್ಥಾವರ ಪೂಜೆಯನ್ನು, ಹೋಮ-ಹವನ, ತಿಥಿ-ಮುಹೂರ್ತ, ರಾಹುಕಾಲ-ಗುಳಿಕಾಲ, ಮುಟ್ಟು-ಮಡಿ-ಮೈಲಿಗೆ ಮುಂತಾದ ಹಿಂದೂ ಧರ್ಮಾಚರಣೆಗಳನ್ನು ಆಚರಿಸುವುದನ್ನು ನಿಷೇಧಿಸುತ್ತದೆ. ಆದರೆ ವಾಸ್ತವದಲ್ಲಿ ಲಿಂಗಾಯತರು ಅಥವಾ ವೀರಶೈವರು ಇವುಗಳನ್ನು ನಿತ್ಯ ಬದುಕಿನಲ್ಲಿ ಆಚರಿಸುತ್ತಾರೆ. ಶೈವ ಪರಂಪರೆಯವರು ಎಂದು ಹೇಳಿಕೊಳ್ಳುವ ವೀರಶೈವರು ಇವುಗಳನ್ನು ತುಸು ಹೆಚ್ಚಿಗೆ ಅನುಕರಿಸುತ್ತಾರೆ. ಲಿಂಗಾಯತರು ಎಂದುಕೊಳ್ಳುವ ವಿರಕ್ತರು ಬಸವಣ್ಣ /ಲಿಂಗಾಯತ ಹೇಳಿದ ಆಚರಣೆಗಳತ್ತ ಗಮನ ಹರಿಸುತ್ತಾರೆ. ಆದರೆ ಜನಸಾಮಾನ್ಯರು ಇನ್ನೂ ಸನಾತನ ಪರಂಪರೆಗಳಿಂದ ತಮ್ಮನ್ನು ಬಿಡಿಸಿಕೊಂಡಿಲ್ಲ ಎಂದೇ ಹೇಳಬಹುದು. ಈ ರೀತಿ ಸಾಂಸ್ಕೃತಿಕ ಮತ್ತು ವೈಚಾರಿಕ ದ್ವಂದ್ವ ಅಥವಾ ಕಲಸುಮೇಲೋಗರವು ಎಲ್ಲ ನಾಗರಿಕತೆಗಳಲ್ಲೂ ಕಂಡುಬರುತ್ತದೆ. ಒಂದು ಮತಪಂಥದ ಆಚರಣೆ ಮತ್ತೊಂದು ಮತಪಂಥದ ಆಚರಣೆಗಳಿಗೆ ತದ್ವಿರುದ್ಧವಾದಾಗ ಸಂಘರ್ಷಗಳು ಉಂಟಾಗುತ್ತವೆ.

ವೀರಶೈವ ಮತ್ತು ಲಿಂಗಾಯತ ಎರಡೂ ಒಂದೇ ಅಥವಾ ಬೇರೆ ಬೇರೆಯೇ ಎಂಬ ವಿಷಯದಲ್ಲೂ ಇಂತಹ ಸಂಘರ್ಷ, ಚರ್ಚೆ, ಮೇಲಿಂದ ಮೇಲೆ ನಡೆಯುತ್ತಲೇ ಇರುತ್ತದೆ. ಜಾತಿ ಗಣತಿಯಲ್ಲಿ ಲಿಂಗಾಯತ ಎಂದು ಬರೆಸಬೇಕೆಂದು ಕೆಲವು ವಿರಕ್ತ ಮಠಾಧೀಶರು, ವೀರಶೈವ ಎಂದೇ ಬರೆಸಬೇಕು ಎಂದು ಕೆಲವು ಪಂಚಪೀಠದವರು ವಾದಿಸುತ್ತಿದ್ದಾರೆ. ಈ ಎರಡು ವಾದಿಗಳ ನಡುವೆ ನಾವು ಯಾವ ಪಂಥಕ್ಕೆ ಸೇರಿದವರು ಎಂಬ ಗೊಂದಲ ಲಿಂಗಾಯತರಿಗೆ ಉಂಟಾಗಿದೆ. ವೀರಶೈವ ಎನ್ನುವುದು ಧರ್ಮ ಸೂಚಕ, ಲಿಂಗಾಯತ ಎನ್ನುವುದು ಮತ ಸೂಚಕ. ಹೀಗಾಗಿ ವೀರಶೈವ-ಲಿಂಗಾಯತ ಎರಡೂ ಒಂದೇ ಎಂಬ ವಿಶ್ಲೇಷಣೆಯೂ ಆರಂಭವಾಗಿದೆ. ಈ ವಾದ ವಿವಾದಗಳ ನಡುವೆ ಈಗ ಮತ್ತೊಂದು ಸುತ್ತಿನ ರಂಪಾಟ ಆರಂಭವಾಗಿದೆ. ಅದು 'ಬಸವಣ್ಣ ಗುರುವಲ್ಲ ವಚನಗಳು ಆದಿಯಲ್ಲ' ಎಂಬ ವಿಷಯದ ಕುರಿತು. ವೀರಶೈವವೇ ಲಿಂಗಾಯತಕ್ಕೆ ಆದಿ ಮತ್ತು 'ಸಿದ್ಧಾಂತ ಶಿಖಾಮಣಿ'ಯೇ ಮೂಲ ಗ್ರಂಥ ಎಂದು ಪಂಚಪೀಠದ ಪರಂಪರೆಯ ಕೇದಾರ ಶ್ರೀಗಳು ಹೇಳಿದ್ದಾರೆ. ಅದು ನಿಜವೆಂದು ಒಪ್ಪಿಕೊಳ್ಳೋಣ. ಏಕೆಂದರೆ, ಬಸವಣ್ಣ ತಾನು ಗುರುವಲ್ಲ, ಲಿಂಗವಲ್ಲ, ಜಂಗಮನಲ್ಲ. ಡೋಹರ ಕಕ್ಕಯ್ಯನ, ಮಾದಾರ ಚನ್ನಯ್ಯನ ಮನೆಯ ದಾಸಾನುದಾಸ ಎಂದುಕೊಂಡಿದ್ದಾನೆ. ಆ ಹಿನ್ನೆಲೆಯಲ್ಲಿ, ಬಸವಣ್ಣ ಇನ್ನೊಬ್ಬರ ತಲೆಯ ಮೇಲೆ ಪಾದ ಮಡುಗುವ, ಪಾದಪೂಜೆ ಮಾಡಿಸಿಕೊಂಡು ಪಾದೋದಕವೆಂದು ಕಾಲು ತೊಳೆದ ನೀರನ್ನು ಭಕ್ತರಿಗೆ ಕುಡಿಸುವ ಹೇಸಿ ಗುರುವಲ್ಲ !

ಹಾಗಾದರೆ ತಮ್ಮದು ಗುರು ಪರಂಪರೆ ಎಂದು ಹೇಳಿಕೊಳ್ಳುವ ವೀರಶೈವರಿಗೆ ಅಥವಾ ವೀರಶೈವಕ್ಕೆ ಯಾವುದು ಆದಿಮೂಲ ? ಶೈವದಿಂದ ಟಿಸಿಲೊಡೆದ

**ಡಾ॥ ಮಲ್ಲಿಕಾರ್ಜುನ ಗುಮ್ಮಗೋಳ**

ಏಳು ಪಂಥಗಳಲ್ಲಿ ವೀರಶೈವವೂ ಒಂದು. ಎಲ್ಲ ಮತಪಂಥಗಳ ಹಾಗೂ ಶಾಸ್ತ್ರಗಳ ಸಾಹಿತ್ಯದ ಮೂಲ ಸಂಸ್ಕೃತವೇ ಆಗಿದೆ. ಆದರೆ ಪ್ರಾಚೀನ ಸಂಸ್ಕೃತ ಸಾಹಿತ್ಯದಲ್ಲಿ ವೀರಶೈವದ ಬಗ್ಗೆ ತಿಳಿದುಬರುವುದಿಲ್ಲ. ವೀರಶೈವರಿಗೆ ವೀರಭದ್ರನೇ ಮೂಲ. ಹಾಗಾಗಿ ಇದು ಋಗ್ವೇದದಷ್ಟು ಹಳೆಯದೆಂದು, ಹರಪ್ಪ ಮೊಹೆಂಜೋದಾರೊ ಸಂಸ್ಕೃತಿಯಲ್ಲಿ ವೀರಶೈವರ ಲಾಂಛನವಾದ ಶಿವಲಿಂಗ ಪೂಜೆ ಜಾರಿಯಲ್ಲಿತ್ತು. ಹೀಗಾಗಿ ವೀರಶೈವವು ಬಹಳ ಪ್ರಾಚೀನ ಎಂದು ವಾದಿಸಲಾಗುತ್ತದೆ. ಆದರೆ ಇದಮಿತ್ಥಂ ಎಂಬ ಐತಿಹಾಸಿಕ ಆಧಾರಗಳು ಮಾತ್ರ ಇಲ್ಲ. ಇದು ಕೇವಲ ಪೌರಾಣಿಕ ಆಧಾರಗಳ ಮೇಲಿನ ಒಂದು ಪ್ರಾಕಲ್ಪನೆ ಮಾತ್ರ. ಹಾಗೆಯೇ ಹೆಚ್ಚಾಗಿ ಶೈವ ಸಿದ್ಧಾಂತದ ಸಂಪ್ರದಾಯವನ್ನೇ ಹೋಲುವ ವೀರಶೈವವು ಯಾವಾಗ ಶೈವದಿಂದ ಟಿಸಿಲೊಡೆಯಿತು ಎಂದು ಹೇಳುವದಕ್ಕೆ ನಿಖರವಾದ ಆಧಾರಗಳಿಲ್ಲ. ಪಂಚಾಚಾರ್ಯರು ಈ ಧರ್ಮವನ್ನು ಸ್ಥಾಪಿಸಿದರೆಂದು ಹೇಳಲಾಗುತ್ತದೆ. ರೇಣುಕ, ದಾರುಕ, ಏಕೋರಾಮರಾಧ್ಯ, ಮರುಳಸಿದ್ಧ, ಪಂಡಿತಾರಾಧ್ಯರಿಂದ ಈ ಧರ್ಮ ಸ್ಥಾಪನೆಯಾಯಿತೆಂದು ಹೇಳಲಾಗುತ್ತದೆ. ಆದರೆ ಇವರ ಕಾಲ ೧೫೩೦-೧೬೭೮ ಎಂದು ವಿದ್ವಾಂಸರು ಹೇಳುತ್ತಾರೆ. ಆದರೆ ಇದೇ ಹೆಸರಿನ ಪ್ರಾಚೀನ ಪಂಚಾಚಾರ್ಯರು ಈ ಧರ್ಮವನ್ನು ಸ್ಥಾಪಿಸಿದರೆಂದು ಹೇಳಲಾಗುತ್ತದೆ. ಆದರೆ ಆ ಬಗೆಯ ಹೆಸರುಗಳು ಪ್ರಾಚೀನ ಸಾಹಿತ್ಯದಲ್ಲಿ ಎಲ್ಲಿಯೂ ಸಿಗುವದಿಲ್ಲ. '೧೬೦೬ರಲ್ಲಿ ದೊರೆತ ಗುಮ್ಮಳಾಪುರ ಶಾಸನದಲ್ಲಿ ಬರುವ "ಭಾರದ್ವಾಜ ಗೋತ್ರದ, ಪಡಿವಿಡಿ ವರ್ಗದ,

ಕೊಲ್ಲಿಪಾಕಿಯ ರೇವಣಸಿದ್ಧ ಸಂಪ್ರದಾಯದವರಾದ ನಂಜದೇವ ಅಯ್ಯನವರ" ಎಂಬ ಉಲ್ಲೇಖ ರೇವಣಸಿದ್ಧರು ಭಾರದ್ವಾಜ ಗೋತ್ರದವರೆಂದು, ಹಾಗೆಯೇ ಭಾರದ್ವಾಜ, ಕಾಶ್ಯಪ ಇತ್ಯಾದಿ ಬ್ರಾಹ್ಮಣ ಗೋತ್ರದವರಾದ ಇವರು 'ವೀರಶೈವ ಲಿಂಗೀಬ್ರಾಹ್ಮಣ ಗ್ರಂಥಮಾಲೆ' ಎಂಬ ಗ್ರಂಥ ರಚಿಸಿರುವುದೇ ಅವರು ಸನಾತನ ಪರಂಪರೆಯವರೆಂದು ತೋರಿಸುತ್ತದೆ. ಆದರೆ ಬಸವೋತ್ತರ ಕಾಲದಲ್ಲಿ ಪಂಚಾಚಾರ್ಯರ ಪೀಠಗಳಿಗೆ ವೀರ, ನಂದಿ, ಭೃಂಗಿ ಇತ್ಯಾದಿ ಗೋತ್ರನಾಮಗಳನ್ನು ಹೇಳಲಾಗುತ್ತದೆ' ಎಂಬ ಮಾಹಿತಿಯನ್ನು ಸಂಶೋಧಕ ಡಾ॥ ಎಂ. ಎಂ. ಕಲಬುರ್ಗಿ ಹೇಳುತ್ತಾರೆ.

'ಆಗಮಿಕ ಶೈವದ ಕಾಳಾಮುಖ (ನಕುಲೀಶ), ಕಾಪಾಲಿಕ, ಪಾಶುಪತ, ಶುದ್ಧಶೈವಗಳೆಂಬ ನಾಲ್ಕು ಪರಂಪರೆಗಳಲ್ಲಿ ಬಸವೇಶ್ವರ ಶುದ್ಧಶೈವ ಪರಂಪರೆಗೆ ಸೇರಿದವರು.' ಜನಿವಾರ ಸಂಸ್ಕೃತಿಯನ್ನು ಧಿಕ್ಕರಿಸಿ ಬಸವಣ್ಣ ಲಿಂಗಾಯತ ಎಂಬ ಶುದ್ಧ ಮಾನವ ಧರ್ಮವನ್ನು ಕೂಡಲಸಂಗಮದ ಅನುಭವ ಮಂಟಪದ ಮೂಲಕ ತೆರೆದಿಡುತ್ತಾರೆ. ಈ ಶುದ್ಧಿಯ ಚಳುವಳಿ ಬಸವಣ್ಣನ ಕಾಲಾನಂತರ ಅಥವಾ ಬಸವಾದಿ ಪ್ರಮಥರ ಅಂತ್ಯದೊಂದಿಗೆ ಹಿಮ್ಮೆಟ್ಟಿಹೋಗುತ್ತದೆ. 'ಶರಣ ಚಳುವಳಿಯ ರಭಸ ಕಡಿಮೆಯಾಗುತ್ತಲೇ ೧೩-೧೪ನೆಯ ಶತಮಾನದಲ್ಲಿ ಪಂಚಾಚಾರ್ಯರು ತಮ್ಮ ಆಚಾರ್ಯ ಸಂಸ್ಕೃತಿಯನ್ನು ಇದರಲ್ಲಿ ಮಿಶ್ರಣಗೊಳಿಸಿದರು. ಈಗ ಲಿಂಗಾಯತಕ್ಕೆ ಪ್ರತಿಯಾಗಿ ವೀರಶೈವ ಎಂಬ ಧರ್ಮನಾಮವನ್ನು, ಜನಭಾಷೆಯ ವಚನಸಾಹಿತ್ಯಕ್ಕೆ ಪ್ರತಿಯಾಗಿ ಸಂಸ್ಕೃತ ಭಾಷೆಯ ಸಿದ್ಧಾಂತಶಿಖಾಮಣಿಯೆಂಬ ಧರ್ಮಗ್ರಂಥವನ್ನು, ಜಗದ್ಗುರು ಅಲ್ಲಮಪೀಠ ಪರಂಪರೆಗೆ ಪ್ರತಿಯಾಗಿ ರೇಣುಕ ಇತ್ಯಾದಿ ಜಗದಾಚಾರ್ಯ (ಚತುರಾಚಾರ್ಯ-ಪಂಚಾಚಾರ್ಯ) ಪೀಠಪರಂಪರೆಯನ್ನು ಹುಟ್ಟುಹಾಕಿದರು. ಹದಿನೈದನೆಯ ಶತಮಾನದಲ್ಲಿ ವಿಜಯನಗರದ ಪ್ರೌಢದೇವರಾಯನ ರಾಜಾಶ್ರಯ ಸಿಗುತ್ತಲೇ ಲಿಂಗಾಯತವನ್ನು ವೀರಶೈವೀಕರಣಗೊಳಿಸುತ್ತ ನಡೆದರು. ಈಗ ವೀರಭದ್ರನ ಆರಾಧನೆಯ ಮೂಲಕ ವೀರವ್ರತ ಹಿಡಿಯುವವರು ವೀರಶೈವರೆಂದು ಕರೆದುಕೊಂಡರು. ಆ ಪದವನ್ನು ಲಿಂಗಾಯತಕ್ಕೆ ಪ್ರತಿಯಾಗಿ ಬಳಸತೊಡಗಿದರು' ಎಂದು ಕಲಬುರ್ಗಿಯವರು ಸಾದ್ಯಂತವಾಗಿ ವಿವರಿಸುತ್ತಾರೆ.

ಬಸವಾದಿ ಪ್ರಮಥರು ಸಂಸ್ಕೃತ ಮೂಲದ ವೇದೋಪನಿಷತ್ತುಗಳನ್ನು ಅಧ್ಯಯನ ಮಾಡಿರುವುದು ಮತ್ತು ಅವುಗಳ ಪ್ರಭಾವ ಅವರ ವಚನಗಳ ಮೇಲೆ ಆಗಿರುವುದು ನಿಜ. ಹಾಗೆಂದ ಮಾತ್ರಕ್ಕೆ ಅವರು ಸನಾತನ ಶೈವರು ಎಂದು ತಿಳಿಯುವುದು ಕರ್ಮಠ ಸಂಸ್ಕೃತಿಯ ಯಜಮಾನಿಕೆಯನ್ನು ಹೇರುವವರ ಭ್ರಮೆ. ವೇದೋಪನಿಷತ್ತುಗಳು ಮನುಷ್ಯ ಮನುಷ್ಯರ ನಡುವೆ ತರತಮವನ್ನು, ದೇವರು ಮತ್ತು ಭಕ್ತನ ನಡುವೆ ಮಧ್ಯವರ್ತಿಗಳನ್ನು ಹುಟ್ಟುಹಾಕಿ ಶೋಷಣೆಯ ಸಮಾಜವನ್ನು ನಿರ್ಮಾಣ ಮಾಡಿವೆ. ಅದನ್ನು ಧಿಕ್ಕರಿಸಿ, ಜನಿವಾರ ಕಿತ್ತುಹಾಕಿ ಮಾನವಧರ್ಮವನ್ನು ಅಪ್ಪಿಕೊಂಡವರು ಬಸವಣ್ಣ. ಜಾತಿ ವಿನಾಶ, ಸಾಮಾಜಿಕ ಸಮಾನತೆ, ದಾಸೋಹ ಪರಂಪರೆಯ ಲೋಕಾನುಭವವನ್ನು ತಮ್ಮ ವಚನಗಳ ಮೂಲಕ ನಾಡಿಗೆ ಕೊಟ್ಟರು. ಹೀಗಾಗಿ ವೀರಶೈವದ ಹಾದಿಯೇ ಬೇರೆ, ಲಿಂಗಾಯತದ ದಾರಿಯೇ ಬೇರೆ. ಇರುವೆಗಳು ಕಟ್ಟಿದ ಲಿಂಗಾಯತವೆಂಬ ಹುತ್ತದಲ್ಲಿ ವೀರಶೈವ ಎಂಬ ಸರ್ಪಗಳು ಸೇರಿಕೊಂಡು ಮತ್ತೆ ಆ ಹುತ್ತವನ್ನು ಮಠವಾಗಿಸಿವೆ.

'ಸಿದ್ಧಾಂತ ಶಿಖಾಮಣಿ' ವಚನಗಳಿಗಿಂತ ಪ್ರಾಚೀನ ಮತ್ತು ವಚನಗಳಿಗೆ ಅದುವೇ ಆಧಾರ ಎಂದು ಹೇಳುವವರು 'ಸಿದ್ಧಾಂತ ಶಿಖಾಮಣಿ' ಕೃತಿ ರಚನೆಯ ಕಾಲ ಮತ್ತು ಕೃತಿಕಾರನ ಕುರಿತು ಸಾದ್ಯಂತ ಸಾಕ್ಷ್ಯ ಒದಗಿಸಬೇಕಾಗುತ್ತದೆ. ಈ ಕೃತಿಯ ರಚನೆ ಮಾಡಿದವರು ಶಿವಯೋಗಿ ಶಿವಾಚಾರ್ಯರೆಂದು, ಅವರು ಕ್ರಿ.ಶ. ಸುಮಾರು ೮ನೇ ಶತಮಾನದಲ್ಲಿ ಇದ್ದರೆಂದು ಹೇಳಲಾಗುತ್ತಿದೆ. ಆದರೆ ಆ ಕುರಿತು ಪ್ರಾಚೀನ ಕನ್ನಡ ಸಾಹಿತ್ಯದಲ್ಲಾಗಲಿ, ಸಂಸ್ಕೃತ ಸಾಹಿತ್ಯದಲ್ಲಾಗಲಿ ಅವರ ಇರುವಿಕೆಯ ಬಗ್ಗೆ, ಅವರ ವೈಯಕ್ತಿಕ ಜೀವನದ ಬಗ್ಗೆ ಎಲ್ಲಿಯೂ ಮಾಹಿತಿ ಸಿಗುವದಿಲ್ಲ. 'ಸಿದ್ಧಾಂತ ಶಿಖಾಮಣಿ' ಎಲ್ಲ ವಚನಕಾರರಿಗೆ ಮೂಲ, ಬಸವಣ್ಣ ಅಲ್ಲಿಯ ಶ್ಲೋಕಗಳನ್ನು ತನ್ನ ವಚನಗಳಲ್ಲಿ ಬಳಸಿದ್ದಾನೆ ಎಂದು ಪಂಚಾಚಾರ್ಯರು ಸಮರ್ಥಿಸಿಕೊಳ್ಳುತ್ತಾರೆ. ಆದರೆ ಸಂಸ್ಕೃತದ ನೂರಾರು ಪ್ರಾಚೀನ ಶ್ಲೋಕಗಳನ್ನು ಬಳಸಿಕೊಂಡು ಸಂಸ್ಕೃತದಲ್ಲಿಯೇ 'ಸಿದ್ಧಾಂತ ಶಿಖಾಮಣಿ'ಯನ್ನು ರಚಿಸಲಾಗಿದೆ. ಇದು ರೇಣುಕ - ಅಗಸ್ತ್ಯರ ನಡುವಿನ ಸಂಭಾಷಣೆಯ ರೂಪದಲ್ಲಿದೆ. ಇದು ಶಿವಾಗಮಗಳ ಸಾರಾಂಶದಂತೆ ರಚನೆಯಾಗಿದೆ. ಅದಕ್ಕೆ ಪೂರಕವಾಗಿ ಈ ಶ್ಲೋಕವನ್ನು ನೋಡಬಹುದು:

*ಸಿದ್ಧಾನ್ತಾಖ್ಯೇ ಮಹಾತಂತ್ರೇಕಾಮಿಕಾದ್ಯೇ ಶಿವೋದಿತೇ ।*
*ನಿರ್ದಿಷ್ಟಮುತ್ತರೇ ಭಾಗೇ ವೀರಶೈವ ಮತಂ ಪರಮ್ ॥*

ರಾಮಾಯಣ ಕಾಲದಲ್ಲಿ ರೇಣುಕ ಜಗದ್ಗುರುಗಳು ಅಗಸ್ತ್ಯರಿಗೆ ಬೋಧಿಸಿದ ತತ್ವವನ್ನು ಶಿವಯೋಗಿ ಶಿವಾಚಾರ್ಯರು ಇಲ್ಲಿ ಕೃತಿಯಾಗಿ ರಚಿಸಿದರೆಂದು ಹೇಳಲಾಗಿದೆ. ಎಲ್ಲಿಯ ಅಗಸ್ತ್ಯ, ಎಲ್ಲಿಯ ರಾಮಾಯಣ, ಎಲ್ಲಿಯ ರೇಣುಕ, ಎಲ್ಲಿಯ ನೂರೊಂದು ಸ್ಥಲಸಿದ್ಧಾಂತ? ಇವನ್ನೆಲ್ಲ ಗಮನಿಸಿದರೆ ಇದೊಂದು ಕಟ್ಟುಕಥೆ ಎಂಬುದು ದಿಟವಾಗುತ್ತದೆ. ಈ ಕೃತಿ ಬಸವೋತ್ತರ ಕಾಲ, ಅಂದರೆ ೧೩-೧೬ನೆಯ ಶತಮಾನದಲ್ಲಿ ರಚನೆಯಾಗಿದೆ ಎಂಬುದು ಈಗ ಸಂಶೋಧನೆಯಿಂದ ಸಾಬೀತಾಗಿದೆ.

ಮಠೀಯ ಪರಂಪರೆಯನ್ನು, ಶ್ರೇಷ್ಠ-ಕನಿಷ್ಠ ಎಂಬ ತಾರತಮ್ಯವನ್ನು ಧಿಕ್ಕರಿಸಿ ಸಮಾನತೆಯ ಸಮಾಜವನ್ನು ಕಟ್ಟಲು ಹೊರಟ ಬಸವಣ್ಣನ ಕ್ರಾಂತಿ ಅವರ ಪೀಠಗಳನ್ನು, ಗದ್ದುಗೆಗಳನ್ನು ಅಲ್ಲಾಡಿಸಿತು. ಕಳೆದುಹೋಗುತ್ತಿದ್ದ ಧಾರ್ಮಿಕ ಪ್ರಭುತ್ವವನ್ನು ಮರುಸ್ಥಾಪಿಸಿಕೊಳ್ಳಲು ಪಂಚಪೀಠದವರು 'ಸಿದ್ಧಾಂತ ಶಿಖಾಮಣಿ' ಎಂಬ ಗ್ರಂಥವನ್ನು ೧೩-೧೬ನೆಯ ಶತಮಾನದಲ್ಲಿ ರಚಿಸಿ, ಅದಕ್ಕೆ ಪ್ರಾಚೀನತೆಯ ಲೇಪವನ್ನು ಕೊಡುತ್ತಿದ್ದಾರೆ. ಬಸವಣ್ಣನಿಗಿಂತ ಮುಂಚೆಯೇ ಅದು ರಚಿತವಾಗಿದ್ದಲ್ಲಿ ಅದಕ್ಕೆ ಪೂರಕವಾದ ಪುರಾವೆಗಳನ್ನು ಅವರು ನೀಡಬೇಕಾಗುತ್ತದೆ.

ಹೀಗಾಗಿ ಲಿಂಗಾಯತ ಧರ್ಮಕ್ಕೆ ಬಸವಣ್ಣನೇ ಆದಿ, ವಚನಗಳೇ ಧರ್ಮಗ್ರಂಥ ಎಂಬುದನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಕಲ್ಪಿತ ಸಾಮ್ರಾಜ್ಯವನ್ನು ಕಟ್ಟಿಕೊಂಡು ಎಷ್ಟು ದಿನ ಮೆರೆಯಲು ಸಾಧ್ಯ? ಎಲ್ಲ ಸುಳ್ಳುಗಳನ್ನು, ಮೌಢ್ಯಗಳನ್ನು ಧಿಕ್ಕರಿಸಲು ಮತ್ತೊಂದು ಕ್ರಾಂತಿ ಆರಂಭವಾಗಬೇಕಾಗಿದೆ. ಸುಳ್ಳನ್ನೇ ಸತ್ಯವೆಂದು ಪ್ರತಿಪಾದಿಸುವ ಕೃತಿಗಳ ಸಾವಿರಾರು, ಲಕ್ಷಾಂತರ ಪ್ರತಿಗಳು ಮುದ್ರಣಗೊಂಡು ಪ್ರಸರಣಗೊಳ್ಳುವುದರಿಂದ ಸಾಮಾನ್ಯ ಓದುಗನಿಗೆ ಈ ಕೃತಿಗಳಲ್ಲಿಯ ವಿಷಯವೇ ಸತ್ಯವೆಂದು ಭಾವಿಸಿಕೊಳ್ಳುವ ಸಾಧ್ಯತೆ ಇರುತ್ತದೆ.

**ವೀರಶೈವ V/s ಲಿಂಗಾಯತ:** ಆಗಲೇ ಹೇಳಿದಂತೆ ವೀರಶೈವ ಧರ್ಮವು ಸನಾತನ ಶೈವಧರ್ಮದ ಒಂದು ಶಾಖೆಯಾಗಿ ಬೆಳೆದುಬಂದಿದೆ. ವೇದ, ಆಗಮ, ಉಪನಿಷತ್, ಭಾಷ್ಯ ಹಾಗೂ ಸ್ಕಂದ ಪುರಾಣಗಳು ವೀರಶೈವ ಧರ್ಮದ ಮೂಲ ಸೂತ್ರಗಳು. ಆದರೆ ಬಸವಣ್ಣ,



*ಶಾಸ್ತ್ರ ಘನವೆಂಬೆನೆ? ಕರ್ಮವ ಭಜಿಸುತ್ತಿದೆ!*
*ವೇದ ಘನವೆಂಬೆನೆ? ಪ್ರಾಣಿವಧೆ ಹೇಳುತ್ತಿದೆ!*
*ಶ್ರುತಿ ಘನವೆಂಬೆನೆ? ಮುಂದಿಟ್ಟರಸುತ್ತಿದೆ!*
*ಅಲ್ಲಿಯೂ ನೀವಿಲ್ಲದ ಕಾರಣ,*
*ತ್ರಿವಿಧ ದಾಸೋಹದಲ್ಲಲ್ಲದೆ ಕಾಣಬಾರದು*
*ಕೂಡಲಸಂಗಮದೇವನ.*

- ಎಂದು ಗುರು - ವಿರಕ್ತ ಭೇದ ಮಾಡುವ, ಜಾತಿ ಭೇದ ಮಾಡುವ ಧರ್ಮವನ್ನು ಅವರು ತಿರಸ್ಕರಿಸುತ್ತಾರೆ. ಮಠ - ದೇವಸ್ಥಾನ, ಹೋಮ - ಹವನ, ಮೂರ್ತಿಪೂಜೆಗಳನ್ನು ಖಂಡಿಸುವ ಬಸವಣ್ಣ ಕಾಯಕ, ಪ್ರಸಾದ, ದಾಸೋಹ ಹಾಗೂ ಇಷ್ಟಲಿಂಗ ಪೂಜೆಯನ್ನು ಸಾರುತ್ತಾರೆ. 'ಅಂಗದ ಮೇಲೆ ಲಿಂಗವಿರುವ ನಮ್ಮ ಸಂಗನ ಶರಣರೇ ಕುಲಜರು' ಎನ್ನುತ್ತಾರೆ.

ಬಸವಣ್ಣ ಲಿಂಗಾಯತ ಧರ್ಮ ಮತ್ತು ವೀರಶೈವ ಧರ್ಮ ಹೇಗೆ ಒಂದಕ್ಕೊಂದು ತದ್ವಿರುದ್ಧ ಎಂಬುದನ್ನು

ಈ ಕೆಳಗಿನ ಅಂಶಗಳಿಂದ ನಾವು ಮನಗಾಣಬಹುದು :

೧. ಲಿಂಗಾಯತರು ಏಕದೇವೋಪಾಸಕರು. ಅಂದರೆ ಇಷ್ಟಲಿಂಗವೇ ಅವರ ದೇವರು. ಇಷ್ಟಲಿಂಗವೆಂದರೆ ಅದು ಅಗಮ್ಯ, ಅಗೋಚರ, ಅಪ್ರತಿಮ ಮತ್ತು ಅಪ್ರಮಾಣ ಚೈತನ್ಯ. ಆದರೆ ವೀರಶೈವರು ಮೂರ್ತಿ ಪೂಜಕರು ಹಾಗೂ ಬಹುದೇವೋಪಾಸಕರು.

೨. ಲಿಂಗಾಯತರು ಮೂಢನಂಬಿಕೆಗಳಾದ ಜ್ಯೋತಿಷ್ಯ, ಪಂಚಾಂಗಗಳನ್ನು ನಂಬುವದಿಲ್ಲ. ವೀರಶೈವರು ನಂಬುತ್ತಾರೆ.

೩. ಲಿಂಗಾಯತರಲ್ಲಿ ಹೋಮ ಹವನ ವೇದಘೋಷ ಇಲ್ಲ. ವೀರಶೈವರಲ್ಲಿ ಇದೆ.

೪. ಲಿಂಗಾಯತರದು ಕಾಯಕ ಸಿದ್ಧಾಂತ. ವೀರಶೈವರದು ಕರ್ಮ ಸಿದ್ಧಾಂತ.

೫. ಲಿಂಗಾಯತರಿಗೆ ಆಚಾರವೇ ಸ್ವರ್ಗ, ಅನಾಚಾರವೇ ನರಕ. ವೀರಶೈವರು ಸ್ವರ್ಗ, ನರಕಗಳನ್ನು ನಂಬುತ್ತಾರೆ.

೬. ಲಿಂಗಾಯತರಲ್ಲಿ ಜಾತಿ ವ್ಯವಸ್ಥೆಯಿಲ್ಲ. ವೀರಶೈವದಲ್ಲಿ ಜಾತಿ ವ್ಯವಸ್ಥೆ ಇದೆ. ಜಾತಿ ಜಂಗಮರು ಮಧ್ಯವರ್ತಿಗಳು.

೭. ಲಿಂಗಾಯತರಲ್ಲಿ ೭೭೦ ಅಮರಗಣಂಗಳು (ಅಂದರೆ ಎಲ್ಲ ಕಾಯಕದವರು) ಗುರುಗಳು. ಪಾದ ಪೂಜೆಯೆಂಬ ದಾಸ್ಯ, ಅಡ್ಡಪಲ್ಲಕ್ಕಿ ಎಂಬ ಮನುಷ್ಯರೇ ಮನುಷ್ಯನನ್ನು ಹೆಗಲ ಮೇಲೆ ಹೊರುವ ದಾಸ್ಯ-ಉತ್ಸವವಿಲ್ಲ. ಆದರೆ ವೀರಶೈವದಲ್ಲಿ ಇವೆಲ್ಲ ಇವೆ. ಅದಕ್ಕೆ ಪಂಚಾಚಾರ್ಯರೇ ಗುರುಗಳು.

೮. ಜಂಗಮರು/ಅಯ್ಯನವರು ಎಂದು ಹೇಳಿಕೊಳ್ಳುವ ಪಂಚಾಚಾರ್ಯರು ತಮ್ಮ ಪಾದೋದಕದಿಂದ (ಪಾದವನ್ನು ಭಕ್ತರು ತೊಳೆದ ನೀರು) ಭಕ್ತರು ತಮ್ಮ ಕೊರಳಲ್ಲಿನ ಲಿಂಗವನ್ನು ತೊಳೆದು ಪೂಜೆ ಮಾಡಿಕೊಳ್ಳಬೇಕು. ಉಳಿದ ಪಾದೋದಕವನ್ನು ಕುಡಿಯಬೇಕು ಎಂದು ಆಜ್ಞೆ ಮಾಡುತ್ತಾರೆ. ಆದರೆ ಲಿಂಗಾಯತದಲ್ಲಿ ಇಂತಹ ಆಚರಣೆಗೆ ಅವಕಾಶವಿಲ್ಲ.

೯. ಲಿಂಗಾಯತರಿಗೆ ಪಂಚಸೂತಕಗಳಿಲ್ಲ. ವೀರಶೈವರಿಗೆ ಪಂಚಸೂತಕಗಳಿವೆ.

೧೦. ಲಿಂಗಾಯತವೆಂಬುದು ಶಿವಾದ್ವೈತ (ಆತ್ಮಲಿಂಗ/ಇಷ್ಟಲಿಂಗವೇ ಶಿವ). ಆದರೆ ಶಿವ, ಪಾರ್ವತಿ, ಗಂಗೆ, ಕೈಲಾಸ ಮುಂತಾದುವನ್ನು ನಂಬುವ ವೀರಶೈವವು ಶಕ್ತಿವಿಶಿಷ್ಟಾದ್ವೈತ ಪಂಥ.

೧೧. ವೀರಶೈವವು ಪುರಾಣವನ್ನು ಪಠಿಸುತ್ತದೆ. ಲಿಂಗಾಯತವು ವಚನವನ್ನು ಪಠಿಸುತ್ತದೆ.

೧೨. ಲಿಂಗಾಯತ ಮೊದಲ ದಲಿತ ಧರ್ಮ. ವೀರಶೈವ ವೇದಾಗಮ ಧರ್ಮ.

೧೩. ಲಿಂಗಾಯತ ಮಹಿಳಾ ಮತ್ತು ಕಾರ್ಮಿಕ ಧರ್ಮ. ವೀರಶೈವ ಕುಲೀನ ಧರ್ಮ.

-ಹೀಗೆ ಹಲವಾರು ವೈರುಧ್ಯಗಳನ್ನು ಪಟ್ಟಿಮಾಡುತ್ತ ಹೋಗಬಹುದು.

ಯಾರು ಲಿಂಗಾಯತರು ? ಈ ಎಲ್ಲ ಮೇಲಿನ ಅಂಶಗಳನ್ನು ಗಮನಿಸಿದರೆ ಸದ್ಯ ಲಿಂಗಾಯತರೆಂದರೆ ಯಾರು ಎಂಬ ಪ್ರಶ್ನೆ ಮೂಡುತ್ತದೆ. ಏಕೆಂದರೆ, ಲಿಂಗಾಯತರು ಎಂದು ಹೇಳಿಕೊಳ್ಳುವವರು ಬಸವಣ್ಣ ಹೇಳಿದ ಹಾಗೂ ಆಚರಿಸಿದ ತತ್ವಗಳನ್ನು ಆಚರಿಸುತ್ತಿಲ್ಲ. 'ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ' ಎಂದು ಮೂರ್ತಿ ಪೂಜೆ ಧಿಕ್ಕರಿಸಿದ ಬಸವಣ್ಣನನ್ನೇ ಸ್ಥಾವರ ಮಾಡಿ ಪೂಜಿಸಲಾಗುತ್ತಿದೆ.

*ವೇದಕ್ಕೆ ಒರೆಯ ಕಟ್ಟುವೆ !*
*ಶಾಸ್ತ್ರಕ್ಕೆ ನಿಗಳವನಿಕ್ಕುವೆ !* (ನಿಗಳ=ಅಗಳಿ, ಸಂಕೋಲೆ)
*ತರ್ಕದ ಬೆನ್ನ ಬಾರನೆತ್ತುವೆ !* (ಬಾರ=ಚರ್ಮ)
*ಆಗಮದ ಮೂಗ ಕೊಯ್ವೆ !*
*ನೋಡಯ್ಯ ಮಹಾದಾನಿ ಕೂಡಲಸಂಗಮದೇವ,*
*ಮಾದಾರ ಚೆನ್ನಯ್ಯನ ಮನೆಯ ಮಗ ನಾನಯ್ಯ !*

- ಎಂದು ಹೇಳಿದ ಬಸವಣ್ಣ ಅದೆಂತಹ ಉದಾತ್ತ ತತ್ವವನ್ನು ಈ ನಾಡಿಗೆ ಕೊಟ್ಟು ಹೋದ !!! ಆದರೆ ಬಸವಣ್ಣನ ಧರ್ಮದವರು ತಾವು ಎಂದು ಹೇಳಿ ಕೊಳ್ಳುವವರು ಅದೇ ವೇದಾಗಮ ಶಾಸ್ತ್ರಗಳ ದಾಸರಾಗಿರುವುದು ದೊಡ್ಡ ದುರಂತ. ಜಾತಿಮತಗಳ ಸಂಕೋಲೆಯಲ್ಲಿ ಸಿಕ್ಕಿ ಪಂಗಡ ಒಳ ಪಂಗಡಗಳನ್ನು ಕಟ್ಟಿಕೊಂಡು ಬಡಿದಾಡುತ್ತಿರುವುದು ಇನ್ನೂ ದೊಡ್ಡ ವಿಪರ್ಯಾಸ.

**ಅಭಿನಂದನೆ....**

ಧಾರವಾಡದ ದ. ರಾ. ಬೇಂದ್ರೆ ರಾಷ್ಟ್ರೀಯ ಸ್ಮಾರಕ ಟ್ರಸ್ಟ್‌ನವರು ಕೊಡಮಾಡುವ ೨೦೧೭ನೇ ಸಾಲಿನ 'ಅಂಬಿಕಾತನಯದತ್ತ' ರಾಷ್ಟ್ರೀಯ ಪ್ರಶಸ್ತಿಯು ಭಾಷಾತಜ್ಞ, ಕುವೆಂಪು ಭಾಷಾ ಭಾರತಿ ಪ್ರಾಧಿಕಾರದ ಅಧ್ಯಕ್ಷ ಡಾ॥ ಕೆ. ವಿ. ನಾರಾಯಣ ಅವರಿಗೆ ಲಭಿಸಿದೆ. ಇವರಿಗೆ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ಅಭಿನಂದನೆಗಳು.

ಹೀಗಾಗಿ, ವಿಶ್ವ ಗುರು ಬಸವಣ್ಣ ಸ್ಥಾಪಿಸಿದ ಲಿಂಗಾಯತ ಸಮಾಜವು ಇಂದು ಮತ್ತೆ ವರ್ಣಾಶ್ರಮದ ಕರ್ಮಠ ಆಚರಣೆಗಳಿಗೆ ಬಲಿಯಾಗುತ್ತಿದೆ. ವೃತ್ತಿ ಸೂಚಕಗಳಾದ ಜಂಗಮ, ಬಣಜಿಗ, ಪಂಚಮಶಾಲಿ, ಗಾಣಿಗ, ಸಾದರ, ರೆಡ್ಡಿ, ಹಡಪದ, ಸಿಂಪಿಗ, ಕುಂಬಾರ, ಕಂಬಾರ ಮುಂತಾದವುಗಳು ಇಂದು ಜಾತಿ ಸೂಚಕಗಳಾಗಿ ಪರಿವರ್ತನೆಗೊಂಡು ಸಾಮಾಜಿಕ ಸಮಾನತೆಯನ್ನು ತರದೆ, ಸಾಮಾಜಿಕ ವಿಘಟನೆ ಹಾಗೂ ಸಂಘರ್ಷಕ್ಕೆ ದಾರಿ ಮಾಡಿಕೊಡುತ್ತಿವೆ.

*ಕುಲಮದವಳಿಯದನ್ನಕ ಶರಣನಾಗಲೇಕೆ ?*
*ವಿಧಿವಶ ಬಿಡದನ್ನಕ ಭಕ್ತನಾಗಲೇಕೆ ?*
*ಹಮ್ಮಿನ ಸೊಮ್ಮಿನ ಸಂಬಂಧ ಬಿಟ್ಟು,*
*ಕಿಂಕರರ ಕಿಂಕರನಾಗಿರಬೇಕು.*

'ಎನಗಿಂತ ಕಿರಿಯರಿಲ್ಲ, ಶಿವಶರಣರಿಗಿಂತ ಹಿರಿಯರಿಲ್ಲ' ಎಂದು ಹೇಳಿದ ಬಸವಣ್ಣ ಮೇಲು ಜಾತಿ ಕೀಳು ಜಾತಿ ಎಂದು ಭಾವಿಸದೆ 'ಅಂಗದ ಮೇಲೆ ಲಿಂಗವಿರುವ ಎಲ್ಲರೂ ಸಂಗನ ಶರಣರೇ' ಎಂದು ಹೇಳಿದರು.

ಈ ಕಾರಣಕ್ಕಾಗಿಯೇ ಮದುವರಸನ ಮಗಳಿಗೂ ಮತ್ತು ಹರಳಯ್ಯನ ಮಗನಿಗೂ ಅಂತರ್ಜಾತೀಯ ವಿವಾಹ ಮಾಡಿಸಿ ಜಾತಿ ಸಂಕೋಲೆಯನ್ನು ಕಿತ್ತೆಸೆದು ಲಿಂಗಾಯತರೆಲ್ಲರೂ ಹಿಂದೂ ಧರ್ಮದ ಕಟ್ಟುಪಾಡುಗಳ ಹೊರತಾದ ಒಂದು ಸ್ವಾಸ್ಥ್ಯ ಮತ್ತು ಸಮಾನತೆಯ ಸಮಾಜವನ್ನು ಕಟ್ಟಬೇಕೆಂದು ಬಸವೇಶ್ವರ ಬಯಸಿದ್ದ. ಆದರೆ, ಲಿಂಗಾಯತ ತತ್ವಗಳಿಗೆ ತಿಲಾಂಜಲಿ ಇತ್ತು ಮತ್ತೆ ಹಿಂದೂಧರ್ಮದ ಜಾತಿ ತಾರತಮ್ಯದ ಬದುಕನ್ನು ಆಚರಿಸುತ್ತಿದ್ದೇವೆ. ಅಧಿಕಾರ-ಗದ್ದುಗೆ, ಉನ್ನತ ಪೀಠ-ಸಿಂಹಾಸನ ಬಯಸುವವರು ಮತ್ತೆ ಅಸ್ಪೃಶ್ಯತೆಯ ಸಮಾಜವನ್ನು ನಿರ್ಮಾಣ ಮಾಡಲು ಹೊರಟಿದ್ದಾರೆ.

ಅಂತ್ಯಜರ ಕೇರಿಗಳಿಗೆ ಹೋಗಿ ಸಹಭೋಜನ ಮಾಡುತ್ತಿದ್ದ ಬಸವಣ್ಣನಿಗೆ ಇಂದು ಊರ ತುಂಬ ಗುಡಿಗಳನ್ನು ಕಟ್ಟಿದ್ದೇವೆ. ಆದರೆ ಅವುಗಳಿಗೆ ಅಂತ್ಯಜರ ಪ್ರವೇಶವನ್ನು ನಿರಾಕರಿಸಿದ್ದೇವೆ ! ಅಂದ ಮೇಲೆ ಅಂತಹ ದೇವಾಲಯಗಳಲ್ಲಿ ಬಸವಣ್ಣ ಬಂದು ಹೇಗೆ ನೆಲೆಸಿಯಾನು ? ಯಾರನ್ನು ತನ್ನವರು ಎಂದು ಬಸವಣ್ಣ ಎದೆಗೆ ಅಪ್ಪಿಕೊಂಡಿದ್ದನೋ ಅದೇ ದಲಿತರ ಮೇಲೆ ಧರ್ಮದ ಹೆಸರಿನಲ್ಲಿ ಲಿಂಗಾಯತರು ದಬ್ಬಾಳಿಕೆ ಮಾಡುತ್ತಿದ್ದಾರೆ.

ಒಂದು ಕಾಲದಲ್ಲಿ ಬಸವತತ್ವವನ್ನು ಆಲಂಗಿಸಿಕೊಳ್ಳುವ ಮೂಲಕ ಈ ಸಮಾಜದ ಶೂದ್ರಾತಿಶೂದ್ರ ವ್ಯಕ್ತಿ ಜಾತಿ ಅವಮಾನದ ಸಂಕೋಲೆಯಿಂದ ಹೊರಬಂದು ಸ್ವಾಭಿಮಾನದ ಬದುಕಿನ ಕನಸನ್ನು ಕಂಡುಕೊಂಡ. ಇಂದು ಲಿಂಗಾಯತವನ್ನು ಸ್ವೀಕರಿಸಿದ್ದರಿಂದ ತನಗೆ ಲಭಿಸಬಹುದಾಗಿದ್ದ ಜಾತಿ ಮೀಸಲಾತಿಯಿಂದ ತಾವು ವಂಚಿತರಾಗಿ ಅತ್ತ ಸಹಬಾಳ್ವೆಯೂ ಇಲ್ಲದೆ, ಇತ್ತ ಸೌಲಭ್ಯವೂ ಇಲ್ಲದೆ, ತ್ರಿಶಂಕು ಸ್ಥಿತಿಯನ್ನು ಅನುಭವಿಸುತ್ತಿದ್ದಾನೆ. ಇಂತಹ ಶೋಷಣೆಯನ್ನು ತಾರತಮ್ಯವನ್ನು ಅಸ್ಪೃಶ್ಯತೆಯನ್ನು ಬಸವಣ್ಣ ಹೇಳಿದ್ದನೆ ? ವೀರಶೈವ ಮತ್ತೆ ತನ್ನ ಕರ್ಮಠ ಬಾಹುಗಳನ್ನು ಚಾಚಿ ವರ್ಣಾಶ್ರಮ ಪರಂಪರೆಯನ್ನು ಹಬ್ಬಿಸುತ್ತಿದೆ. ಅದಕ್ಕೆ ಬಸವ ಮತದವರು ತುಪ್ಪ ಹಾಕಿ ಬೆಳಗಿಸುತ್ತಿದ್ದಾರೆ ! ವೀರಶೈವ - ಲಿಂಗಾಯತ ಎಂಬುವು ತಮ್ಮ ತಮ್ಮ ಪೀಠಗಳನ್ನು ಗಟ್ಟಿಗೊಳಿಸಿಕೊಳ್ಳಲು ಜಗದ್ಗುರುಗಳು ಪ್ರಯೋಗಿಸುತ್ತಿರುವ ಅಸ್ತ್ರಗಳು ಮಾತ್ರ. ಅದರಿಂದ ನಿತ್ಯದ ಬವಣೆಯಲ್ಲಿ ಬೇಯುತ್ತಿರುವ ಶ್ರೀಸಾಮಾನ್ಯನಿಗೆ ಏನು ಪ್ರಯೋಜನ?

*ಆದ್ದರಿಂದ ಬಸವ ಗುರುವಿನ ಹೆಸರ ಬಲ್ಲಾತರಾರಿಲ್ಲ ?*
*ಹುಸಿಮಾತನಾಡಿ ಕೆಡಬೇಡಿ । ಲಿಂಗಾಯತಕ್ಕೆ*
*ಬಸವಣ್ಣನೇ ಕರ್ತೃ ಸರ್ವಜ್ಞ ॥*

- ಎಂಬುದನ್ನು ಒಪ್ಪಿಕೊಂಡು ಬಸವಣ್ಣ ತೋರಿದ ದಾರಿಯಲ್ಲಿ ವೀರಶೈವರು - ಲಿಂಗಾಯತರು, ಎಲ್ಲರೂ ನಡೆಯಬೇಕಾಗಿದೆ.

**ಡಾ॥ ಮಲ್ಲಿಕಾರ್ಜುನ ಗುಮ್ಮಗೋಳ**
ಕೇರಾಫ್ : ಎಸ್. ಎಸ್. ಕುಲಕರ್ಣಿ, 'ಶಿವಗಿರಿ ನಿವಾಸ', ೨ನೇ ಅಡ್ಡರಸ್ತೆ, ಸಾಧನಕೇರಿ
ಧಾರವಾಡ - ೫೮೦ ೦೦೮



# ಶುಕ್ರಗ್ರಹದ ನಿರ್ಗಮನ

**ಸಂ**ಜೆಯ ಆಕಾಶದಲ್ಲಿ ಕಂಗೊಳಿಸುತ್ತಿರುವ ಶುಕ್ರ ಕಳೆದ ತಿಂಗಳು ಮಂಗಳದ ಜೊತೆಗೂಡಿತ್ತು. ಈ ತಿಂಗಳುದ್ದಕ್ಕೂ ಈ ಜೋಡಿಯನ್ನು ಗಮನಿಸಿ. ಒಂದನೆಯ ತಾರೀಖು ಅವೆರಡೂ ಸುಮಾರು ೧೦ ಡಿಗ್ರಿ ಅಂತರದಲ್ಲಿರುತ್ತವೆ. ಕ್ರಮೇಣ ದೂರವಾಗತೊಡಗುತ್ತವೆ. ಮಂಗಳಗ್ರಹ ದಿನದಿನಕ್ಕೆ ಮೇಲೆ ಏರುತ್ತಿದೆ ಅಥವಾ ಶುಕ್ರಗ್ರಹ ದಿನೇ ದಿನೇ ಕೆಳಗೆ ಇಳಿಯುತ್ತಿದೆ ಅನ್ನಿಸುತ್ತದೆ. ಇದು ಶುಕ್ರಗ್ರಹದ ಹಿನ್ನಡೆಯ ಸೂಚನೆ. ಮಂಗಳ ಮೀನದಿಂದ ಮೇಷದತ್ತ ಚಲಿಸುತ್ತದೆ. ಇದು ಸಾಧಾರಣವಾಗಿ ಕಂಡುಬರುವ ನಡೆ; ಮುನ್ನಡೆ ಎಂದು ಬೇರೆಯಾಗಿ ಹೇಳಬೇಕಿಲ್ಲ. ಆದರೆ ಶುಕ್ರ ಮೀನರಾಶಿಯಿಂದ ಮೇಷದತ್ತ ಚಲಿಸುವ ಬದಲು ಕುಂಭದ ದಿಕ್ಕಿಗೆ ಚಲಿಸುತ್ತದೆ. ೨ರಂದು ಈ ಹಿನ್ನಡೆ ಆರಂಭವಾಗುತ್ತದೆ. ಹೀಗೆ ಕುಂಭದ ಕಡೆಗೆ ಸಾಗುವ ಶುಕ್ರ ಸೂರ್ಯನನ್ನು ಸಮೀಪಿಸಿದಂತೆ ಕಾಣುತ್ತದೆ. ತಿಂಗಳ ಕೊನೆಗೆ ೨೫ರಂದು ಶುಕ್ರ ಸೂರ್ಯನೊಡನೆಯೇ ಉದಯಿಸಿ, ಕಂತುತ್ತದೆ. ಇದನ್ನು ಯುತಿ ಎಂದು ಗುರುತಿಸುತ್ತೇವೆ. ಸೂರ್ಯನ ಮುಂಭಾಗದಿಂದ ಹಾದುಹೋಗುವುದರಿಂದ ಇದಕ್ಕೆ ನೀಚ ಯುತಿ ಎಂಬ ಹೆಸರಿದೆ. ಆ ಮುಂದೆ ಅದು ಬೆಳಗಿನ ಜಾವದಲ್ಲಿ ಕಾಣುತ್ತದೆ.

ಬುಧ ಗ್ರಹ ಇದಕ್ಕೆ ಸ್ವಲ್ಪ ಮುಂಚೆ ಅಂದರೆ ೭ರಂದು ಸೂರ್ಯನ ಆಚೆ ಬದಿಯಿಂದ ಹಾದು ಬಂದಿದೆ. ಇದಕ್ಕೆ ಉಚ್ಚ ಯುತಿ ಎಂದು ಹೆಸರು. ಅಂದರೆ ಇಲ್ಲಿಯವರೆಗೂ ಸೂರ್ಯೋದಯಕ್ಕೆ ಮುಂಚೆ ಕಾಣುತ್ತಿದ್ದ ಬುಧ ಇನ್ನು ಮುಂದೆ ಸೂರ್ಯಾಸ್ತದ ನಂತರ ಸಂಜೆ ಕಾಣುತ್ತದೆ. ೧೬ರಂದು ಸಂಜೆ ಶುಕ್ರ–ಬುಧ ಇವೆರಡನ್ನೂ ದಿಗಂತದ ಅಂಚಿನಲ್ಲಿ ಕಾಣಬಹುದು. ಬುಧ ತಿಂಗಳ ಕೊನೆಯವರೆಗೂ ಕಾಣುವುದು.

ಗುರುಗ್ರಹ ಸುಮಾರು ೯ ಗಂಟೆಯ ನಂತರ ಉದಯಿಸಿ ಬೆಳಗಿನ ಜಾವದವರೆಗೂ ಕಾಣುತ್ತದೆ. ೧೪ರಂದು ರಾತ್ರಿ ಗುರು–ಚಂದ್ರ ಜೋಡಿಯನ್ನು ಗಮನಿಸಿ. ೧೫ರ ಬೆಳಗಿನ ಜಾವವೂ ಗಮನಿಸಿ. ಚಂದ್ರ ಗುರುಗ್ರಹದ ಸಮೀಪಕ್ಕೆ ಸರಿದಿರುವುದನ್ನು ಕಾಣಬಹುದು. ಗುರುವಿನ ಪಕ್ಕ ಇರುವ ಚುಕ್ಕೆಯೇ ಚಿತ್ರಾ ನಕ್ಷತ್ರ.



*೨೯ರ ಸಂಜೆ ಬುಧ – ಚಂದ್ರ ಜೋಡಿ*

೨೧ರಂದು ಚಂದ್ರನ ಪಕ್ಕ ಕಾಣುವ ಚುಕ್ಕೆಯೇ ಶನಿಗ್ರಹ. ಅದರ ಸುತ್ತಲೂ ಆಕಾಶಗಂಗೆಯ ಕೇಂದ್ರಭಾಗ ಹರಡಿದೆ. ಛಾಯಾಗ್ರಹಣಕ್ಕೆ ಸೂಕ್ತ ಅವಕಾಶ ಇದು. ಶನಿಗ್ರಹ ಇದೀಗ ಧನು ರಾಶಿಯನ್ನು ತಲುಪುತ್ತಿದೆ. ೨೦೧೬ರ ಉದ್ದಕ್ಕೂ ಮತ್ತು ಕಳೆದ ತಿಂಗಳವರೆಗೂ ಅದು ಒಫಿಯೂಕಸ್ (ಉರಗಧರ) ರಾಶಿಯಲ್ಲಿತ್ತು. ಈ ಪುಂಜ ರಾಶಿಚಕ್ರದಲ್ಲಿಲ್ಲ ಎಂಬುದನ್ನು ಗಮನಿಸಿ. ೨೦ ಮತ್ತು ೨೧ರಂದು ಚಂದ್ರ ಕೂಡ ಉರಗಧರ ಪುಂಜದಲ್ಲಿರುತ್ತದೆ. ಇದೇನು? ಗ್ರಹಗಳು ಮತ್ತು ಚಂದ್ರ ರಾಶಿಚಕ್ರವನ್ನು ತೊರೆದುಬಿಟ್ಟವೇ? ಎಂದು ಚಿಂತಿಸಬೇಡಿ. ಈ ರಾಶಿಗಳ ಎಲ್ಲೆಗಳನ್ನು ನಾವು ಹಾಕಿಕೊಂಡಿದ್ದೇವೆ. ಶನಿ (ಅಥವಾ ಯಾವುದೇ ಗ್ರಹ) ತನ್ನ ಪಾಡಿಗೆ ತಾನು ಚಲಿಸುತ್ತಿದೆ.

ಸಂಜೆಯ ಆಕಾಶದಲ್ಲಿ ಎದ್ದು ಕಾಣುವ ನಕ್ಷತ್ರವೆಂದರೆ ಲುಬ್ಧಕ (ಸಿರಿಯಸ್) ಮತ್ತು ಅಗಸ್ತ್ಯ (ಕೆನೋಪಸ್). ನಕ್ಷತ್ರಪುಂಜಗಳಲ್ಲಿ ಪ್ರಕಾಶಮಾನವಾದುದು ಒರೈಯನ್ ಅಥವಾ ಮಹಾವ್ಯಾಧ. ಇದರ ಸುತ್ತಲೂ ವೃಷಭ, ಮಿಥುನ ಮತ್ತು ವಿಜಯಸಾರಥಿ (ಆರಿಗಾ) ಸ್ಫುಟವಾಗಿ ಕಾಣುತ್ತವೆ. ಉತ್ತರದಲ್ಲಿ ಕುಂತಿ, ಪಾರ್ಥ, ದ್ರೌಪದಿ; ದಕ್ಷಿಣದಲ್ಲಿ ಹೊಳೆಯುವ ಅಗಸ್ತ್ಯ, ಲುಬ್ಧಕ – ಇವುಗಳ ಮೂಲಕ ಆಕಾಶಗಂಗೆಯ ಹರಿವಿದೆ.

ಈ ತಿಂಗಳ ೨೦ರಂದು ವಸಂತ ವಿಷುವ. ಹಗಲು ರಾತ್ರಿಗಳ ಅವಧಿ ಸಮವಾಗಿ ಇರುತ್ತದೆ. ಇದು ಯುಗಾದಿಯ ಸಂಭ್ರಮದ ಸೂಚನೆಯೂ ಹೌದು.

**ಮಾರ್ಚ್ ತಿಂಗಳ ಖಗೋಳ ದಿನಚರಿ**

೧ ಮಂಗಳ – ಶುಕ್ರ ಜೋಡಿ* (ಸಂಜೆ)
೨ ಶುಕ್ರಗ್ರಹದ ಹಿನ್ನಡೆ ಆರಂಭ
೩ ಚಂದ್ರ – ಭೂಮಿ ನಡುವೆ ಕನಿಷ್ಠ ದೂರ
೫ ಚಾಂದ್ರಮಾಸದ ಮೊದಲ ಪಾದ (ನಡುರಾತ್ರಿಗೆ ಚಂದ್ರಾಸ್ತ)
೭ ಬುಧಗ್ರಹದ ಉಚ್ಚ ಯುತಿ
೧೨ ಹುಣ್ಣಿಮೆ ೨೦:೨೪ಕ್ಕೆ
೧೪ ಗುರು – ಚಂದ್ರ ಜೋಡಿ *(ಮುಂಜಾವು)
೧೬ ಬುಧ – ಶುಕ್ರ ಜೋಡಿ* (ಸಂಜೆ)
೧೮ ಚಂದ್ರ – ಭೂಮಿ ನಡುವೆ ಗರಿಷ್ಠ ದೂರ
೨೦ ವಸಂತ ವಿಷುವ. ಶನಿ – ಚಂದ್ರ ಜೋಡಿ* (ಮುಂಜಾವು). ಚಾಂದ್ರಮಾಸದ ಕೊನೆಯ ಪಾದ (ನಡುರಾತ್ರಿಗೆ ಚಂದ್ರೋದಯ)
೨೫ ಶುಕ್ರಗ್ರಹದ ನೀಚಯುತಿ
೨೭ ಶುಕ್ರ – ಚಂದ್ರ ಜೋಡಿ
೨೮ ಅಮಾವಾಸ್ಯೆ ೮:೨೩ಕ್ಕೆ
೨೯ ಬುಧ – ಚಂದ್ರ ಜೋಡಿ* (ಸಂಜೆ)
೩೦ ಚಂದ್ರ – ಭೂಮಿ ನಡುವೆ ಕನಿಷ್ಠ ದೂರ. ಮಂಗಳ – ಚಂದ್ರ ಜೋಡಿ*

**ಡಾ॥ ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧

# ನೋಟು ರದ್ದತಿಯ ಆರ್ಥಿಕ, ರಾಜಕೀಯ ಹಾಗೂ ಸಾಮಾಜಿಕ ಪರಿಣಾಮಗಳು

ಮೂಲ : **ಪರಂಜಯ್ ಗುಹ ಠಾಕುರ್ತಾ**
ಕನ್ನಡಕ್ಕೆ : **ವಿಜಯ ಭಾಸ್ಕರ್ ಡಿ. ಎ.**

೨೦೧೬ರ ನವೆಂಬರ್ ೮ರಂದು ಮಾನ್ಯ ಪ್ರಧಾನ ಮಂತ್ರಿಯವರು ಘೋಷಿಸಿದ ಒಂದು ಸಾವಿರ ಹಾಗೂ ಐನೂರು ರೂಪಾಯಿಗಳ ನೋಟುಗಳ ಮಾನ್ಯತೆಯನ್ನು ರದ್ದುಪಡಿಸಿದ ತೀರ್ಮಾನಗಳ ಆರ್ಥಿಕ, ರಾಜಕೀಯ ಹಾಗೂ ಸಾಮಾಜಿಕ ಪರಿಣಾಮಗಳ ಬಗ್ಗೆ ನನ್ನ ಅಭಿಪ್ರಾಯ ಮಂಡಿಸಲು ನಾನು ತಮ್ಮೆದುರು ನಿಂತಿದ್ದೇನೆ.

ಮೊದಲನೆಯದಾಗಿ ದೇಶದಲ್ಲಿ ಚಲಾವಣೆಯಲ್ಲಿದ್ದ ಶೇ. ೮೬ರಷ್ಟು ಬೃಹತ್ ಪ್ರಮಾಣದ ಒಂದು ಸಾವಿರ ಹಾಗೂ ಐನೂರು ರೂಪಾಯಿ ನೋಟುಗಳನ್ನು ಅಮಾನ್ಯಗೊಳಿಸಿ ಚಲಾವಣೆಯಿಂದ ಹಿಂದಕ್ಕೆ ಪಡೆಯುವ ತೀರ್ಮಾನದ ಮೊದಲು ಸಾಕಷ್ಟು ಸಿದ್ಧತೆ ಇರಲಿಲ್ಲವೆಂಬುದು ಅತಿ ಮುಖ್ಯ ಸಂಗತಿ. ದೇಶಾದ್ಯಂತ ಬ್ಯಾಂಕ್‌ಗಳು ಸ್ಥಾಪಿಸಿರುವ ಹಣ ವಿತರಣಾ (ಎ.ಟಿ.ಎಂ.) ಯಂತ್ರಗಳಲ್ಲಿ ಹೊಸ ನೋಟುಗಳ ಅಳತೆಗೆ ತಕ್ಕಂತೆ ಅಗತ್ಯ ಮಾರ್ಪಾಟುಗಳನ್ನು ಸಹ ಮಾಡಿರಲಿಲ್ಲ. ಆದ್ದರಿಂದ ಬಹಳ ಸ್ಪಷ್ಟವಾಗಿ ತಿಳಿಯುವ ವಿಷಯವೇನೆಂದರೆ, ಈ ತೀರ್ಮಾನವನ್ನು ಒಬ್ಬನೇ ವ್ಯಕ್ತಿ ತನ್ನ ಆಪ್ತವಲಯದ ಕೆಲವೇ ಸಲಹೆಗಾರರೊಂದಿಗೆ ಸಮಾಲೋಚಿಸಿ ಉಳಿದ ಎಲ್ಲ ಜನರನ್ನು ಕತ್ತಲೆಯಲ್ಲಿಟ್ಟು ತೆಗೆದುಕೊಂಡ ತೀರ್ಮಾನ. ಸರ್ಕಾರ ಈ ರೀತಿಯ ಗೋಪ್ಯತೆಗೆ ನೀಡಿದ ಕಾರಣವೇನೆಂದರೆ ಕಪ್ಪುಹಣ ಹೊಂದಿರುವವರಿಗೆ ಯಾವುದೇ ಮಾಹಿತಿ ಮತ್ತು ಮುನ್ಸೂಚನೆ ಕೊಡದೆ ಹಠಾತ್ತಾಗಿ ಈ ತೀರ್ಮಾನವನ್ನು ಘೋಷಿಸುವುದು ಅಗತ್ಯವಾಗಿತ್ತು ಎಂಬುದಾಗಿದೆ.

ನೋಟು ರದ್ದತಿಗೆ ಮೊದಲನೆಯದಾಗಿ ನರೇಂದ್ರ ಮೋದಿಯವರು ನೀಡಿದ ಸಮರ್ಥನೆ ಏನೆಂದರೆ ಈ ತೀರ್ಮಾನದಿಂದ ನಕಲಿ ನೋಟುಗಳ ಹಾವಳಿಯನ್ನು ತಡೆಗಟ್ಟುವುದು. ನಕಲಿ ನೋಟುಗಳನ್ನು ಬಳಸಿ ಭಯೋತ್ಪಾದಕರು ಆತಂಕ ಹರಡುತ್ತಿದ್ದಾರೆ. ನೋಟು ರದ್ದತಿ ಮೂಲಕ ಭಯೋತ್ಪಾದಕ ಚಟುವಟಿಕೆಗಳಿಗೆ ಆರ್ಥಿಕ ನೆರವು ಸಿಗುವುದು ನಿಲ್ಲಲಿದೆ ಎಂದು ತಿಳಿಸಿದರು. ಎರಡನೆಯದಾಗಿ ನೋಟು ರದ್ದತಿಯ ಕ್ರಮದಿಂದ ಕಪ್ಪು ಹಣವನ್ನು ತಡೆಗಟ್ಟಬಹುದೆಂದು ತಿಳಿಸಿದರು. ಜನರು ಈ ಎರಡು ವಾದಗಳನ್ನು ಒಪ್ಪಲು ನಿರಾಕರಿಸಿದಾಗ ಅವರು ಕಡಿಮೆ ನಗದಿನ (ಲೆಸ್ ಕ್ಯಾಶ್); ನಗದು ರಹಿತ (ಕ್ಯಾಶ್ ಲೆಸ್) ಅರ್ಥ ವ್ಯವಸ್ಥೆ; ಡಿಜಿಟಲ್ ಇಂಡಿಯಾ ಬಗ್ಗೆ ಮಾತನಾಡ ತೊಡಗಿದರು. ನೋಟು ರದ್ದತಿಯ ವಿಷಯದಲ್ಲಿ ನಕಲಿ ನೋಟು, ಆತಂಕವಾದಕ್ಕೆ ಹಣಕಾಸಿನ ನೆರವು, ಕಪ್ಪು ಹಣ ಇತ್ಯಾದಿಗಳಿಂದ ಪ್ರಾರಂಭವಾದ ಮೋದಿಯವರ ಕಥೆ ನಗದು ರಹಿತ ಡಿಜಿಟಲ್ ಇಂಡಿಯಾವರೆಗೆ ಬಂದು ನಿಂತಿತು.

ಇಡೀ ನೋಟು ರದ್ದತಿ ಪ್ರಹಸನದಲ್ಲಿ ಬಹಳ ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ,

POLITICKLE by MANJUL




ನಮ್ಮ ದೇಶದ ಯಾವ್ಯಾವ ಜನ ವಿಭಾಗ ಈ ನೋಟು ರದ್ದತಿಯ ತೀರ್ಮಾನದಿಂದ ತೀವ್ರ ಸಂಕಷ್ಟಕ್ಕೆ ಗುರಿಯಾದರು ಎನ್ನುವ ವಿಷಯವನ್ನು ಪರಿಶೀಲಿಸಿದರೆ ನಿಮಗೆ ಈ ತೀರ್ಮಾನದ ಘೋರ ಪರಿಣಾಮದ ಅರಿವಾಗುತ್ತದೆ. ಮೊದಲನೆಯದಾಗಿ ದಿನಗೂಲಿ ಪಡೆಯುವ ಕಾರ್ಮಿಕರು. ತನ್ನ ದುಡಿಮೆಗೆ ದಿನಪ್ರತಿ ಆಧಾರದಲ್ಲಿ ವೇತನದ ಪಾವತಿ ಪಡೆಯುವ ಯಾವುದೇ ವ್ಯಕ್ತಿ; ಎರಡನೆಯದು ಹಣ್ಣು, ಹೂ, ತರಕಾರಿ ದವಸ, ಧಾನ್ಯಗಳು ಇತ್ಯಾದಿ ಅಲ್ಪಕಾಲ ಬಾಳುವ ಸರಕುಗಳ ಉತ್ಪಾದನೆ ಮಾಡುವ ರೈತರು. ಮೂರನೆಯದಾಗಿ ಸಣ್ಣ ವ್ಯಾಪಾರಿಗಳು, ಬೀದಿಬದಿಯ ವ್ಯಾಪಾರಸ್ಥರು; ನಾಲ್ಕನೆಯದಾಗಿ ಗೃಹಕೃತ್ಯ ನಿಭಾಯಿಸುವ ಮಹಿಳೆಯರು; ಕೊನೆಯದಾಗಿ ಪಿಂಚಣಿ ಮತ್ತಿತರ ಸಾಮಾಜಿಕ ಭದ್ರತೆಯನ್ನು ಅವಲಂಬಿಸಿರುವ ಹಿರಿಯ ನಾಗರಿಕರು; ನೋಟು ರದ್ದತಿ ತೀರ್ಮಾನದಿಂದ ತೀವ್ರ ಸಂಕಷ್ಟಕ್ಕೆ ಗುರಿಯಾದ ಜನವಿಭಾಗಗಳು ಈ ಕಠೋರ ಸತ್ಯ ನರೇಂದ್ರ ಮೋದಿಯವರಿಗೆ ತಡವಾಗಿಯಾದರೂ ಮನವರಿಕೆಯಾಗಿದೆ.

ಮೋದಿಯವರು ಯಾವ ಕಾರಣಕ್ಕೆ ಈ ರೀತಿ ಕತೆಗಳನ್ನು ಬದಲಾಯಿಸುತ್ತಾ ಹೋದರು ಎಂಬುದಾಗಿದೆ. ಮೋದಿಯವರಿಗೆ "ಇದಕ್ಕೆ ಕಾರಣ ಎಲ್ಲಾ ನಗದು ಕಪ್ಪು ಹಣವಲ್ಲ, ಎಲ್ಲಾ ಕಪ್ಪು ಹಣ ನಗದು ರೂಪದಲ್ಲಿರುವುದಿಲ್ಲ" ಎನ್ನುವ ಸರಳ ಸತ್ಯವು ತಡವಾಗಿ ಜ್ಞಾನೋದಯವಾಯಿತು. ಈ ಸತ್ಯವನ್ನು ಮತ್ತೂ ವಿಶದೀಕರಿಸಿ ಹೇಳುವುದಾದರೆ ಹಣವು ತನ್ನ ಬಣ್ಣವನ್ನು ಬಹಳ ಸುಲಭವಾಗಿ ಬದಲಿಸಬಲ್ಲುದು. ಉದಾಹರಣೆಗೆ ನೀವು ನಿಮ್ಮ ಬ್ಯಾಂಕಿನಲ್ಲಿರುವ ಬಿಳಿ ಹಣವನ್ನು ಒಬ್ಬ ಅಂಗಡಿಯವನಿಗೆ ನೀಡಿ ಏನನ್ನಾದರೂ ಖರೀದಿಸಿದಾಗ, ಒಂದು ವೇಳೆ ಅಂಗಡಿಯವನು ನಿಮ್ಮ ಪಾವತಿಗೆ ರಶೀದಿ, ಬಿಲ್ಲುಗಳನ್ನು ನೀಡಲು ನಿರಾಕರಿಸಿದರೆ, ನಿಮ್ಮ ಕೈಯಲ್ಲಿನ ಬಿಳಿ ಹಣ ಅಂಗಡಿಯವನ ಕೈಯಲ್ಲಿ ಕಪ್ಪು ಹಣವಾಗುತ್ತದೆ. ಅದೇ ಅಂಗಡಿಯವನು ನೀವು ನೀಡಿದ ಹಣವನ್ನು ಹೋಟೆಲಿನಲ್ಲಿ ಆಹಾರವನ್ನು ತಿಂದು ಪಾವತಿಸಿ ಹೋಟೆಲ್ ಮಾಲೀಕನಿಂದ ಬಿಲ್ಲನ್ನು ಪಡೆದರೆ, ಅದು ಹೋಟೆಲಿನವನ ಕೈಯಲ್ಲಿ ಮತ್ತೆ ಬಿಳಿ ಹಣವಾಗುತ್ತದೆ. ಹೀಗೆ ಒಂದೇ ದಿನದಲ್ಲಿ ಹಣ ತನ್ನ ಬಣ್ಣವನ್ನು ಹಲವು ಬಾರಿ ಬದಲಾಯಿಸುತ್ತಿರುತ್ತದೆ.

ಸಾಮಾನ್ಯ ಜನರು ಕಾನೂನು ಬದ್ಧವಾದ ಹಣವನ್ನು ತಮ್ಮಲ್ಲಿ ಹೇಗೆ ನಗದು ರೂಪದಲ್ಲಿಟ್ಟುಕೊಂಡಿರುತ್ತಾರೋ ಅದೇ ರೀತಿ ಬಹುತೇಕ ಭಾಗ ಕಪ್ಪು ಹಣವು ನಗದು ರೂಪದಲ್ಲಿರುವುದಿಲ್ಲ. ಕಪ್ಪು ಹಣವು ಸಂಪತ್ತಿನ ರೂಪದಲ್ಲಿ, ಆಸ್ತಿಯ ರೂಪದಲ್ಲಿ, ಚಿನ್ನ, ಬೆಳ್ಳಿ, ವಜ್ರ ವೈಢೂರ್ಯಗಳ ರೂಪದಲ್ಲಿರುತ್ತದೆ. ಬಹುತೇಕ ಪ್ರಮಾಣದ ಕಪ್ಪುಹಣ ಈ ದೇಶದಲ್ಲಿಯೇ ಇರುವುದಿಲ್ಲ. ಅದನ್ನು ದೇಶದ ಹೊರಗೆ ಸಾಗಿಸಲಾಗುತ್ತದೆ. ಕೇವಲ ಸ್ವಲ್ಪಭಾಗ ಮಾತ್ರ ನಗದು ರೂಪದಲ್ಲಿರಬಹುದು. ಇವೆಲ್ಲದರ ತಾತ್ಪರ್ಯವೆಂದರೆ ಸರ್ಕಾರಕ್ಕೆ ತಿಳಿಸದೆ; ಆದಾಯ ತೆರಿಗೆ ವಿಭಾಗಕ್ಕೆ ಘೋಷಿಸದೆ ಇರಿಸಿಕೊಂಡಿರುವ ಹಣವೇ ಕಪ್ಪು ಹಣ. ಉದಾಹರಣೆಗೆ ನಿಮ್ಮಲ್ಲಿ ನೂರು ರೂಪಾಯಿ ಇದ್ದು, ಕೇವಲ ಹತ್ತು ರೂಪಾಯಿಯನ್ನು ಮಾತ್ರ ಆದಾಯ ತೆರಿಗೆ ಇಲಾಖೆಗೆ ಘೋಷಿಸಿದ್ದರೆ, ತಮ್ಮಲ್ಲಿರುವ ಹಣದ ಪೈಕಿ ತೊಂಬತ್ತು ರೂಪಾಯಿ ಕಪ್ಪುಹಣ ಎಂದಾಗುತ್ತದೆ.

ಚಲಾವಣೆಯಲ್ಲಿರುವ ನೋಟುಗಳ ಪೈಕಿ ಶೇ. ೮೬ರಷ್ಟನ್ನು ರದ್ದುಪಡಿಸುವ ಮೂಲಕ ಕೇವಲ ಅತ್ಯಲ್ಪ ಪ್ರಮಾಣದ ನಗದು ರೂಪದಲ್ಲಿರುವ ಕಪ್ಪು ಹಣವನ್ನು ಮಾತ್ರ ನೀವು ಬಯಲಿಗೆಳೆಯುವುದು ಸಾಧ್ಯ ಎನ್ನುವುದು ನನ್ನ ಅನಿಸಿಕೆ.

ನಮ್ಮ ದೇಶದ ಯಾವ್ಯಾವ ಜನ ವಿಭಾಗ ಈ ನೋಟು ರದ್ದತಿಯ ತೀರ್ಮಾನದಿಂದ ತೀವ್ರ ಸಂಕಷ್ಟಕ್ಕೆ ಗುರಿಯಾದರು ಎನ್ನುವ ವಿಷಯವನ್ನು ಪರಿಶೀಲಿಸಿದರೆ ನಿಮಗೆ ಈ ತೀರ್ಮಾನದ ಘೋರ ಪರಿಣಾಮದ ಅರಿವಾಗುತ್ತದೆ. ಮೊದಲನೆಯದಾಗಿ ದಿನಗೂಲಿ ಪಡೆಯುವ ಕಾರ್ಮಿಕರು. ತನ್ನ ದುಡಿಮೆಗೆ ದಿನಂಪ್ರತಿ ಆಧಾರದಲ್ಲಿ ವೇತನದ ಪಾವತಿ ಪಡೆಯುವ ಯಾವುದೇ ವ್ಯಕ್ತಿ; ಎರಡನೆಯದು ಹಣ್ಣು, ಹೂ, ತರಕಾರಿ ದವಸ, ಧಾನ್ಯಗಳು ಇತ್ಯಾದಿ ಅಲ್ಪಕಾಲ ಬಾಳುವ ಸರಕುಗಳ ಉತ್ಪಾದನೆ ಮಾಡುವ ರೈತರು. ಮೂರನೆಯದಾಗಿ ಸಣ್ಣ ವ್ಯಾಪಾರಿಗಳು, ಬೀದಿಬದಿಯ ವ್ಯಾಪಾರಸ್ಥರು; ನಾಲ್ಕನೆಯದಾಗಿ ಗೃಹಕೃತ್ಯ ನಿಭಾಯಿಸುವ ಮಹಿಳೆಯರು; ಕೊನೆಯದಾಗಿ ಪಿಂಚಣಿ ಮತ್ತಿತರ ಸಾಮಾಜಿಕ ಭದ್ರತೆಯನ್ನು




ಅವಲಂಬಿಸಿರುವ ಹಿರಿಯ ನಾಗರಿಕರು; ನೋಟು ರದ್ದತಿ ತೀರ್ಮಾನದಿಂದ ತೀವ್ರ ಸಂಕಷ್ಟಕ್ಕೆ ಗುರಿಯಾದ ಜನವಿಭಾಗಗಳು. ಈ ಕಠೋರ ಸತ್ಯ ನರೇಂದ್ರ ಮೋದಿಯವರಿಗೆ ತಡವಾಗಿಯಾದರೂ ಮನವರಿಕೆಯಾಗಿದೆ. ಜನರು ತಾವು ಬೆವರು ಹರಿಸಿ ಗಳಿಸಿದ ತಮ್ಮದೇ ಹಣವನ್ನು ಪಡೆಯಲು ಬ್ಯಾಂಕುಗಳ ಮುಂದೆ, ಹಣ ವಿತರಿಸುವ ಯಂತ್ರಗಳ ಮುಂದೆ ಗಂಟೆಗಟ್ಟಲೆ ಕ್ಯೂನಲ್ಲಿ ನಿಲ್ಲುವಂತಾಯಿತು. ಭ್ರಷ್ಟಾಚಾರಕ್ಕೆ ಕಡಿವಾಣ ಹಾಕುವ ಕ್ರಮ ಎಂದು ಬಣ್ಣಿಸಲಾದ ನೋಟು ರದ್ದತಿ ತೀರ್ಮಾನದಿಂದ ಭ್ರಷ್ಟಾಚಾರ ಹೋಗಲಿಲ್ಲ. ಬದಲಾಗಿ ಅದರಿಂದ ಭ್ರಷ್ಟಾಚಾರ ಹೊಸ ಹೊಸ ಸ್ವರೂಪಗಳನ್ನು ಪಡೆಯಿತು. ೫೦೦, ೧೦೦೦ ರೂಪಾಯಿ ಮೌಲ್ಯದ ನೋಟು ರದ್ದತಿಯ ಕಾರಣ ಹೊಸ ನೂರು ರೂಪಾಯಿ ನೋಟುಗಳ ಬೇಡಿಕೆ ಹೆಚ್ಚಿ ಅವುಗಳೇ ಸರಕಾಗಿ ನೂರಾಹತ್ತು ರೂಪಾಯಿಗಳಿಗೆ ವಿನಿಮಯಗೊಂಡವು. ನೋಟು ರದ್ದತಿಯ ತೀರ್ಮಾನದ ಇನ್ನೊಂದು ಘೋರ ಪರಿಣಾಮವೆಂದರೆ ಉದ್ಯೋಗ ನಷ್ಟ. ಚುನಾವಣೆಯ ಸಂದರ್ಭದಲ್ಲಿ ವರ್ಷಕ್ಕೆ ಎರಡು ಕೋಟಿ ಉದ್ಯೋಗ ಸೃಷ್ಟಿಸುವುದಾಗಿ ಹೇಳಿ, ನೋಟು ರದ್ದತಿ ತೀರ್ಮಾನದಿಂದ ಕೋಟ್ಯಂತರ ಉದ್ಯೋಗಗಳ ನಾಶ ಮಾಡಿದ್ದಾರೆ. ಭ್ರಷ್ಟಾಚಾರ ನಿವಾರಣೆ ಮಾಡುವುದಾಗಿ ಹೇಳಿ ಹೊಸ ಸ್ವರೂಪದ ಭ್ರಷ್ಟಾಚಾರ ಸೃಷ್ಟಿ ಮಾಡಿದರು. ನರೇಂದ್ರ ಮೋದಿಯವರಿಗೆ ನಿಧಾನವಾಗಿ ಅರ್ಥವಾಗಿರುವ ಈ ವಿಷಯ ತಿಳಿದದ್ದು ಹೇಗೆಂದು ನೀವು ಕೇಳಬಹುದು. ಡಿಸೆಂಬರ್ ೩೧, ೨೦೧೬ರಂದು ಅವರು ಮಾಡಿದ ಮಿನಿ ಬಜೆಟ್ ನಂತಿದ್ದ ಅವರ ಭಾಷಣವನ್ನು ಗಮನಿಸಿ; ಅವರು ಗರ್ಭಿಣಿ ಸ್ತ್ರೀಯರಿಗೆ ಹಣಕಾಸಿನ ನೆರವು ಘೋಷಿಸಿದರು; ಹಿರಿಯ ನಾಗರಿಕರಿಗೆ ಠೇವಣಿ ಮೇಲೆ ಬಡ್ಡಿದರವನ್ನು ಹೆಚ್ಚಿಸಿದರು. ನೀರಾವರಿ ಯೋಜನೆಗಳಿಗೆ ನಬಾರ್ಡ್ ಅಡಿಯಲ್ಲಿ ನೆರವಿನ ಪ್ರಮಾಣ ಹೆಚ್ಚಿಸಿದರು, ರೈತರ ಸಾಲದ ಮಿತಿಯನ್ನು ಹೆಚ್ಚಿಸಿದರು. ಇದರಿಂದ ತಿಳಿಯುತ್ತದೆ ನೋಟು ರದ್ದತಿಯ ತೀರ್ಮಾನದಿಂದ ಮಹಿಳೆಯರಿಗೆ, ಹಿರಿಯ ನಾಗರಿಕರಿಗೆ, ರೈತರಿಗೆ ತೀವ್ರ ಧಕ್ಕೆಯುಂಟಾಗಿದೆ ಎಂಬುದು, ಅರಿವಾಗಿದ್ದರಿಂದಲೇ ಈ ಜನವಿಭಾಗಗಳಿಗೆ ಕೆಲವು ಸವಲತ್ತು ನೀಡಲು ಮುಂದಾದರು.

ಕೇಂದ್ರ ಸರ್ಕಾರ ಹಾಗೂ ಮೋದಿಯವರು ದೇಶದ ಒಟ್ಟು ಆಂತರಿಕ ಉತ್ಪನ್ನ (ಜಿ.ಡಿ.ಪಿ)ವನ್ನು ಹೆಚ್ಚಿಸುವ ಮಾತನ್ನು ಆಡುತ್ತಿರುತ್ತಾರೆ. ಆದರೆ ನೋಟು ರದ್ದತಿ ತೀರ್ಮಾನದಿಂದ ಜಿಡಿಪಿ ಕುಸಿತವಾಗಿದೆ ಎಂದು ಎಲ್ಲರೂ ಹೇಳುತ್ತಿದ್ದಾರೆ. ವಿಶ್ವ ಬ್ಯಾಂಕ್, ಸರ್ಕಾರ ಜಿಡಿಪಿ ಕುಸಿದಿದೆ ಎಂದೇ ಹೇಳಿದೆ. ಯುವಕರಿಗೆ ಉದ್ಯೋಗ ಕೊಡುವುದಾಗಿ ಹೇಳಿದ ಸರ್ಕಾರ ಈಗ ಉದ್ಯೋಗ ನಾಶದಂತಹ ತೀರ್ಮಾನಕ್ಕೆ ಕಾರಣವಾಗಿದೆ. ಉದ್ಯೋಗಾವಕಾಶ ಹೆಚ್ಚಬೇಕು, ಜಿಡಿಪಿ ಹೆಚ್ಚಳವಾಗಬೇಕು ಎಂದು ಚೀರುತ್ತಿದ್ದ ಮಾನ್ಯ ಪ್ರಧಾನಿಗಳು ತಮ್ಮ ತೀರ್ಮಾನದಿಂದ ತದ್ವಿರುದ್ಧ ಪರಿಣಾಮಗಳಿಗೆ ಕಾರಣರಾಗಿದ್ದಾರೆ. ಈ ಮಾತನ್ನು ನಾನು ಹೇಳುತ್ತಿಲ್ಲ. ಅದನ್ನು ಅಖಿಲ ಭಾರತ ಸರಕು ಉತ್ಪಾದಕರ ಸಂಘ ಹೇಳುತ್ತಿದೆ. ಸರಕು ಉತ್ಪಾದನಾ ವಲಯದ ದೊಡ್ಡ ದೊಡ್ಡ ಬಂಡವಾಳಗಾರರು ಈ ಮಾತನ್ನಾಡುತ್ತಿದ್ದಾರೆ. ಶೇ. ೩೫ರಷ್ಟು ಉದ್ಯೋಗ ನಷ್ಟವಾಗಿದೆ ಎಂದು ಹೇಳುತ್ತಿದ್ದಾರೆ. ಅಂತರರಾಷ್ಟ್ರೀಯ ಹಣಕಾಸು ನಿಧಿ (ಐಎಂಎಫ್) ಹೇಳುತ್ತಿದೆ, ಭಾರತ ದೇಶದ ಪ್ರಗತಿಯ ಬೆಳವಣಿಗೆ ಕುಂಠಿತವಾಗಿದೆ ಎಂದು. ಈ ಮಾತನ್ನು ಎಡಪಂಥೀಯರು ಹೇಳುತ್ತಿಲ್ಲ. ಜವಳಿ ಉದ್ದಿಮೆದಾರರು ಹೇಳುತ್ತಿದ್ದಾರೆ. 'ಜನರಿಗೆ ಊಟಕ್ಕೆ ಹಣವಿಲ್ಲ, ಇನ್ನು ಬಟ್ಟೆಗಳನ್ನು ಕೊಳ್ಳಲು ಹಣವೆಲ್ಲಿದೆ' ಎಂದು. ನವ ಉದಾರವಾದಿ, ಬಲಪಂಥೀಯ ಆರ್ಥಿಕ ನೀತಿಗಳನ್ನು ಬೆಂಬಲಿಸುವ ಜನರೇ ಇಂದು ಉದ್ಯೋಗ ಕುಸಿಯುತ್ತಿದೆ, ಪ್ರಗತಿ ಕುಂಠಿತವಾಗಿದೆ, ಸರಕುಗಳ ಮಾರಾಟ ಕಡಿಮೆಯಾಗಿದೆ ಎಂದು ಚೀರುತ್ತಿದ್ದಾರೆ.

ಒಟ್ಟಾರೆಯಾಗಿ ನೋಟು ರದ್ದತಿಯ ತೀರ್ಮಾನದಿಂದ ಆರ್ಥಿಕ ಪರಿಣಾಮಗಳನ್ನು ಸಂಕ್ಷೇಪವಾಗಿ ಹೇಳುವುದಾದರೆ, ನೋಟು ರದ್ದತಿ ತೀರ್ಮಾನದಿಂದ ಕಪ್ಪುಹಣ ನಿವಾರಣೆ ಆಗುವುದಿಲ್ಲ, ಭ್ರಷ್ಟಾಚಾರ ನಿರ್ಮೂಲನವಾಗುವುದಿಲ್ಲ, ಅದು ಭಯೋತ್ಪಾದನೆಯನ್ನು ಕಡಿಮೆ ಮಾಡುವುದಿಲ್ಲ, ಈ ಉದ್ದೇಶ ಸಾಧನೆಗೆ ಅದು ಮಾರ್ಗೋಪಾಯವಲ್ಲ, ಬದಲಾಗಿ ಭಾರತೀಯ ಸಮಾಜದ ಅತ್ಯಂತ ದುರ್ಬಲ ವರ್ಗದ ಜನರ ಬದುಕಿಗೆ, ತುಳಿತಕ್ಕೆ ಒಳಗಾದ ಜನ ಸಮುದಾಯಕ್ಕೆ ತೀವ್ರ ಸಂಕಷ್ಟ ತಂದೊಡ್ಡಿದ ತೀರ್ಮಾನ ಎಂದು ದೃಢವಾಗಿ ಹೇಳಬಹುದಾಗಿದೆ. ಕೊನೆಯದಾಗಿ ಭಾರತೀಯ ರಿಸರ್ವ್ ಬ್ಯಾಂಕ್ ನಮ್ಮ ದೇಶದ ಕೇಂದ್ರೀಯ ಬ್ಯಾಂಕ್; ದೇಶದ ಅತ್ಯುನ್ನತ ಹಣಕಾಸು ನೀತಿಗಳನ್ನು ನಿರೂಪಣೆ ಮಾಡುತ್ತಿರುವ; ಸಂವಿಧಾನದ

ಅಡಿಯಲ್ಲಿ ಕೆಲಸ ಮಾಡುತ್ತಿರುವ ಒಂದು ಶಾಸನಬದ್ಧ ಸಂಸ್ಥೆ. ನಮ್ಮ ದೇಶದ ಜನ ಅತ್ಯಂತ ವಿಶ್ವಾಸವಿಟ್ಟು ಕೊಂಡಿದ್ದ ಸಂಸ್ಥೆಗಳಲ್ಲಿ ಭಾರತೀಯ ರಿಸರ್ವ್ ಬ್ಯಾಂಕ್ ಸಹ ಒಂದಾಗಿತ್ತು. ಸರ್ಕಾರದ ನೋಟು ರದ್ದತಿಯ ತೀರ್ಮಾನದಿಂದ ರಿಸರ್ವ್ ಬ್ಯಾಂಕಿನ ವಿಶ್ವಾಸಾರ್ಹತೆ, ನಂಬಿಕೆಗಳು ಕುಸಿತವಾಗಿದೆ, ಅದು ಕ್ಷೀಣಿಸಿದೆ. ಮೋದಿಯವರು ಚುನಾವಣೆಯ ಸಂದರ್ಭದಲ್ಲಿ 'ಕನಿಷ್ಠ ಸರ್ಕಾರ ಗರಿಷ್ಠ ಆಳ್ವಿಕೆ' ಎಂದು ಹೇಳಿದ್ದರು. ಆದರೆ ನೋಟು ರದ್ದತಿ ತೀರ್ಮಾನದ ನಂತರ ೫೦ ದಿನಗಳಲ್ಲಿ ಭಾರತೀಯ ರಿಸರ್ವ್ ಬ್ಯಾಂಕ್ ೬೬ ಸುತ್ತೋಲೆಗಳನ್ನು ಹೊರಡಿಸಿದೆ. ಕೆಲವೊಮ್ಮೆ ೨೪ ಗಂಟೆಗಳ ಒಳಗಾಗಿ ಪ್ರಕಟಿಸಿದ ತನ್ನ ಹಿಂದಿನ ಸುತ್ತೋಲೆಯನ್ನು ಹಿಂಪಡೆಯುವ ಇನ್ನೊಂದು ಸುತ್ತೋಲೆಯಲ್ಲಿ ಹೊರಡಿಸಲಾಗಿದೆ. ಮೋದಿಯವರ ಕನಿಷ್ಠ ಸರ್ಕಾರ, ಗರಿಷ್ಠ ಆಳ್ವಿಕೆಯ ಅರ್ಥ ಇದೇನಾ ? ಮೋದಿಯವರೇ, ದೇಶವಾಸಿಗಳ ವಿಶ್ವಸನೀಯ ಸಂಸ್ಥೆಗೆ ತಾವು ಮಾಡಿರುವುದಾದರೂ ಏನು ? ಅದನ್ನು ಜನರ ಕಣ್ಣಲ್ಲಿ ನಗೆಪಾಟಲಿಗೆ ಗುರಿಮಾಡಿರುವುದು.

ಇನ್ನು ನೋಟು ರದ್ದತಿ ರಾಜಕೀಯ ಸಾಮಾಜಿಕ ಪರಿಣಾಮಗಳ ಬಗ್ಗೆ ಪರಿಶೀಲಿಸುವುದಾದರೆ; ನಾನು ಈಗ ಹೇಳಲಿರುವ ಅಂಶ ಬಹಳ ಮಹತ್ವದ್ದು ಹಾಗೂ ತಮ್ಮನ್ನು ಪ್ರಗತಿಪರರು, ಎಡಪಂಥದಲ್ಲಿ ನಂಬಿಕೆ ಇರುವವರು ಎಂದು ಪರಿಗಣಿಸುವವರು ಗಂಭೀರವಾಗಿ ಚಿಂತಿಸಬೇಕಾದ ವಿಷಯ. ಕೇಂದ್ರ ಸರ್ಕಾರದ ಜಲಸಂಪನ್ಮೂಲ ರಾಜ್ಯ ಸಚಿವೆಯಾದ ಉಮಾಭಾರತಿ ಯವರು 'ನರೇಂದ್ರ ಮೋದಿಯವರು ಕಾರ್ಲ್ ಮಾರ್ಕ್ಸ್‌ಗಿಂತಲೂ ಹೆಚ್ಚು ಮಾರ್ಕ್ಸ್‌ವಾದಿ' ಎಂದು ಬಣ್ಣಿಸಿದ್ದಾರೆ. ವರ್ಗವಿಭಜನೆ, ಬಡವ-ಬಲ್ಲಿದರ ನಡುವಿನ ಅಂತರ ಇತ್ಯಾದಿ, ಕಮ್ಯುನಿಸ್ಟರ, ಎಡಪಂಥೀಯರ ಪರಿಭಾಷೆಗಳನ್ನು ನರೇಂದ್ರ ಮೋದಿಯವರು ತಮ್ಮದೆಂಬಂತೆ ಮಾತನಾಡುತ್ತಿದ್ದಾರೆ. ಮೋದಿಯವರ ಮಾತುಗಳನ್ನು ಗಮನಿಸಿ. 'ಹಿಂದೆ ಬಡವರು ಶ್ರೀಮಂತರ ಮನೆಬಾಗಿಲ ಮುಂದೆ ಕ್ಯೂ ನಿಂತು ಉದ್ಯೋಗಕ್ಕಾಗಿ ಅಂಗಲಾಚುತ್ತಿದ್ದರು. ಈಗ ತಮ್ಮ ಕಪ್ಪು ಹಣವನ್ನು ಬಡಜನರ ಜನ್‌ಧನ್ ಖಾತೆಯಲ್ಲಿಟ್ಟುಕೊಳ್ಳುವಂತೆ ಶ್ರೀಮಂತರು ಬಡವರ ಮನೆಯ ಬಾಗಿಲ ಮುಂದೆ ಕ್ಯೂ ನಿಲ್ಲುತ್ತಿದ್ದಾರೆ. ಶ್ರೀಮಂತರಿಂದ ಹಣ ಪಡೆದುಕೊಳ್ಳಿ, ಆದರೆ ಅವರಿಗೆ ಹಿಂದಿರುಗಿಸಬೇಡಿ; ನಾನು ನಿಮ್ಮನ್ನು ರಕ್ಷಿಸುತ್ತೇನೆ', ಎಂದು ಬಡವರಿಗೆ ಮೋದಿ ಕರೆ ನೀಡುತ್ತಿದ್ದಾರೆ. ಭ್ರಷ್ಟಾಚಾರವು ಹೊಸ ಸ್ವರೂಪ ಪಡೆದುಕೊಳ್ಳುತ್ತಿದೆ ಎಂದು ಮೋದಿಯವರಿಗೆ ಮನವರಿಕೆಯಾಗುತ್ತಿದೆ. ಆದರೆ ಅದಕ್ಕೆ ಬೇರೆಯೇ ಅರ್ಥಕೊಟ್ಟು ಅದನ್ನು ಬಡವ ಬಲ್ಲಿದರ ನಡುವಣ ಸಂಘರ್ಷ, ತಾವು ಬಡವರ ಪರ; ನೋಟು ರದ್ದತಿ ಬಡವರ ಪರ; ಎಂದು ತಿರುಚುತ್ತಿದ್ದಾರೆ. ಮೋದಿಯವರ ಪ್ರಕಾರ ಎಲ್ಲವೂ ಕೇವಲ ಕಪ್ಪು ಮತ್ತು ಬಿಳಿ. ಒಂದೊಮ್ಮೆ ನೀವು ನೋಟು ರದ್ದತಿಯನ್ನು ಟೀಕಿಸಿದರೆ ಅಥವಾ ವಿರೋಧಿಸಿದರೆ ನಿಮ್ಮಲ್ಲಿ ಕಪ್ಪು ಹಣ ಇದೆ; ನೀವು ಭ್ರಷ್ಟರ ಪರ ಎಂದು ದಿಕ್ಕು ತಪ್ಪಿಸಲು ರಾಜಕೀಯ ಕಸರತ್ತು ನಡೆಸಿದ್ದಾರೆ.

'ಜನ್‌ಧನ್' ಖಾತೆ ಯೋಜನೆಯನ್ನೇ ವಿಶ್ಲೇಷಿಸುವುದಾದರೆ; ಅದೊಂದು ಹಳೆಯ ಯೋಜನೆ ಅದರ ಹೆಸರನ್ನು ಮಾತ್ರ ಬದಲಾಯಿಸಿದ್ದಾರೆ. ೨೦೧೪ರ ಆಗಸ್ಟ್ ೧೫ರಂದು ಮೋದಿಯವರು ಕೆಂಪುಕೋಟೆಯ ಮೇಲಿಂದ ಜನ್‌ಧನ್ ಯೋಜನೆಯನ್ನು ಘೋಷಿಸಿದರು. ಡಿಸೆಂಬರ್ ೨೦೧೪ರ ಕೊನೆಯ ವೇಳೆಗೆ ಸುಮಾರು ಹತ್ತು ಕೋಟಿ ಜನ್‌ಧನ್ ಖಾತೆಗಳಿದ್ದವು. ಅವುಗಳ ಪೈಕಿ ಸುಮಾರು ೯ ಕೋಟಿ ಖಾತೆಗಳಲ್ಲಿ ಶೂನ್ಯ ಶೀಲ್ಕು (ಜೀರೋ ಬ್ಯಾಲೆನ್ಸ್) ಇತ್ತು. ಶೇ. ೯೦ರಷ್ಟು ಶೂನ್ಯ ಶೀಲ್ಕಿನ ಖಾತೆ (೯ ಕೋಟಿ) ಯಿಂದ ಡಿಸೆಂಬರ್ ೨೦೧೬ರ ಕೊನೆ ಹೊತ್ತಿಗೆ ೨೫ ಕೋಟಿ ಜನ್‌ಧನ್ ಖಾತೆಗಳು ಬೆಳೆಯಿತು. ಈಗಲೂ ಅವುಗಳ ಪೈಕಿ ಸುಮಾರು ೫ ಕೋಟಿ ಖಾತೆಗಳು ಶೂನ್ಯ ಶೀಲ್ಕಿನ ಖಾತೆಗಳಾಗಿವೆ. ಆದರೆ ಈ ಅಂಕಿ ಅಂಶಗಳನ್ನು ನಂಬಲಾಗದು. ಏಕೆಂದರೆ ಬ್ಯಾಂಕ್ ಅಧಿಕಾರಿಗಳು ಶೂನ್ಯ ಶೀಲ್ಕಿನ ಖಾತೆಗಳನ್ನು ಕಡಿಮೆ ತೋರಿಸುವ ಉದ್ದೇಶದಿಂದ, ಖಾತೆದಾರರಿಗೆ ತಿಳಿಯದಂತೆ ಒಂದು ರೂಪಾಯಿಯನ್ನು ಪ್ರತಿ ಖಾತೆಗೆ ಜಮೆ ಮಾಡಿ, ಕೃತಕವಾಗಿ ಶೂನ್ಯ ಶೀಲ್ಕಿನ ಖಾತೆಗಳನ್ನು ನಗದು ಶೀಲ್ಕಿನ ಖಾತೆಗಳಾಗಿ ರೂಪಾಂತರಗೊಳಿಸಿದ್ದಾರೆ. ಆದ್ದರಿಂದ ಇದೂ ಸಹ ಸಂಪೂರ್ಣ ವಿಶ್ವಸನೀಯವಲ್ಲ.

ಇವೆಲ್ಲದರ ತಾತ್ಪರ್ಯವೇನೆಂದರೆ ಮೋದಿಯವರು ಬಡವರಿಗಾಗಿ ಬಹಳಷ್ಟು ಮಾಡುತ್ತಿರುವುದಾಗಿ ಹೇಳಿಕೊಂಡಿದ್ದರೂ, ವಾಸ್ತವವಾಗಿ ಮಾಡಿದ್ದು ಘೋಷಣೆ ಬಿಟ್ಟರೆ ಏನೂ ಇಲ್ಲ. 'ದೀರ್ಘಕಾಲದ ಲಾಭಕ್ಕಾಗಿ, ಅಲ್ಪಕಾಲದ ಕಷ್ಟ ಸಹಿಸಿಕೊಳ್ಳಿ, ಇದು ಕಹಿಯಾದ ಸಿದ್ಧೌಷದ ಆರ್ಥಿಕತೆಯ, ದೇಶದ ಹಲವು ಸಮಸ್ಯೆಗಳಿಗೆ ರಾಮಬಾಣ. ನಿಮ್ಮ ಸಹಕಾರಕ್ಕೆ, ನಿಮ್ಮ ತಾಳ್ಮೆ ಸಹನೆಗೆ ನಮನಗಳು'

## ಬೋರಲಾದ ಚೆನ್ನಮಲ್ಲಿಕಾರ್ಜುನ

ಅಕ್ಕನೆಂದರೆ ಅಕ್ಕ ಜೀವಕ್ಕೆ ಜೀವ
ಪೋಣಿಸಲು ಕಲಿಸಿದವಳು ಮಹಾದೇವಿಯಕ್ಕ
ಬಳ ಏನಿಸಿದೆಯೆ ಪ್ರೀತಿಯ
ಸ್ಮೃತಿ ಹಂಚಿಕೆ ಉಳಿದು
ಎಳೆವಯಸ್ಸಿಗೆ ಚೆನ್ನಮಲ್ಲಿಕಾರ್ಜುನನ
ಬಗೆಗಿನ ನಿನ್ನ ಪ್ರೇಮ ಹದುಳವೆನಿಸುತ್ತದೆ.

ಧೂರ್ತರಾದ ಗಂಡಸರಿಗೂ
ಸೋಗಲಾಡಿ ಹೆಂಗಸರಿಗೂ
ಮಲ್ಲಿಕಾರ್ಜುನನೆಂದು, ಬೆರೆತ
ಮೈಮನದ ಉಯಿಲು ಕಿವಿಗೆ ಬಿದ್ದರೆ ಸಾಕು
ಅಮೂಲ್ಯ ಎಂದರಿತ ಸ್ವಾರ್ಥ
ಗಳಿಗೆಗಳೆಲ್ಲ ಸರ್ವನಾಶಗೊಳ್ಳುತ್ತವೆ.

ತನುಮನಗಳ ಒಡ್ಡಿ ಅರ್ಪಿಸಿಕೊಂಡ ಸತಿ
ಬೇಡಿ ಪಡೆದವ ಪತಿ
ಕಾಮುಕತೆಯನ್ನೇ ಉನ್ನತೀಕರಿಸಿಕೊಂಡ
ಅದೆಷ್ಟೋ ಗಂಡು-ಹೆಣ್ಣುಗಳು ನಾಚಿ ನೀರಾಗುವಂತೆ
ದಾನ ನೀಡಿದ ಮಲ್ಲಿಕಾರ್ಜುನ ಮಾತೊಂದ ಕೇಳದೆ
ನಿನ್ನೊಳಗೆ ಬೋರಲಾಗಿಟ್ಟೆ .

ದೇವನನ್ನು ಹುಟ್ಟಿಸುವುದಾದರೂ
ಎಂಥ ಅದ್ಭುತಕಲೆಯೇ
ಕಾರಣ ಕೇಳದೆ ನಂಬಿಕೆಯೊಳಗೆ
ಧುಮುಕಿದೆ ಈಜುತ್ತಲೇ ಹೋದೆ
ಅಲೆಗಳ ಮೇಲೆ ಜನಿಸಿದ ನೋವು ಸಂಕಟವನ್ನೆಲ್ಲ
ಮೌನದ ಹಂಗುಗೆಟ್ಟು ವಚನದ ಕಟ್ಟಿನಲಿ
ಹಾಡು ಕಟ್ಟಿದೆ ಆನಂದ ಸಾಗರದ ಶೃಂಗ ಸಿಕ್ಕವು.

ಸಿಕ್ಕೊಡನೆ ನಿನ್ನೊಡನೆ ಚೆನ್ನಮಲ್ಲಿಕಾರ್ಜುನ ಬರಿದಾದ
ಅಕ್ಕ ನೀನು ಬಯಲಾದೆ.



**ಕವಿತಾ ರೈ**
ಕನ್ನಡ ವಿಭಾಗ, ಮಂಗಳ ಗಂಗೋತ್ರಿ
ಕೊಣಾಜೆ, ದ.ಕ.ಜಿಲ್ಲೆ ೫೭೪೧೫೨

ಎಂದೆಲ್ಲಾ ಮೋದಿಯವರು ಹೇಳುತ್ತಿದ್ದಾರೆ. ಚುನಾವಣೆಗೆ ಮುಂಚೆ ತಾವು ಅಧಿಕಾರಕ್ಕೆ ಬಂದರೆ ಸ್ವಿಟ್ಜರ್‌ಲ್ಯಾಂಡ್, ಮಾರಿಷಸ್‌ಗಳಲ್ಲಿರುವ ಕಪ್ಪು ಹಣವನ್ನು ತಂದು ದೇಶದ ಎಲ್ಲಾ ಜನರ ಪ್ರತಿ ಕುಟುಂಬದ ಖಾತೆಗೆ ೧೫ ಲಕ್ಷ ರೂಪಾಯಿ ಜಮೆ ಮಾಡುವುದಾಗಿ ಹೇಳಿದ್ದರು. ದೇಶದ ಜನರೂ ಸಹ ಹದಿನೈದು ಲಕ್ಷ ಅಲ್ಲದಿದ್ದರೂ, ಏನೋ ಸ್ವಲ್ಪವನ್ನಾದರೂ ಮೋದಿ ನೀಡುತ್ತಾರೆ ಎಂಬ ಭರವಸೆ ಇಟ್ಟುಕೊಂಡಿದ್ದಾರೆ. ಮುಂಬರುವ ಬಜೆಟ್‌ನಲ್ಲಿ ಬಡವರಿಗೆ ಏನೋ ಉಡುಗೊರೆ ಕೊಡಬಹುದು. ಒಂದು ಸಾವಿರ ರೂಪಾಯಿ ನೀಡಿದರೂ ಸರ್ಕಾರಕ್ಕೆ ಅದು ದೊಡ್ಡ ಹೊರೆಯಾಗದು. ಕೇಂದ್ರ ಸರ್ಕಾರದ ಬಜೆಟ್‌ನ ಗಾತ್ರಕ್ಕೆ ಹೋಲಿಸಿದಾಗ ೨೫ ಸಾವಿರ ಕೋಟಿ ರೂಪಾಯಿ ತೀರಾ ಅಲ್ಪ ಮೊತ್ತ. ಈಗ ಸ್ವಲ್ಪ ಕಷ್ಟವನ್ನು ಸಹಿಸಿಕೊಳ್ಳಿ. ಮುಂದೆ ನಾನು ನಿಮಗೆ ಹಣ ಕೊಡುತ್ತೇನೆ, ಎಂದು ಜನರಲ್ಲಿ ಭ್ರಮೆ ಮೂಡಿಸಲು ಮೋದಿಯವರು ಪ್ರಯತ್ನಿಸುತ್ತಿದ್ದಾರೆ.

ಈ ಎಲ್ಲ ವಿದ್ಯಮಾನಗಳು ನಮಗೆ ನಮ್ಮ ಮುಂದಿರುವ ಸವಾಲುಗಳ ಅಗಾಧತೆಯ ಬಗ್ಗೆ ಎಚ್ಚರಿಕೆಯನ್ನು ನೀಡುತ್ತಿವೆ. ಅದನ್ನು ಪರಿಶೀಲಿಸುವ ಮೊದಲು ೧೯೭೫ರ ನೆನಪಿಗೆ ಹೊರಳಿ ನೋಡೋಣ. ಶ್ರೀಮತಿ ಇಂದಿರಾ ಗಾಂಧಿಯವರು ತುರ್ತು ಪರಿಸ್ಥಿತಿಯ ಸಂದರ್ಭದಲ್ಲಿ ಸಂಜಯ ಗಾಂಧಿಯವರು ಸಂವಿಧಾನೇತರ ಶಕ್ತಿಕೇಂದ್ರವಾಗಿ ಜಾರಿಗೊಳಿಸಿದ ಬಲಾತ್ಕಾರ ಸಂತಾನಶಕ್ತಿಹರಣ ಕಾರ್ಯಕ್ರಮವನ್ನು ನೆನಪಿಸಿಕೊಳ್ಳಿ. ಈ ಸಂದರ್ಭದಲ್ಲಿ ಕಡ್ಡಾಯ ಕುಟುಂಬ ಯೋಜನೆ ಹಾಗೂ ನೋಟು ರದ್ದತಿ ಯೋಜನೆಗಳನ್ನು ಖಂಡಿತವಾಗಿ ಹೋಲಿಕೆ ಮಾಡಬಹುದು. ದೇಶದ ಜನಸಂಖ್ಯೆ ಮಿತಿ ಮೀರಿ ಬೆಳೆಯುತ್ತಿದೆ. ಅದಕ್ಕೆ ಕಡಿವಾಣ ಹಾಕಬೇಕೆನ್ನುವ ಉದ್ದೇಶದಿಂದ ಅನೇಕರು ಆ ದಿನಗಳಲ್ಲಿ ಇಂದಿರಾ ಗಾಂಧಿ, ಸಂಜಯ್ ಗಾಂಧಿಯವರ ಕಡ್ಡಾಯ ಸಂತಾನಶಕ್ತಿಹರಣ ಯೋಜನೆಯನ್ನು ಬೆಂಬಲಿಸಿದ್ದರು. ೧೯೭೫–೭೬ರಲ್ಲಿ ಭಾರತ ಕಮ್ಯುನಿಸ್ಟ್ ಪಕ್ಷ ಸಹ ಬೆಂಬಲಿಸಿತ್ತು. ಎಂಬುದನ್ನು ಮರೆಯಬಾರದು. ಇಂದಿರಾ ಗಾಂಧಿಯವರಿಗೆ ಜನಪ್ರಿಯತೆ ಮತ್ತು ಜನ ಬೆಂಬಲವನ್ನು ತಂದಿತ್ತ ಸಂತಾನ ಶಕ್ತಿಹರಣ ಕಾರ್ಯಕ್ರಮ ಮುಂದಿನ ಚುನಾವಣೆಯಲ್ಲಿ ಅವರ ಸೋಲಿಗೆ ಕಾರಣವಾಯಿತು. ಸರ್ಕಾರಿ ಅಧಿಕಾರಿಗಳಿಗೆ ಸಂತಾನ ಶಕ್ತಿಹರಣ ಶಸ್ತ್ರಚಿಕಿತ್ಸೆಯ ಕೋಟಾ ನಿಗದಿಪಡಿಸಿದ ಕಾರಣ, ಪ್ರಾರಂಭದಲ್ಲಿ ಸ್ವಯಂಪ್ರೇರಣೆಯ ಕಾರ್ಯಕ್ರಮವಾಗಿದ್ದ ಅದು ಕ್ರಮೇಣ ಬಲಾತ್ಕಾರದ ಹೇರಿಕೆಯ ಕಾರ್ಯಕ್ರಮವಾಗಿ ಪರಿಣಮಿಸಿತು. ಜನವರಿ ೧೯೭೭ರಲ್ಲಿ ಇಂದಿರಾ ಗಾಂಧಿಯವರು ಚುನಾವಣೆ ಘೋಷಿಸಿದಾಗ ತಾವು ಸೋಲಬಹುದೆಂಬ ಅಂದಾಜು ಅವರಿಗಿರಲಿಲ್ಲ. ಭಾರತೀಯ ಜನಸಂಘ ಒಂದೆಡೆ, ಇನ್ನೊಂದೆಡೆ ಸಿಪಿಐ(ಎಂ)ನಂತಹ ಪಕ್ಷಗಳ ಬೆಂಬಲ ಪಡೆದ ಜಯಪ್ರಕಾಶ್ ನಾರಾಯಣರ ಜನತಾ ಪಾರ್ಟಿಯಂತಹ ಗೊಂದಲದ ಗೂಡು ತಮ್ಮನ್ನು ಸೋಲಿಸಲು ಶಕ್ತವಾಗುತ್ತದೆ ಎಂದು ಇಂದಿರಾ ಗಾಂಧಿಯವರು ಎಣಿಸಿರಲಿಲ್ಲ. ಮಾರ್ಚ್ ೧೯೭೭ರಲ್ಲಿ ಚುನಾವಣೆ ನಡೆದಾಗ ಅವರೇ ಸ್ವತಃ ಆಶ್ಚರ್ಯಪಡುವಂತೆ, ಅವರು ಸೋಲನ್ನಪ್ಪಿದ್ದರು. ಅದಕ್ಕೆ ಕಾರಣವೇನೆಂದರೆ, ಇಂದಿರಾ ಗಾಂಧಿಯವರಿಗೆ ವಾಸ್ತವ ಪರಿಸ್ಥಿತಿಯ ಅರಿವಾಗದಷ್ಟು ಜನಸಂಪರ್ಕದಿಂದ ದೂರವಾಗಿದ್ದರು. ಶ್ರೀಮಂತ ಕುಟುಂಬದಲ್ಲಿ ಹುಟ್ಟಿ ಬೆಳೆದ ಇಂದಿರಾ ಗಾಂಧಿಯವರು, ಸರ್ವಾಧಿಕಾರಿ ಮನೋಭಾವದ ವ್ಯಕ್ತಿಯಾಗಿ, ತಮ್ಮದೇ ಪಕ್ಷವನ್ನು ವಿಭಜಿಸುವ ಮಟ್ಟಕ್ಕೆ ಅವರು ಹೋಗಿದ್ದರು. ಅವರಿಗೆ ಜನತೆಯ ಸಂಕಷ್ಟಗಳಾಗಲಿ, ವಾಸ್ತವ ಸಂಗತಿಯ ಅರಿವೇ ಇರಲಿಲ್ಲ. ತಮ್ಮ ಸುತ್ತಲೂ ಇದ್ದ ಹೊಗಳು ಭಟ್ಟರನ್ನು ಅವರು ನಂಬಿದ್ದರು. ಇಂದಿರಾ ಅಂದರೆ ಇಂಡಿಯಾ, ಇಂಡಿಯಾ ಅಂದರೆ ಇಂದಿರಾ ಎಂದು ಹೇಳಿದ ದೇವಕಾಂತ ಬರೂವನಂತಹವರ ಹೊಗಳಿಕೆ ಅವರ ಮತ್ತೇರಿಸಿತ್ತು. ನರೇಂದ್ರ ಮೋದಿಯವರೂ ಸಹ ಇಂದಿರಾ ಗಾಂಧಿಯವರಂತೇ ಜನಸಂಪರ್ಕ, ವಾಸ್ತವಪ್ರಜ್ಞೆಯ ಅರಿವನ್ನು ಕಳೆದುಕೊಂಡಿದ್ದಾರೆಯೋ ? ಎನ್ನುವ ಅನುಮಾನ ಉಂಟಾಗುತ್ತದೆ. ನರೇಂದ್ರ ಮೋದಿಯವರಿಗೆ ಜನರ ಸಂಕಷ್ಟಗಳು ಅರ್ಥವಾಗುತ್ತಿಲ್ಲವೇ ? ಜನರು ತಮ್ಮೆಲ್ಲ ಸಂಕಷ್ಟಗಳನ್ನು ಮರೆತು ಅವರನ್ನು ಕ್ಷಮಿಸುತ್ತಾರೆಂಬ ಭ್ರಮೆಯಲ್ಲಿದ್ದಾರೆಯೇ ? ಈ ಎಲ್ಲಾ ಪ್ರಶ್ನೆಗಳನ್ನು ನಾನು ತಮ್ಮ ಮುಂದಿಡಬಯಸುತ್ತೇನೆ. ದೇಶದ ಜನ ಮೌನವಾಗಿದ್ದಾರೆ. ಬೀದಿಗಿಳಿದು ಪ್ರತಿಭಟಿಸುತ್ತಿಲ್ಲ, ತಮ್ಮ ಆಕ್ರೋಶ ತೋರಿಸುತ್ತಿಲ್ಲ. ಈ ಕಾರಣಕ್ಕಾಗಿ ಜನ ತಮ್ಮನ್ನು ಬೆಂಬಲಿಸುತ್ತಿದ್ದಾರೆ ಎಂದು ಮೋದಿಯವರು ಭಾವಿಸಿದಂತಿದೆ. ಇದು ಸತ್ಯವೇ ? ಇದು ವಾಸ್ತವವೇ ಎಂದು ನಾನು ನಿಮ್ಮನ್ನು ಕೇಳುತ್ತೇನೆ. ನನ್ನ ಅನಿಸಿಕೆ ಪ್ರಕಾರ ಬೀದಿಗಿಳಿದು ಪ್ರತಿಭಟಿಸುತ್ತಿಲ್ಲ ಎಂದ ಮಾತ್ರಕ್ಕೆ ಜನರಿಗೆ ಈ ತೀರ್ಮಾನದ ಬಗ್ಗೆ

ಸಿಟ್ಟು ಆಕ್ರೋಶಗಳಿಲ್ಲ, ಅಥವಾ ಮೋದಿಯವರ ತೀರ್ಮಾನಗಳಿಂದ ಅವರು ಸಂತುಷ್ಟರಾಗಿದ್ದಾರೆ ಎಂದಲ್ಲ. ಮೋದಿಯವರು ಕಪ್ಪುಹಣದ ವಿರುದ್ಧ, ಭ್ರಷ್ಟಾಚಾರದ ವಿರುದ್ಧ ಸಮರ ಸಾರುತ್ತೇನೆಂದರೆ ಜನ ಸಂತುಷ್ಟರಾಗುತ್ತಾರೆ, ನಗದು ರಹಿತ ಅರ್ಥವ್ಯವಸ್ಥೆ ತರುತ್ತೇನೆಂದರೆ ಬೆಂಬಲಿಸುತ್ತಾರೆ. ಆದರೆ ಅದನ್ನು ಸಾಧಿಸಲು ದೇಶದ ಇಡಿ ಜನರನ್ನು ಇಷ್ಟೆಲ್ಲಾ ಸಂಕಟ, ಗೋಳಾಟಗಳಿಗೆ ಗುರಿ ಮಾಡಬೇಕಿತ್ತೇ ? ನಿಮ್ಮ ಗುರಿ ಸಾಧನೆಗೆ ನೂರು ಜನರ ಬಲಿ ಅಗತ್ಯವಿತ್ತೇ ? ಇಷ್ಟೇ ದೊಡ್ಡ ಪ್ರಮಾಣದ ಉದ್ಯೋಗ ನಾಶ ಬೇಕಿತ್ತೇ ? ನಿಮ್ಮ ಉದ್ದೇಶ ಘನವಾಗಿದ್ದರೂ ಅದನ್ನು ಸಾಧಿಸುವ ರೀತಿ ಇದೇನೆ ಎಂಬ ಪ್ರಶ್ನೆಗಳನ್ನು ಜನರು ಕೇಳುವಂತಾಗಬೇಕು. ಜನರು ಸಹನೆಯಿಂದಿದ್ದಾರೆ, ಶಾಂತಿ ತಾಳ್ಮೆಯಿಂದಿದ್ದಾರೆ ಎಂದು ಭಾವಿಸಬೇಡಿ. ಸಹನೆಯ ಜನರ ಆಕ್ರೋಶ, ಸಾತ್ವಿಕ ಸಿಟ್ಟಿನ ಬಗ್ಗೆ ಎಚ್ಚರವಿರಲಿ. ಅದು ಆಸ್ಫೋಟಗೊಳ್ಳುವ, ಭುಗಿಲೇಳುವ ಎಲ್ಲಾ ಅಪಾಯಗಳಿವೆ. ಜನರ ತಾಳ್ಮೆಯನ್ನು ಗೌಣವಾಗಿ, ನಗಣ್ಯವಾಗಿ ಪರಿಗಣಿಸಬೇಡಿ. ಎಲ್ಲರೂ ತಮ್ಮನ್ನು ಕ್ಷಮಿಸಿದ್ದಾರೆ ಎಂದು ಭಾವಿಸಬೇಡಿ, ಮೋದಿಯವರೇ, ಮಾರ್ಚ್ ೧೧ರಂದು ಉತ್ತರ ಪ್ರದೇಶ, ಪಂಜಾಬ್, ಮಣಿಪುರ, ಉತ್ತರಾಖಂಡ್ ಮತ್ತು ಗೋವಾ ರಾಜ್ಯಗಳ ಚುನಾವಣೆಯಲ್ಲಿ ಜನರು ಏನು ತೀರ್ಮಾನವನ್ನು ಕೊಡಲಿದ್ದಾರೆ ಎನ್ನುವುದು ತಿಳಿಯಲಿದೆ. ಆಗ ನೋಟು ರದ್ದತಿ ತಮಗೆ ಒಳಿತೋ ಕೆಡಕೋ ತಿಳಿಯಲಿದೆ. ಈ ವಿಷಯದಲ್ಲಿ ನನ್ನ ತಿಳುವಳಿಕೆ ತಪ್ಪಿರಬಹುದು ? ಅಥವಾ ಮೋದಿಯವರು ತಪ್ಪಿರಬಹುದು ?

ಪ್ರಸ್ತುತ ನಮ್ಮ ಮುಂದೆ ಎಡಪಂಥೀಯರ ಮುಂದಿರುವ ಬೃಹತ್ ಸವಾಲು ಇದೆ. ಎಡಪಂಥೀಯ ಶಕ್ತಿಗಳು ದೇಶದ ಚರಿತ್ರೆಯಲ್ಲಿಯೇ ಹಿಂದೆಂದೂ ಇಲ್ಲದಷ್ಟು ಈಗ ದುರ್ಬಲವಾಗಿದೆ.




ಕಾಂಗ್ರೆಸ್ ಪಕ್ಷಕ್ಕೆ ಶೇ. ೨೦% ಮತಪ್ರಮಾಣವಿದ್ದರೂ ಕೇವಲ ೪೪ ಸೀಟುಗಳನ್ನು ಲೋಕಸಭೆಯಲ್ಲಿ ಹೊಂದಿದೆ. ಕಾಂಗ್ರೆಸ್ ಪಕ್ಷವೂ ಸಹ ಹಿಂದೆಂದೂ ಇಲ್ಲದಷ್ಟು ದುರ್ಬಲವಾಗಿದೆ. ಬಿಜೆಪಿಗೆ ಶೇ. ೩೧.೪ ರಷ್ಟೇ ಮತವಿದ್ದರೂ ಲೋಕಸಭೆಯಲ್ಲಿ ೨೮೨ ಸೀಟುಗಳ ಬಹುಮತವಿದೆ. ಇದು ಭಾರತೀಯ ರಾಜಕೀಯ ಪರಿಸ್ಥಿತಿಯ ವಾಸ್ತವ ಚಿತ್ರಣ. ಉತ್ತರ ಪ್ರದೇಶದಲ್ಲಿ ಏನೇ ಆದರೂ ಮುಂದಿನ ಲೋಕಸಭೆ ಚುನಾವಣೆ ೨೦೧೯ರಲ್ಲಿ ಬರಲಿದೆ. ಅದಕ್ಕೆ ಮುಂಚೆಯೇ ೨೦೧೮ರಲ್ಲಿ ಕರ್ನಾಟಕ ರಾಜ್ಯದಲ್ಲಿ ಚುನಾವಣೆ ಬರಲಿದೆ. ಮುಂಬರುವ ಚುನಾವಣೆಗಳಲ್ಲಿ ಎಲ್ಲಾ ಪ್ರಗತಿಪರರೆಂದುಕೊಳ್ಳುವ, ಪ್ರಜಾಪ್ರಭುತ್ವದಲ್ಲಿ ನಂಬಿಕೆ ಇರುವ ರಾಜಕೀಯ ಶಕ್ತಿಗಳು ನರೇಂದ್ರ ಮೋದಿಯವರ ವಿರುದ್ಧ ಒಂದಾಗುವುದು ಸಾಧ್ಯವೇ ? ಇದೇ ನಮ್ಮ ಮುಂದಿರುವ ದೊಡ್ಡ ಸವಾಲು. ಪಶ್ಚಿಮ ಬಂಗಾಳದಲ್ಲಿ ಮಮತಾ ಬ್ಯಾನರ್ಜಿ ಯವರು ತೃಣಮೂಲ ಕಾಂಗ್ರೆಸ್‌ನ ಜೊತೆಗಿರುವ ಭಿನ್ನಾಭಿಪ್ರಾಯವನ್ನು ಬದಿಗೊತ್ತಿ ಒಂದಾಗುವುದು ಸಿಪಿಎಂ ಪಕ್ಷಕ್ಕೆ ಸಾಧ್ಯವೇ ? ಅರವಿಂದ ಕೇಜ್ರಿವಾಲ್, ಎಡಪಕ್ಷಗಳು, ಯೋಗೇಂದ್ರ ಯಾದವ್, ಪ್ರಶಾಂತ್ ಭೂಷಣ್‌ರವರು ಭಿನ್ನಾಭಿಪ್ರಾಯವನ್ನು ಮರೆತು ಒಂದಾಗುವುದು ಸಾಧ್ಯವೇ ? ಈ ದೇಶದ ಪ್ರಗತಿಯಲ್ಲಿ ಕಾಳಜಿ, ಕಳಕಳಿ ಇರುವ ಪ್ರಗತಿಪರ ಶಕ್ತಿಗಳೆಲ್ಲವೂ ತಮ್ಮ ಭಿನ್ನಾಭಿಪ್ರಾಯ ಬಿಟ್ಟು ಒಂದಾಗುವರೋ ? ಅಥವಾ ಮೋದಿಯವರು ಬಿಜೆಪಿಯವರು ವಿರೋಧಿಗಳನ್ನು ಒಡೆದು ಈ ದೇಶವನ್ನು ಆಳಲು ಅವಕಾಶ ಕೊಡುವರೇ ? ಎನ್ನುವುದೇ ನಮ್ಮ ನಿಮ್ಮೆಲ್ಲರ ಮುಂದಿರುವ ದೊಡ್ಡ ಸವಾಲು. ಭವಿಷ್ಯದಲ್ಲಿ ಏನಾಗಲಿದೆ ಎನ್ನುವುದರ ಬಗ್ಗೆ ನಾವು ಊಹಿಸಬಹುದಷ್ಟೆ. ಜಗತ್ತಿನಾದ್ಯಂತ ಹಲವಾರು ಬದಲಾವಣೆಗಳು ಜರುಗುತ್ತಿವೆ. ಅಮೇರಿಕಾದಲ್ಲಿ ಡೊನಾಲ್ಡ್ ಟ್ರಂಪ್‌ರವರು ಅಧ್ಯಕ್ಷರಾಗಿ ಆಯ್ಕೆಯಾದ ಮೇಲೆ ಮಹಿಳೆಯರು ಅನೇಕ ನಗರಗಳಲ್ಲಿ ಡೊನಾಲ್ಡ್ ಟ್ರಂಪ್ ವಿರುದ್ಧ ಬೀದಿಗಿಳಿದು ಪ್ರತಿಭಟಿಸುತ್ತಿದ್ದಾರೆ. ನಮ್ಮ ದೇಶದಲ್ಲಿಯೂ ಅದೇ ಮಾದರಿಯ ಪ್ರತಿಭಟನೆಗಳನ್ನು ನಾವು ನೋಡುತ್ತೇವೆಯೇ ? ಪ್ರಗತಿಪರ ಶಕ್ತಿಗಳು ಎಡಚಿಂತನೆಯ, ರಾಜಕೀಯ ಶಕ್ತಿಗಳು ತಮ್ಮ ಪಕ್ಷಭೇದ ಮರೆತು ಒಂದಾಗಿ ಹೋರಾಡಲಿವೆಯೇ ? ಇದೇ ನನ್ನ ಆಶಯ ಹಾಗೂ ಆತಂಕವಾಗಿದೆ. ಇಂದು ನೀವು ನೋಡುತ್ತಿರುವ ವಿದ್ಯಮಾನಗಳನ್ನು ಸಾಮಾನ್ಯ ಜನರಿಗೆ ವಿವರಿಸಿ ತಿಳಿಸಬೇಕು. ಅರ್ಥವ್ಯವಸ್ಥೆಯಿಂದ ನೋಟು ರದ್ದತಿಯ ಮೂಲಕ ಹೊರತೆಗೆದ ಬಹುತೇಕ ಹಣವು ಶೇ. ೯೭ರಷ್ಟು ಮತ್ತೆ ವ್ಯವಸ್ಥೆಯೊಳಗೆ ವಾಪಸ್ ಬಂದಿದೆ. ಹಾಗಾದರೆ ಕಪ್ಪು ಹಣದ ವಿರುದ್ಧ ಹೋರಾಟ ಏನಾಯಿತು ? ಇದೊಂದು ದೊಡ್ಡ ಮೋಸ ಎಂದು ಜನರಿಗೆ ತಿಳಿಸಬೇಕು. ನೋಟು ರದ್ದತಿಯಿಂದ ಕಪ್ಪು ಹಣ ತೊಲಗುವುದಿಲ್ಲ ಎಂದು ಜನರಿಗೆ ಮನವರಿಕೆ ಮಾಡಬೇಕು. ಎಲ್ಲಾ ಪ್ರಗತಿಪರ ಶಕ್ತಿಗಳು ಒಂದಾಗಬೇಕು. ನಮ್ಮ ನಿಷ್ಕ್ರಿಯತೆಯಿಂದ ಹೊರಬಂದು ಹೋರಾಡಲು ಇದು ಸಕಾಲ. ಅಧೀರರಾಗದಿರಿ, ಆಶಾವಾದಿಗಳಾಗಿ, ನಿರಾಶೆಗೆ ಖಂಡಿತ ಕಾರಣವಿಲ್ಲ. ಕತ್ತಲೆಯ ಕರಾಳ ಗಳಿಗೆಗಳು ಸೂರ್ಯೋದಯದ ಕೆಲವು ನಿಮಿಷಗಳ ಮೊದಲಷ್ಟೇ ಎನ್ನುವ ಮಾತುಗಳೊಂದಿಗೆ ನಾನು ವಿರಮಿಸುತ್ತೇನೆ. ಧನ್ಯವಾದಗಳು.

*(ಭಾರತ ಕಮ್ಯುನಿಸ್ಟ್ ಪಕ್ಷ, ಬೆಂಗಳೂರು ಜಿಲ್ಲಾ ಮಂಡಳಿ, ದಿನಾಂಕ ೨೬.೦೧.೨೦೧೭ರಂದು ಗಾಂಧಿ ಭವನದಲ್ಲಿ ಏರ್ಪಡಿಸಿದ್ದ ವಿಚಾರ ಸಂಕಿರಣದಲ್ಲಿ ಪ್ರಸ್ತುತಪಡಿಸಲಾದ ಭಾಷಣ.)*

ಮೂಲ : **ಪರಂಜಯ್ ಗುಹ ಟಾಕುರ್ತಾ**
ಕನ್ನಡಕ್ಕೆ : **ವಿಜಯ ಭಾಸ್ಕರ್ ಡಿ. ಎ.**
ನಂ. ೧೦೪೦, ೧೩ನೇ ಅಡ್ಡರಸ್ತೆ, ಜೆ. ಪಿ. ನಗರ, ೧ನೇ ಹಂತ ಬೆಂಗಳೂರು – ೫೬೦ ೦೭೮




**ಶ್ರೀಮತಿ ಹೆಚ್. ಆರ್. ಸುಜಾತಾರವರು ರಚಿಸಿ, ನವಕರ್ನಾಟಕ ಪ್ರಕಾಶನವು ಪ್ರಕಟಸಿರುವ 'ನೀಲಿ ಮೂಗಿನ ನತ್ತು' ಪುಸ್ತಕವನ್ನು ಶ್ರೀ ಕೃಪಾಕರ ಮತ್ತು ಸೇನಾನಿಯವರು ದಿನಾಂಕ ೧೯-೨-೨೦೧೭ರಂದು ಬೆಂಗಳೂರಿನ ಚಿತ್ರಕಲಾ ಪರಿಷತ್ತಿನಲ್ಲಿ ಲೋಕಾರ್ಪಣೆ ಮಾಡಿದರು. ವೇದಿಕೆಯಲ್ಲಿ ಕವಯಿತ್ರಿ ಶ್ರೀಮತಿ ಜ. ನಾ. ತೇಜಶ್ರೀ, ಹಿರಿಯ ವಿದ್ವಾಂಸ ಡಾ|| ಬಿ. ಎ. ವಿವೇಕ ರೈ, ಲೇಖಕಿ ಹೆಚ್. ಆರ್. ಸುಜಾತಾ, ಸಾಹಿತಿ ಕೃಷ್ಣ ಮಾಸಡಿ ಹಾಗೂ ನವಕರ್ನಾಟಕ ಪ್ರಕಾಶನ ವ್ಯವಸ್ಥಾಪಕ ನಿರ್ದೇಶಕ ಡಾ|| ಸಿದ್ದನಗೌಡ ಪಾಟೀಲ ಉಪಸ್ಥಿತರಿದ್ದರು.**

## ಹೊಸ ಓದು

### ದಲಿತ ಸಂವೇದನೆ



**(ಅಂಬೇಡ್ಕರ್‌ವಾದಿ ಚಿಂತನೆಯ ಬರಹಗಳು)**

*ಅಪ್ಪಗೆರೆ ಸೋಮಶೇಖರ್*

**ಪುಟ : ೨೨೦**

**ಬೆಲೆ : ರೂ. ೧೫೦**

**ಲಡಾಯಿ ಪ್ರಕಾಶನ**

೨೧, ಪ್ರಸಾದ್ ಹಾಸ್ಟೆಲ್,
ಗದಗ – ೫೮೨ ೧೦೧

*ಅಪ್ಪಗೆರೆ ಸೋಮಶೇಖರ್ ಅವರು ಬರೆದಿರುವ ಈ ಕೃತಿಯಲ್ಲಿ ದಲಿತರ ಏಳ್ಗೆಗಾಗಿ ಜೀವನ ತೇಯ್ದ ೧೨ ಜನ ಮಹನೀಯರ ಅಸಾಧಾರಣ ಬದುಕಿನ ಬಗ್ಗೆ ಹೀಗೆ ದಾಖಲಿಸಿದ್ದಾರೆ: 'ಇವರು ಅಪರೂಪದಲ್ಲಿ ಅಪರೂಪ. ತಮ್ಮ ಸ್ವಂತದ ಒಳಿತು ಕೆಡಕುಗಳ ಬಗೆಗೆ ಕಿಂಚಿತ್ ಯೋಚಿಸದೆ ಸಮುದಾಯದ ಕಷ್ಟಸಾಗರಕ್ಕೆ ಧುಮುಕುತ್ತಾರೆ. ಕುಟುಂಬ, ಆಸ್ತಿಗಳೆಂಬ ಇಹಪರದ ಆಮಿಷಗಳಿಗೆ ಮಣಿಯದೆ ಲೋಕಸಂಸಾರಿಯಾಗಿ ಎಷ್ಟೋ ಕಾಲದಿಂದ ಇರುವ ಅಂಧಕಾರ ತೊಡೆಯಲು ಒಂದು ದೀಪವನ್ನಾದರೂ ಹಚ್ಚಿಡಲು ಬಡಿದಾಡುತ್ತಾರೆ. ಇವರು ಪ್ರಸಿದ್ಧರಷ್ಟೇ ಅಲ್ಲ, ಮಹಾನ್ ವ್ಯಕ್ತಿಗಳು. ಬರುವ ತಲೆಮಾರುಗಳ ನೆನಪಿನಲ್ಲಿ ಮಾದರಿಗಳಾಗಿ ಉಳಿಯ ಬೇಕಾದವರು'. ನಾಮದೇವ ನಿಮ್ಗಾಡೆ ಅವರ ಆತ್ಮಕಥೆ, ಭಾರತರತ್ನ ನೆಲ್ಸನ್ ಮಂಡೇಲ, ಪ್ರಬುದ್ಧ ಭಾರತದ ಪ್ರತಿಪಾದಕ ಡಾ॥ ಬಿ. ಆರ್. ಅಂಬೇಡ್ಕರ್, ಸಿದ್ಧಲಿಂಗಯ್ಯನವರ ಸಾಹಿತ್ಯ ಕೃಷಿ ಮತ್ತು ದೇವನೂರು ಅವರ ಎದೆಗೆ ಬಿದ್ದ ಅಕ್ಷರ ಕೃತಿಯ ಬಗ್ಗೆ ಮತ್ತು ಮುಳ್ಳೂರು ನಾಗರಾಜ ಅವರ ಬಗೆಗಿನ ಒಂದು ಸಂಕ್ಷಿಪ್ತ ಚಿತ್ರಣವೂ ಇದೆ. ಇಷ್ಟೆಲ್ಲ ಒಳಗೊಂಡಿರುವ ಈ ಕೃತಿಯಲ್ಲಿ ಇನ್ನೂ ಕೆಲವು ದಲಿತ ದ್ರಷ್ಟಾರರ ಚಿತ್ರಣಗಳು ಮತ್ತು ಅವರ ಸಾಮಾಜಿಕ ಮತ್ತು ಸಾಹಿತ್ಯ ಕೊಡುಗೆಗಳು ಸೇರಿಲ್ಲ ಎನ್ನಬಹುದು. ಆದರೆ ಈ ಕೃತಿಯಲ್ಲಿ ಲೇಖಕರು ದಾಖಲಿಸಿರುವ ಮಹನೀಯರನ್ನೆಲ್ಲ ದಲಿತ ಸಮುದಾಯಗಳು ನೆನಪಿಸಿಕೊಳ್ಳುವಂತಹವರು ಮತ್ತು ಪ್ರಾತಃಸ್ಮರಣೀಯರು. ದಲಿತರು ಮತ್ತು ಸಾಮಾಜಿಕ ಕಾಳಜಿವು+++ಖಟ  ಳ್ಳವರೆಲ್ಲ ಈ ಕೃತಿಯನ್ನು ಒಮ್ಮೆ ಓ ದ ’ ಬ ’ ೀ ಕ ಾ ಗಿ ದ ’ .*

### ನಯಾಗರಕ್ಕೆ ಐನೂರು ಮೈಲಿ (ಹೃದಯದಿಂದ ಹೃದಯಕ್ಕೆ)

*ಎಸ್. ಆರ್. ಗೌತಮ್*

**ಪುಟ : ೧೬೦** **ಬೆಲೆ : ರೂ. ೧೨೫**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

*ಎಸ್. ಆರ್. ಗೌತಮ್ ಅವರು ಕಾನೂನು ತಜ್ಞರು. ಇವರು ಸುಮಾರು ೩೬ ವರ್ಷಗಳ ಹಿಂದೆ ತಮ್ಮ ಪುಟ್ಟ ಮಗಳನ್ನು ಹೃದಯದ ಶಸ್ತ್ರಚಿಕಿತ್ಸೆಗಾಗಿ ಅಮೆರಿಕಾಗೆ ಕರೆದುಕೊಂಡು ಹೋಗುತ್ತಾರೆ. ಆಗ ಭಾರತದಲ್ಲಿ ಹೃದಯದ ಶಸ್ತ್ರಚಿಕಿತ್ಸೆ ಮಾಡುವ ಪರಿಣತಿ ಇನ್ನೂ ಬಂದಿರಲಿಲ್ಲ. ಕೃತಿಯನ್ನು ಓದುತ್ತ ಹೋದಂತೆ ಓದುಗರ ಮನಸ್ಸಿನ ಆಳಕ್ಕೆ ಇಳಿಯುತ್ತಾ ಹೋಗುತ್ತದೆ. ಸಾವಿರಾರು ಮೈಲಿಗಳ ದೂರದ ದೇಶದಲ್ಲಿ ಗೌತಮ್ ತಮ್ಮ ಮಗಳನ್ನು ಉಳಿಸಿಕೊಳ್ಳಲು ನಡೆಸುವ ಸಾಹಸದೊಂದಿಗೆ ಆಪತ್ತು ಬಂದಾಗ ಧೈರ್ಯವನ್ನು ಪ್ರದರ್ಶಿಸುತ್ತ, ಕಷ್ಟವನ್ನು ಹಗುರವಾಗಿಸಿಕೊಳ್ಳಲು ತಮಾಷೆ ಮಾಡುತ್ತ ಎಲ್ಲವನ್ನು ಸಾಧಾರಣವಾಗಿ ಮೆಟ್ಟಿನಿಲ್ಲುತ್ತ ಮುಂದಕ್ಕೆ ಸಾಗುತ್ತಾರೆ. ಯಾವುದೇ ಒಬ್ಬ ತಜ್ಞ, ಆತನ ವಿಷಯಕ್ಕೆ ಸಂಬಂಧಪಟ್ಟ ಕೃತಿಯನ್ನು ರಚಿಸಿದರೆ ಅದಕ್ಕೆ ನ್ಯಾಯ ಒದಗಿಸುತ್ತಾನೆ ಎನ್ನುವುದು ಸಹಜ ಮಾತು. ಆದರೆ ಈ ಕಾನೂನು ತಜ್ಞ 'ಹೃದಯದಿಂದ ಹೃದಯಕ್ಕೆ' ಎಂಬ ವೈದ್ಯಕೀಯ ವಿಷಯದ ಬಗ್ಗೆ ಪುಸ್ತಕ ಬರೆದು ಗೆದ್ದಿದ್ದಾರೆ. ಈ ಪುಸ್ತಕವನ್ನು ಓದಿದ ಪ್ರಖ್ಯಾತ ಹೃದಯ ತಜ್ಞ ಡಾ॥ ಎನ್. ಪ್ರಭುದೇವ್, ಗೌತಮ್ ಅವರ ವೈದ್ಯಕೀಯ ಸಾಹಸಗಾಥೆಯನ್ನು ಓದಿ ಮೆಚ್ಚಿಕೊಂಡು ಮೂರನೇ ಮುದ್ರಣಕ್ಕೆ ನಾಲ್ಕು ಮಾತು ಬರೆದುಕೊಟ್ಟಿದ್ದಾರೆ. ಡಾ॥ ಗೊರೂರು ರಾಮಸ್ವಾಮಿ ಅಯ್ಯಂಗಾರ್ ಮತ್ತು ಡಾ॥ ಅನುಪಮ ಅವರ ಮೆಚ್ಚುಗೆ ಪತ್ರಗಳೂ ಇದರಲ್ಲಿ ಸೇರಿವೆ. ಇದು ನವಕರ್ನಾಟಕ ಹೊರ ತಂದಿರುವ ಪರಿಷ್ಕೃತ ನಾಲ್ಕನೇ ಮುದ್ರಣವಾಗಿದ್ದು ಮಕ್ಕಳನ್ನು ಪ್ರೀತಿ ಮಾಡುವ ಪೋಷಕರು, ಪೋಷಕರನ್ನು ಪ್ರೀತಿ ಮಾಡುವ ಮಕ್ಕಳು ಒಮ್ಮೆ ಓದುವಂತಹ ಬೆಚ್ಚಗಿನ ಅನುಭವ ನೀಡುವ ಕೃತಿ.*

### ಜಾಗತೀಕರಣ ಮತ್ತು ದಲಿತರು

*ಮರಾಠಿ ಮೂಲ : ಡಾ॥ ಆನಂದ್ ತೇಲ್ತುಂಬ್ಡೆ, ಕನ್ನಡಕ್ಕೆ : ನಾ. ದಿವಾಕರ*

**ಪುಟ : ೮೮ + ೪** **ಬೆಲೆ : ರೂ. ೬೦**

**ಲಡಾಯಿ ಪ್ರಕಾಶನ,** ೨೧, ಪ್ರಸಾದ್ ಹಾಸ್ಟೆಲ್, ಗದಗ – ೫೮೨ ೧೦೧

*ಚಿಂತಕ ಮತ್ತು ಮಾನವ ಹಕ್ಕುಗಳ ಹೋರಾಟಗಾರ ಆನಂದ್ ತೇಲ್ತುಂಬ್ಡೆ ಅವರು ಬರೆದಿರುವ ಸಂಕ್ಷಿಪ್ತ ಪುಸ್ತಕ 'ಜಾಗತೀಕರಣ ಮತ್ತು ದಲಿತರು'. ಕಳೆದ ಮೂರು–ನಾಲ್ಕು ದಶಕಗಳ ಹಿಂದೆ ಪ್ರಾರಂಭವಾದ ಜಾಗತೀಕರಣ, ಖಾಸಗೀಕರಣ ಮತ್ತು ಉದಾರೀಕರಣ ವಿಶ್ವವನ್ನು ಆವರಿಸಿಕೊಳ್ಳುತ್ತಾ ಈಗ ಎಲ್ಲಿಗೆ ತಲುಪಿದೆ ಎನ್ನುವುದನ್ನು ನಾವು ನೋಡುತ್ತಿದ್ದೇವೆ. ಕಳೆದ ಐದು ಶತಮಾನಗಳಿಂದ ಪ್ರಪಂಚವನ್ನೆಲ್ಲ ಲೂಟಿ ಮಾಡಿದ ಐರೋಪ್ಯ ದೇಶಗಳು, ಭಾರತವನ್ನು ಹೆಚ್ಚಾಗಿ ಲೂಟಿ ಮಾಡಿದ ಇಂಗ್ಲೆಂಡ್ ಕೊನೆಗೂ ಆಯಾ ದೇಶಗಳಿಗೆ ಸ್ವಾತಂತ್ರ್ಯವನ್ನು ನೀಡಿ ಹಿಂದಿರುಗಬೇಕಾಯಿತು. ಆದರೆ ಹಳೆ ಬಾಟಲಿನಲ್ಲಿ ಹೊಸ ಮದ್ಯವನ್ನು ತುಂಬಿ ಮಾರುವಂತೆ ಈಗ ಮತ್ತೆ ಅಮೆರಿಕಾ–ಯುರೋಪ್–ಇಂಗ್ಲೆಂಡ್ ದೇಶಗಳೆಲ್ಲ ಸೇರಿ ಅಭಿವೃದ್ಧಿ ಹೊಂದುತ್ತಿರುವ ಮತ್ತು ಬಡ ದೇಶಗಳ ಮೇಲೆ ಜಾಗತೀಕರಣ ಎಂಬ ಹೊಸ ಅಮಲನ್ನು ಚೆಲ್ಲಿದವು. ಇದಕ್ಕೆ ಸಹಾಯಕವಾಗಿ ಅನೇಕ ವಿಶ್ವ ಹಣಕಾಸು ಸಂಸ್ಥೆಗಳು ಸಾಕಷ್ಟು ಪರಿಶ್ರಮ ವಹಿಸಿ ಪ್ರತಿಯೊಂದು ದೇಶದಲ್ಲೂ ಅದಕ್ಕೆ ತಕ್ಕ ನೀತಿಗಳನ್ನು ಅಳವಡಿಸಿ ಅನುಷ್ಠಾನಗೊಳಿಸಿದವು. ಆನಂದ್ ತೇಲ್ತುಂಬ್ಡೆ ಇದನ್ನೆಲ್ಲ ಬಹಳ ಸಂಕ್ಷಿಪ್ತವಾಗಿ ಅಭಿವೃದ್ಧಿ ಹೊಂದುತ್ತಿರುವ ಮತ್ತು ಬಡ ದೇಶಗಳ ಆಹಾರ ಭದ್ರತೆ, ಹಣದುಬ್ಬರ, ಉದ್ಯೋಗ, ಬಡತನ–ದಾರಿದ್ರ್ಯಗಳ ಬಗ್ಗೆ ವಿಶ್ಲೇಷಿಸಿದ್ದಾರೆ. ಇನ್ನು ಭಾರತದಲ್ಲಿ ಪ್ರತ್ಯೇಕವಾಗಿ ಬರೆಯುತ್ತ ಭಾರತದಲ್ಲಿನ ದಲಿತರ ಮೀಸಲಾತಿ ಮತ್ತು ಶೈಕ್ಷಣಿಕ ಸಂಸ್ಥೆಗಳಲ್ಲಿ ಹಣಕಾಸು ಸಹಾಯ, ಉದ್ಯೋಗ ಮೀಸಲಾತಿ, ದೌರ್ಜನ್ಯಗಳು ಮತ್ತು ಸಾಮಾಜಿಕ–ಸಾಂಸ್ಕೃತಿಕ ದಮನ ಇತ್ಯಾದಿಯ ಬಗ್ಗೆ ಬರೆದು ಕೆಲವು ಅಂಕಿಅಂಶಗಳ ಕೋಷ್ಟಕಗಳನ್ನು ನೀಡಿದ್ದಾರೆ. ನಾ. ದಿವಾಕರ ಅವರ ಅನುವಾದ ಚೆನ್ನಾಗಿದೆ.*

– **ಡಾ॥ ಎಂ. ವೆಂಕಟಸ್ವಾಮಿ,** *ಕಸವನಹಳ್ಳಿ ರಸ್ತೆ, ಬೆಂಗಳೂರು – ೩೫*

### ಸಾಹಿತ್ಯ ಯಾನ (ವಿಚಾರ–ವಿಮರ್ಶೆ)

*ಡಾ॥ ಕಾ. ವೆಂ. ಶ್ರೀನಿವಾಸಮೂರ್ತಿ*

**ಪುಟ : ೨೪೮** **ಬೆಲೆ : ರೂ. ೨೦೦**

**ಅಕ್ಷರ ಮಂಟಪ,** ನಂ. ೯ನೇ ಬಿ ಮುಖ್ಯ ರಸ್ತೆ, ಹಂಪಿ ನಗರ, ವಿಜಯನಗರ, ಬೆಂಗಳೂರು – ೫೬೦ ೧೦೪

*ಸಾಹಿತ್ಯ ಯಾನ – ಇದು ಡಾ॥ ಕಾ. ವೆಂ. ಶ್ರೀನಿವಾಸಮೂರ್ತಿ ಅವರ ಸಾಹಿತ್ಯ ವಿಮರ್ಶೆ ಮತ್ತು ವಿಚಾರ ಸಾಹಿತ್ಯದ ಬರಹಗಳ ಸಂಕಲನವಾಗಿದೆ. ಇದರಲ್ಲಿ ೪೧ ಲೇಖನಗಳಿವೆ. ಕುಮಾರವ್ಯಾಸನ ಕಾವ್ಯ, ವಚನ ಭಾರತ, ವಚನ ಸಾಹಿತ್ಯ, ಶೈಲಿಶಾಸ್ತ್ರ, ದಲಿತ ಆತ್ಮಕಥನಗಳು, ಇತ್ತೀಚಿನ ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದ ಇತ್ಯಾದಿ ಸಾಹಿತ್ಯ ವಿಮರ್ಶೆಯ ಲೇಖನಗಳೊಂದಿಗೆ, ವಿದ್ಯುನ್ಮಾನ ಮಾಧ್ಯಮಗಳು ಮತ್ತು ಸಾಂಸ್ಕೃತಿಕ ಪ್ರಕ್ಷುಬ್ಧತೆ, ಕೇಂದ್ರ ಮತ್ತು ರಾಜ್ಯಗಳ ಸಂಬಂಧ, ಮರುಚಿಂತನೆ, ಭಾಷೆಗೆ ಹೊರತಾದ ಸಂವಹನ ವ್ಯವಸ್ಥೆಗಳು, ಕನ್ನಡ ಚಳುವಳಿಗೊಂದು ಅಧ್ಯಯನ ಶಿಬಿರ ಅಗತ್ಯವೇ? ಇತ್ಯಾದಿ ವಿಚಾರ ಸಾಹಿತ್ಯದ ಲೇಖನಗಳಿವೆ. ಅಲ್ಲದೇ ಕನಕದಾಸ, ಡಾ॥ ಸಿದ್ದಲಿಂಗಯ್ಯ, ಸ್ತ್ರೀವಾದ ಕುರಿತ ಭಾಷಣ ಮೂಲದ ಲೇಖನಗಳಿವೆ ಇಲ್ಲಿ. ಕೃತಿ ಕೇಂದ್ರಿತ ನೆಲೆಯಲ್ಲಿ ಎಚ್. ಎಂ. ಚನ್ನಯ್ಯ, ಕೀ. ರಂ. ನಾಗರಾಜ್, ಶ್ರೀಕೃಷ್ಣ ಆಲನಹಳ್ಳಿ, ಎಸ್. ಎಲ್. ಭೈರಪ್ಪ, ದೊಡ್ಡರಂಗೇಗೌಡ, ನಲ್ಲೂರು ಪ್ರಸಾದ್, ಚಂದ್ರಶೇಖರ ನಂಗಲಿ ಮುಂತಾದವರ ಕೃತಿಗಳನ್ನು ಕುರಿತ ಲೇಖನಗಳೂ ಇಲ್ಲಿವೆ.*

– **ಶ್ರೀಸುಮಿತ್ರಾಸುತ,** *ಅಗಸಬಾಳ*

# ದಂಗಲ್: ಎರಡು ನೋಟಗಳು

ಸತ್ಯ ಎಸ್.

> ಮಕ್ಕಳ ಇಚ್ಛೆಗೆ ವಿರುದ್ಧವಾಗಿ ನಡೆದುಕೊಂಡಿದ್ದು ಎನ್ನುವುದು, ಹೊರಗೆ ನಿಂತು ನೋಡುವ ನಮಗೆ ಮಕ್ಕಳ ಹಕ್ಕಿನ ಉಲ್ಲಂಘನೆಯಾಗಿ ಕಾಣಿಸುವುದು ಸಹಜ. ಆದರೆ ಹರಿಯಾಣದಲ್ಲಿ ಹೆಣ್ಣುಮಕ್ಕಳು ಹುಟ್ಟುವುದು, ಬದುಕಿ ಉಳಿಯುವುದೇ ಇನ್ನೂ ಕಷ್ಟವಾಗಿರುವ ಸಂದರ್ಭದಲ್ಲಿ ಹೆಣ್ಣು ಮಕ್ಕಳನ್ನು ಅಸಾಂಪ್ರದಾಯಿಕ ಕ್ಷೇತ್ರವೊಂದರಲ್ಲಿ ಔನ್ನತ್ಯಕ್ಕೆ ಏರಿಸುವ ವ್ಯಕ್ತಿಯಾಗಿ ನೋಡುವುದು ಹೆಚ್ಚು ಸೂಕ್ತ ಎನ್ನಿಸುತ್ತದೆ. ಮದುವೆಯಾಗುವ ಗೀತಾ ಮತ್ತು ಬಬಿತಾಳ ಸ್ನೇಹಿತೆ ಹೇಳುವಂತೆ, 'ನಿಮ್ಮ ಅಪ್ಪ ಕನಿಷ್ಠ ನಿಮ್ಮ ಬಗ್ಗೆ ಯೋಚಿಸುತ್ತಿದ್ದಾನಲ್ಲ' ಎನ್ನುವ ಮಾತು ಹರಿಯಾಣದ ಪರಿಸ್ಥಿತಿಯಲ್ಲಿ ಮಹತ್ವದ್ದಾಗಿ ಕಾಣುತ್ತದೆ.

ಬಾಲಿವುಡ್‌ನ ಇತಿಹಾಸದಲ್ಲಿ ಎರಡನೇ ಅತಿ ಹೆಚ್ಚು ಗಳಿಕೆಯ (೭೪೧ ಕೋಟಿ ರೂಪಾಯಿ) ಚಿತ್ರವಾಗಿ ಮುನ್ನಡೆದಿರುವ 'ದಂಗಲ್' ಮಿಸ್ಟರ್ ಪರ್ಫೆಕ್ಷನಿಸ್ಟ್ ಅಮೀರ್‌ಖಾನ್‌ನ ಮತ್ತೊಂದು ಮಾಸ್ಟರ್ ಪೀಸ್. (ಅತಿ ಹೆಚ್ಚು ಗಳಿಕೆಯ ಚಿತ್ರ ಪಿಕೆ–೭೯೨ ಕೋಟಿ, ಕೂಡ ಅಮೀರ್‌ಖಾನ್ ನಟನೆಯ ಚಿತ್ರವೇ)

ತಾರೆಜಮೀನ್ ಪರ್, ಲಗಾನ್, ತ್ರೀ ಈಡಿಯಟ್ಸ್, ಗಜನಿ, ಪಿಕೆನಂತಹ ಸಿನಿಮಾಗಳನ್ನು ಕೊಟ್ಟಿರುವ ಈ ಮಹಾನ್ ಕಲಾವಿದನ ಚಿತ್ರಗಳೆಂದರೆ 'ಇದರಲ್ಲಿ ಏನು ಮಾಡಿದ್ದಾನೆ?' ಎಂದು ಕುತೂಹಲ, 'ಏನಾದ್ರೂ ಸರಿಯಾಗಿ ಹೇಳಿರ್ತಾನೆ' ಎಂಬ ಹಂಬಲ, 'ಹೊಸದೇನಿರಬಹುದು?' ಎಂಬ ನಿರೀಕ್ಷೆಗಳ ಮೊತ್ತ. ಇವೆಲ್ಲದಕ್ಕೆ ಸರಿಯಾಗಿ, ಸಿನಿಮಾ ಎಂದರೆ ಮನರಂಜನೆ ಮಾತ್ರ ಅಲ್ಲ ಎನ್ನುವವರು ಹಾಗೂ ಮನರಂಜನೆಗಾಗಿಯೇ ಸಿನಿಮಾ ಎನ್ನುವವರು – ಈ ಇಬ್ಬರೂ ತಮ್ಮ ಒಳ–ಹೊರಗನ್ನು ಒಮ್ಮೆ ನೋಡಿಕೊಳ್ಳುವಂತೆ ಮಾಡುವುದರಿಂದಲೇ ಅಮೀರ್‌ಖಾನ್ ಸಿನಿಮಾಗಳು ಯಶಸ್ವಿ ಎನಿಸಿಕೊಳ್ಳುತ್ತಿವೆ.

ಬಾಲಿವುಡ್‌ನ ಬಾದ್‌ಶಾ ಶಾರುಖ್‌ಖಾನ್ ನಟನೆಯ 'ರಯೀಸ್' ಚಿತ್ರದ ಜೊತೆಜೊತೆಗೇ ಬಿಡುಗಡೆಯಾಗಿ, ರಯೀಸ್‌ಅನ್ನು ಮೀರಿ ದಂಗಲ್ ಜನಪ್ರಿಯತೆ ಗಳಿಸಿದೆ ಎಂದರೆ ಪ್ರೇಕ್ಷಕರನ್ನು ಹಗುರವಾಗಿ ನೋಡಬಾರದು ಎಂದು ಸಾಬೀತುಪಡಿಸಿದ್ದಾನೆ ಅಮೀರ್‌ಖಾನ್.

ಇಂತಹ ಅಮೀರ್‌ಖಾನ್‌ನ 'ದಂಗಲ್' ಚಿತ್ರಕ್ಕೆ ನನ್ನ ಆಪ್ತ ವಲಯದಲ್ಲಿ ಎರಡು ವಿಭಿನ್ನ ಬಗೆಯ ಪ್ರತಿಕ್ರಿಯೆಗಳು ಬಂದಿವೆ. ಒಂದೇ ಕಾಲಘಟ್ಟದಲ್ಲಿ ಇರುವ, ಹೆಚ್ಚಿನ ವಿಚಾರಗಳಲ್ಲಿ ಸಮಾನ ಮನಸ್ಕರಾದ ಎರಡು ತಲೆಮಾರಿನವರು ಈ ಚಿತ್ರಕ್ಕೆ ಪ್ರತಿಕ್ರಿಯಿಸಿರುವ ವಿಭಿನ್ನ ರೀತಿಗಳು ಆಸಕ್ತಿಕರವಾಗಿವೆ. ಈ ಎರಡು ಪ್ರತಿಕ್ರಿಯೆಗಳನ್ನು ನೋಡುವ ಮೊದಲು ಸಿನಿಮಾದ ಕಥೆಯನ್ನು ಸ್ಥೂಲವಾಗಿ ಹೇಳಿಬಿಡುವೆ.

ಹರಿಯಾಣದ ಮಹಾವೀರ್ ಸಿಂಗ್ ಪೋಘಟ್ ರಾಷ್ಟ್ರಮಟ್ಟದ ಕುಸ್ತಿಪಟು. ಆದರೆ ಕುಟುಂಬದ ಬೆಂಬಲ ಹಾಗೂ ಆರ್ಥಿಕ ನೆರವು ಇಲ್ಲದೆ ಆತ ಅಂತರರಾಷ್ಟ್ರೀಯ ಮಟ್ಟ ತಲುಪಲು ಸಾಧ್ಯವಾಗುವುದಿಲ್ಲ. ದೇಶಕ್ಕಾಗಿ ಚಿನ್ನ ಗೆಲ್ಲಬೇಕೆಂಬ ಕನಸನ್ನು ತನ್ನ ಮಗನಲ್ಲಿ ಸಾಕಾರಗೊಳಿಸುವ ಕನಸು ಕಾಣುವ ಮಹಾವೀರ್‌ಗೆ ಸಾಲಾಗಿ ನಾಲ್ಕು ಹೆಣ್ಣುಮಕ್ಕಳು. ಗಂಡು ಮಗುವಾಗದೆ ಕನಸು ನನಸಾಗುವುದಿಲ್ಲ ಎಂಬ ನಿರಾಸೆಯಲ್ಲಿರುವಾಗ ಅವನ ಹೆಣ್ಣುಮಕ್ಕಳು ತಮ್ಮನ್ನು ಕೆಣಕಿದ ಗಂಡು ಹುಡುಗರನ್ನು ಚೆನ್ನಾಗಿ ಥಳಿಸುತ್ತಾರೆ. ಹೆಣ್ಣುಮಕ್ಕಳ ಈ ಸಾಮರ್ಥ್ಯಕ್ಕೆ ಮೊದಲ ಬಾರಿಗೆ ಕಣ್ಣುತೆರೆಯುವ ಮಹಾವೀರ್ ಸಿಂಗ್ ಈ ಮಕ್ಕಳನ್ನು, ಅವರ ತೀವ್ರ ವಿರೋಧದ ನಡುವೆಯೂ, ದೇಶಕ್ಕಾಗಿ ಚಿನ್ನದ ಮೆಡಲ್ ತರುವ ಕುಸ್ತಿಪಟುಗಳನ್ನಾಗಿ ರೂಪಿಸುತ್ತಾನೆ. 'ಅಪ್ಪ ನೀನು ಆರೋಗ್ಯಕ್ಕೆ ಹಾನಿಕರ' ಎಂದು ಅಪ್ಪನನ್ನು



ದ್ವೇಷಿಸುತ್ತಲೇ ಕುಸ್ತಿ ಕಲಿಯುವ ಗೀತಾ ಮತ್ತು ಬಬಿತಾ ಸ್ಥಳೀಯ, ರಾಜ್ಯ, ರಾಷ್ಟ್ರ ಮಟ್ಟದ ಸ್ಪರ್ಧೆಗಳಲ್ಲಿ ಪದಕಗಳನ್ನು ಗೆಲ್ಲುತ್ತಾ ಹೋಗುತ್ತಾರೆ. ತಮ್ಮ ಯಶಸ್ಸನ್ನು ಸಂಭ್ರಮಿಸುತ್ತಾರೆ.

ಈ ಸಿನಿಮಾ ನೋಡಿದ ಯುವತಲೆಮಾರಿನ ಮನಸ್ಸುಗಳು ಒಮ್ಮೆಗೇ ಸಿಡಿದುಬಿದ್ದವು. ಮಕ್ಕಳ, ಮಹಿಳೆಯರ, ಯುವಜನರ ಮನಸ್ಸನ್ನು, ಕನಸ್ಸನ್ನು ನವಿರಾಗಿ ಅರಳಲು ಬಿಟ್ಟು, ಅದರ ಚಂದ ನೋಡಬೇಕು ಎಂದು ತನ್ನ ಹಿಂದಿನ ಚಿತ್ರಗಳಲ್ಲಿ ಹಾಗೂ ಸತ್ಯಮೇವ ಜಯತೆ ಎಂಬ ಟಿ.ವಿ. ಕಾರ್ಯಕ್ರಮದಲ್ಲಿ ಹೇಳಿದ ಅಮೀರ್, ದಂಗಲ್‌ನಲ್ಲಿ ಇವರಿಗೆ ರಾಕ್ಷಸನಂತೆ ಗೋಚರಿಸಿದ.

ಮಕ್ಕಳ ಇಚ್ಛೆಯನ್ನು ಪರಿಗಣಿಸದೆ ಅವರ ಮುಗ್ಧ ಮನಸ್ಸುಗಳನ್ನು ಮತ್ತು ಎಳೆಯ ದೇಹಗಳನ್ನು ಇನ್ನಿಲ್ಲದಂತೆ ಕಟುವಾಗಿ ದಂಡಿಸುವ ಅಮೀರ್‌ನನ್ನು ಈ ಯುವಮನಸ್ಸುಗಳು ಖಂಡಿಸಿದವು. ಶಿಕ್ಷಣ–ಉದ್ಯೋಗ ಎಂಬ ಓಟದ ಗೂಟಕ್ಕೆ ಮಕ್ಕಳನ್ನು ಕಟ್ಟಿ, ಚಾಟಿ ಬೀಸುವ ಪೋಷಕರನ್ನು ಖಂಡಿಸುವುದಾದರೆ, ಮಕ್ಕಳ ಇಚ್ಛೆಗೆ ವಿರುದ್ಧವಾಗಿ ಅವರನ್ನು ಕುಸ್ತಿಪಟು ಮಾಡಿ ತಾನು ಹೀರೋ ಆಗುವ ಅಮೀರ್‌ಖಾನ್‌ನ ನಡೆ ಖಂಡನಾರ್ಹ ಎಂದರು. ಚಿತ್ರದಲ್ಲಿ ಅಮೀರ್‌ನ ಮಕ್ಕಳು ಹಾಡಿದಂತೆ, 'ಅಪ್ಪ, ನೀನು ಆರೋಗ್ಯಕ್ಕೆ ಹಾನಿಕರ...' ಎಂದು ಸಿಟ್ಟಾದರು.

'ಮಕ್ಕಳ ಇಚ್ಛೆಗೆ ವಿರುದ್ಧವಾಗಿ, ಅವರ ಆಶಯಗಳಿಗೆ ಕಿವುಡಾಗಿ, ತನ್ನ ಕನಸನ್ನು ಮಕ್ಕಳ ಮೇಲೆ ಹೇರುವ, ಅದನ್ನು ಮಕ್ಕಳು ಅನಿವಾರ್ಯವಾಗಿ ಒಪ್ಪಿಕೊಳ್ಳುವಂತೆ ಮಾಡುವ ಈ ಸಿನಿಮಾ ಏನನ್ನು ಹೇಳುತ್ತಿದೆ? ಮಕ್ಕಳ ಮನಸ್ಸಿಗೆ ಬೇಕಾದ ಓದು, ಕೆಲಸಗಳನ್ನು ಆಯ್ಕೆ ಮಾಡಿಕೊಳ್ಳಲು ಬಿಡಬೇಕು. ದೊಡ್ಡವರ ಆಸೆಗೆ ಡಾಕ್ಟರ್, ಇಂಜಿನಿಯರ್ ಆಗುವಂತೆ ಒತ್ತಡ ಹೇರಬಾರದು ಎಂದು ಹೇಳುತ್ತಿರುವ ಕಾಲದಲ್ಲಿ ಈ ಸಿನಿಮಾ ಏನು ಹೇಳಲು ಹೊರಟಿದೆ? ಇದು ತಂದೆಯ, ಕುಟುಂಬದ ಅಭಿಪ್ರಾಯಗಳನ್ನು ಮಕ್ಕಳ ಮೇಲೆ ಹೇರುವುದನ್ನು ಸಮರ್ಥಿಸುತ್ತದೆ. ಸಿನಿಮಾದ ಈ ಸಂದೇಶ ಸರಿಯಲ್ಲ' ಎನ್ನುವುದು ಯುವಮನಸ್ಸುಗಳ ವಿಶ್ಲೇಷಣೆ.

'ದಂಗಲ್ ಒಂದು ನಿರಾಸೆ' ಎನ್ನುವ ಯುವಮನಸ್ಸುಗಳು, 'ಈ ಚಿತ್ರದಲ್ಲಿರುವ ತಂದೆ ಒಬ್ಬ ಹಲ್ಲೆಕೋರ. ಸ್ವಂತ ಮಕ್ಕಳ ಮೇಲೆ ದೌರ್ಜನ್ಯ ನಡೆಸುತ್ತಾನೆ. ಲೈಂಗಿಕ ದೌರ್ಜನ್ಯವನ್ನು ಮಾತ್ರ ದೌರ್ಜನ್ಯ ಎಂದು ಪರಿಗಣಿಸುವ ಭಾರತದ ಸಮಾಜ, ಕುಟುಂಬದ ಒಳಗೆ ಮಕ್ಕಳ ಮೇಲೆ ನಡೆಯುವ ಮಾನಸಿಕ ದೌರ್ಜನ್ಯಗಳಿಗೆ ಇನ್ನೂ ತೆರೆದುಕೊಂಡೇ ಇಲ್ಲ. ತಂದೆತಾಯಿ ಮಕ್ಕಳ ಹಿತಕ್ಕಾಗಿ ಮಾಡುವ ಆಯ್ಕೆಗಳನ್ನು ಒಪ್ಪಿಕೊಳ್ಳಲೇಬೇಕು ಎಂದು ಆಗ್ರಹಿಸುವ ಸಮಾಜಕ್ಕೆ ಕೌಟುಂಬಿಕ ದೌರ್ಜನ್ಯಗಳ ಆಳ ವಿಸ್ತಾರ ಅರ್ಥವಾಗುವುದಿಲ್ಲ' ಎನ್ನುತ್ತವೆ. 'ಗಂಡುಮಕ್ಕಳಾಗದೆ ತನ್ನ ಕನಸು ಈಡೇರುವುದಿಲ್ಲ ಎನ್ನುತ್ತಿದ್ದ ನಾಯಕ, ಹೆಣ್ಣುಮಕ್ಕಳನ್ನು ಒಪ್ಪಿಕೊಂಡ ಮಾತ್ರಕ್ಕೆ ಅದು ಅವನ ದೊಡ್ಡತನ ಎನ್ನಲಾದೀತೆ? ಅಷ್ಟಕ್ಕೂ ಹೆಣ್ಣುಮಕ್ಕಳ ಸಾಮರ್ಥ್ಯ ತಿಳಿದು ತಂದೆ ಮಾಡಿದ್ದೇನು? ಸರ್ವಾಧಿಕಾರಿಯಂತೆ ವರ್ತಿಸಿದ ಅಷ್ಟೆ.'

ಹೀಗೆ ಪ್ರತಿಕ್ರಿಯಿಸಿದ ಯುವಮನಸ್ಸುಗಳು ಸಿನಿಮಾದ ಅಪಾರ ಸಾಧ್ಯತೆಗಳ ಬಗ್ಗೆ ಅರಿವಿರುವ, ಸ್ವತಃ ಸಿನಿಮಾ ಹಾಗೂ ಸಮೂಹ ಮಾಧ್ಯಮದ ವಿದ್ಯಾರ್ಥಿಗಳು. 'ಸ್ವತಂತ್ರ ಆಯ್ಕೆ'ಗಳನ್ನು ಅನುಸರಿಸಿದವರು. ಆಯ್ಕೆಯ ಸ್ವಾತಂತ್ರ್ಯದ ಹಕ್ಕನ್ನು ಗೌರವಿಸುವ, ಪೋಷಿಸುವ, ಪ್ರತಿ ಪಾದಿಸುವ ವಾತಾವರಣದಲ್ಲಿ ಬೆಳೆದವರು ಹಾಗೂ ಸ್ವತಃ ಸ್ವತಂತ್ರ ಆಯ್ಕೆಗಳನ್ನು ಅನುಭವಿಸಿದವರು.

ಮತ್ತೊಂದು ಪ್ರತಿಕ್ರಿಯೆ ಬಂದಿದ್ದು ಸರಿಸುಮಾರು ನನ್ನ ಓರಗೆಯ ಜನರಿಂದ. ಇವರು ಕೂಡ ಸಿನಿಮಾವನ್ನು ಪ್ರಭಾವಶಾಲಿ ಮಾಧ್ಯಮವಾಗಿ, ಸಾಮಾಜಿಕ ಹೋರಾಟಗಳ ಹತ್ಯಾರವಾಗಿ ನೋಡುವವರು. ಇವರ ಪ್ರತಿಕ್ರಿಯೆಗಳಿಗೆ ಹಿನ್ನೆಲೆಯಾಗಿ ನಿಲ್ಲುವುದು ದಂಗಲ್ ಕಥೆಯ ಚಾರಿತ್ರಿಕ ಸತ್ಯಗಳು – ಘಟನೆ ನಡೆದ ಸ್ಥಳ, ಅಲ್ಲಿನ ಸಾಮಾಜಿಕ ಮತ್ತು ಸಾಂಸ್ಕೃತಿಕ ಆಚರಣೆಗಳು, ಕೌಟುಂಬಿಕ ಮೌಲ್ಯಗಳು, ಘಟನೆ ನಡೆದ ದಿನಮಾನಗಳು, (೧೯೮೦ರ ದಶಕ) ಇತ್ಯಾದಿ.

ಪಿತೃಪ್ರಧಾನ ಮೌಲ್ಯಗಳನ್ನು ಹಾಗೂ ಪಾಳೇಗಾರಿ ಮೌಲ್ಯಗಳನ್ನು ಇಂದಿಗೂ ಆಚರಿಸಿಕೊಂಡು, ಹೇರಿಕೊಂಡು ಬರುತ್ತಿರುವ ಹರಿಯಾಣ, ದಂಗಲ್‌ಗೆ ಕಾರಣವಾದ ನಿಜಘಟನೆ ನಡೆದ ಸ್ಥಳ. ಹೆಣ್ಣು–ಗಂಡಿನ ಅನುಪಾತದಲ್ಲಿ ದೇಶದಲ್ಲಿ ಕೊನೆಯ ಸ್ಥಾನದಲ್ಲಿರುವ (೮೭೧ ಹರಿಯಾಣ, ೧೦೫೮ ಕೇರಳ), ಹೆಣ್ಣು ಭ್ರೂಣ ಮತ್ತು ಹೆಣ್ಣು ಶಿಶುಗಳ ಹತ್ಯೆಗಳೂ ಹೆಚ್ಚಾಗಿರುವ, ಪ್ರಜಾಪ್ರಭುತ್ವದ ಪಂಚಾಯತಿರಾಜ್ ವ್ಯವಸ್ಥೆಗೆ ಸವಾಲು ಹಾಕುವಂತೆ ಖಾಪ್ ಪಂಚಾಯತಿಗಳನ್ನು ಎಗ್ಗಿಲ್ಲದೆ ನಡೆಸುತ್ತಾ ಮಹಿಳೆಯರ ಮೇಲಿನ ದೌರ್ಜನ್ಯಗಳಿಗೆ ಸಾಂಸ್ಥಿಕ ಬೆಂಬಲ ನೀಡುವ, ಮರ್ಯಾದೆಗೇಡು ಹತ್ಯೆಗಳನ್ನು ಸಮರ್ಥಿಸಿಕೊಳ್ಳುವ ಹರಿಯಾಣ ರಾಜ್ಯ, ದಂಗಲ್‌ನ ಕಥೆ ನಡೆದಿರುವ ಸ್ಥಳ.

ಇಂತಹ ಹರಿಯಾಣದಲ್ಲಿರುವ, 'ಗಂಡು

ಮಗನಾದರೆ ನನ್ನ ಕನಸನ್ನು ನನಸು ಮಾಡಬಲ್ಲ' ಎಂದು ಹಂಬಲಿಸುವ ಮಹಾವೀರ ಸಿಂಗ್, ಸಾಲಾಗಿ ಹುಟ್ಟುವ ನಾಲ್ಕು ಹೆಣ್ಣು ಮಕ್ಕಳನ್ನಾಗಲಿ, ಹಡೆದ ಹೆಂಡತಿಯನ್ನಾಗಲಿ ಕೀಳಾಗಿ ಕಾಣುವುದಿಲ್ಲ. ಆ ಮಕ್ಕಳೊಂದಿಗೆ ಅಪ್ಪನಂತೆ ಚಿಕ್ಕದಾದರೂ ಚೊಕ್ಕವಾಗಿ ಕಳೆಯುವ ಕ್ಷಣಗಳಿವೆ. ಹೆಣ್ಣುಮಕ್ಕಳ ಸಾಮರ್ಥ್ಯ ಗೊತ್ತಾದ ಕೂಡಲೆ ಅದನ್ನು ಅತ್ಯಂತ ಸಹಜವಾಗಿ ಸ್ವೀಕರಿಸಿ ಆ ಮಕ್ಕಳ ಸಾಮರ್ಥ್ಯವನ್ನು ಪೋಷಿಸುವ ಕೆಲಸಕ್ಕೆ ನಿಲ್ಲುತ್ತಾನೆ.

ನಾನು ಏಕಕಾಲಕ್ಕೆ ತಂದೆ ಮತ್ತು ತರಬೇತುದಾರ ಎರಡೂ ಆಗಲಾರೆ ಎಂದು ಹೆಂಡತಿಗೆ ಹೇಳುವ ಮಹಾವೀರ್ ಸಿಂಗ್ ಗೀತಾ ಮತ್ತು ಬಬಿತಾ ಅವರನ್ನು ಎಲ್ಲ ಸಂದರ್ಭಗಳಲ್ಲಿಯೂ ಕುಸ್ತಿಪಟುಗಳಾಗಿ ಮಾತ್ರ ನೋಡುತ್ತಾನೆ. ಅದು ಗೀತಾ, ಬಬಿತಾ ತಮ್ಮ ಗೆಳತಿಯ ಮದುವೆಗೆ ಹೋದ ಸಂದರ್ಭ ಇರಬಹುದು ಅಥವಾ ಕಾಮನ್‌ವೆಲ್ತ್ ಕ್ರೀಡೆಯಲ್ಲಿ ಗೀತಾ ಪದಕ ಗೆದ್ದ ಸಂದರ್ಭ ಇರಬಹುದು; ಅಲ್ಲೆಲ್ಲ ಕಾಣುವುದು ಕುಸ್ತಿಪಟುವೇ ಹೊರತು ಅಪ್ಪನಲ್ಲ. ಇದರ ಬಗ್ಗೆ ಯಾವ ದ್ವಂದ್ವ ಅಥವಾ ಗೊಂದಲ ಮಹಾವೀರನಿಗೆ ಇಲ್ಲ. ಮಗಳೊಂದಿಗೆ ಕುಸ್ತಿ ಮಾಡುವಾಗಲಾಗಲಿ, ಅವಳು ಪದಕ ಗೆದ್ದು 'ಅಪ್ಪ'ನ ಮುಂದೆ ಹೆಮ್ಮೆಯಿಂದ ನಿಂತಾಗಲಾಗಲಿ ಮಹಾವೀರ್‌ಗೆ ಅವಳು ಕ್ರೀಡಾಪಟುವಷ್ಟೆ. ತನ್ನ ಮಗಳು ಪದಕ ಗೆದ್ದಳೆಂದು ಮಗಳನ್ನು ಬಾಚಿ ತಬ್ಬಿ ಸಂಭ್ರಮಿಸುವುದಿಲ್ಲ. ಹಾಗೆಯೇ, ಮಗಳು ತನ್ನ ಜೊತೆ ಕುಸ್ತಿಗೆ ಇಳಿದಿದ್ದಾಳೆ ಎಂದು ಮೃದುವಾಗುವುದಿಲ್ಲ.

ಇನ್ನು ಮಕ್ಕಳ ಇಚ್ಛೆಗೆ ವಿರುದ್ಧವಾಗಿ ನಡೆದುಕೊಂಡಿದ್ದು ಎನ್ನುವುದು. ಹೊರಗೆ ನಿಂತು ನೋಡುವ ನಮಗೆ ಮಕ್ಕಳ ಹಕ್ಕಿನ ಉಲ್ಲಂಘನೆಯಾಗಿ ಕಾಣಿಸುವುದು ಸಹಜ. ಆದರೆ ಹರಿಯಾಣದಲ್ಲಿ ಹೆಣ್ಣು ಮಕ್ಕಳು ಹುಟ್ಟುವುದು, ಬದುಕಿ ಉಳಿಯುವುದೇ ಇನ್ನೂ ಕಷ್ಟವಾಗಿರುವ ಸಂದರ್ಭದಲ್ಲಿ ಹೆಣ್ಣು ಮಕ್ಕಳನ್ನು ಅಸಾಂಪ್ರದಾಯಿಕ ಕ್ಷೇತ್ರವೊಂದರಲ್ಲಿ ಔನ್ನತ್ಯಕ್ಕೆ ಏರಿಸುವ ವ್ಯಕ್ತಿಯಾಗಿ ನೋಡುವುದು ಹೆಚ್ಚು ಸೂಕ್ತ ಎನ್ನಿಸುತ್ತದೆ. ಮದುವೆಯಾಗುವ ಗೀತಾ ಮತ್ತು ಬಬಿತಾಳ ಸ್ನೇಹಿತೆ ಹೇಳುವಂತೆ, 'ನಿಮ್ಮ ಅಪ್ಪ ಕನಿಷ್ಠ ನಿಮ್ಮ ಬಗ್ಗೆ ಯೋಚಿಸುತ್ತಿದ್ದಾನಲ್ಲ' ಎನ್ನುವ ಮಾತು ಹರಿಯಾಣದ ಪರಿಸ್ಥಿತಿಯಲ್ಲಿ ಮಹತ್ವದ್ದಾಗಿ ಕಾಣುತ್ತದೆ.

ಪಂದ್ಯದ ಆಯೋಜಕರು ಹುಡುಗಿಯರನ್ನು ಪಂದ್ಯಕ್ಕೆ ಸೇರಿಸಿಕೊಳ್ಳುವುದಿಲ್ಲ ಎಂದಾಗ, ಕುಸ್ತಿ ಅಖಾಡದ ಮೆತ್ತನೆಯ ಹಾಸಿಗಾಗಿ ಹಣ ಕೊಡಲು ಶ್ರೀಮಂತ ನಿರಾಕರಿಸಿದಾಗ ಮಹಾವೀರ್ ಸಿಂಗ್ ಕುಗ್ಗದೆ ಹೊಸ ದಾರಿಗಳನ್ನು ಕಂಡುಕೊಳ್ಳುತ್ತಾನೆ.

ಒಂದು ಕಲಾಕೃತಿ ಸೃಷ್ಟಿಯಾದ ಮೇಲೆ ನೋಡುಗರ ಕಣ್ಣು–ಮನಸ್ಸುಗಳಲ್ಲಿ ಮತ್ತೆ ಹುಟ್ಟುತ್ತಾ, ಹೊಸ ಅರ್ಥ ಪಡೆಯುತ್ತಾ ಸಾಗುತ್ತದೆ. ಆ ಹಿನ್ನೆಲೆಯಲ್ಲಿ ದಂಗಲ್‌ಗೆ ಬಂದಿರುವ ಎರಡೂ ಪ್ರತಿಕ್ರಿಯೆಗಳು ಸಹಜ.



*ನಿಜಜೀವನದಲ್ಲಿ : ತಂದೆ ಮಹಾವೀರ್ ಸಿಂಗ್ ಫೋಘಟ್, ತಾಯಿ ದಯಾಕೌರ್ ಮತ್ತು ಮಕ್ಕಳಾದ ಗೀತಾ, ಬಬಿತಾ, ರಿತು ಮತ್ತು ಸಂಗೀತಾ ಅವರುಗಳೊಂದಿಗೆ*

ಅನೇಕ ರಾಜಕೀಯ ಮತ್ತು ಸಾಮಾಜಿಕ ವಿಷಯಗಳ ಕುರಿತು ಹಿರಿಯ ತಲೆಮಾರಿನವರ ಜೊತೆಗೆ ಸಮಾನ ಮನಸ್ಕರಾಗಿರುವ ಆ ಯುವಜನರಿಗೆ, ಸಿನಿಮಾದಲ್ಲಿರುವ ತಮ್ಮ ಸಮವಯಸ್ಕ ಮಕ್ಕಳ ಜೊತೆ ಐಡೆಂಟಿಫೈ ಮಾಡಿಕೊಂಡಂತೆ, ಸಮಕಾಲೀನ ಪರಿಸ್ಥಿತಿಯ ಜೊತೆ ಗುರುತಿಸಿಕೊಳ್ಳಲು ಆಗಲಿಲ್ಲ. ಅವರು ಅನುಭವಿಸುತ್ತಿರುವ ಆಯ್ಕೆಯ ಸ್ವಾತಂತ್ರ್ಯವು ಒಂದು ನಿರ್ದಿಷ್ಟ ಸಾಮಾಜಿಕ, ಸಾಂಸ್ಕೃತಿಕ, ಕೌಟುಂಬಿಕ ಸಂದರ್ಭದಲ್ಲಿ ಸಾಧ್ಯವಾಗಿರಬಹುದು. ಆದರೆ ದೇಶದ ಎಲ್ಲ ರಾಜ್ಯಗಳಲ್ಲಿ ಅದೇ ಸಂದರ್ಭ ಇಲ್ಲ ಎನ್ನುವುದು ಅವರಿಗೆ ಸ್ಪಷ್ಟವಾಗಿಅಥವಾ ಅವರು ಅನುಭವಿಸುತ್ತಿರುವ ಆಯ್ಕೆಯ ಸ್ವಾತಂತ್ರ್ಯದ ಹಿಂದೆಯೂ ಅನೇಕ ಹೋರಾಟಗಳು, ಪ್ರಯತ್ನಗಳು ಮತ್ತು ಸಂಘರ್ಷವಿದೆ. ಬಹುಶಃ ನಾವು ಇದನ್ನೆಲ್ಲ ಅವರಿಗೆ ಅರಿವು ಮಾಡಿಸಿಲ್ಲವೇನೊ ?

ದಂಗಲ್ ಒಂದು ಜೀವನಚಿತ್ರ ಎಂದು ನಿರ್ದೇಶಕರು ಮತ್ತು ನಿರ್ಮಾಪಕರು ಹೇಳಿದ್ದರೂ, ಅದರಾಚೆಗೆ ದಂಗಲ್ ಹೆಣ್ಣು ಮಕ್ಕಳ ಪರಿಸ್ಥಿತಿ, ಪುರುಷ ಮನೋಭಾವ, ಇರುವ ಅವಕಾಶಗಳಲ್ಲೇ ಸಾಧ್ಯತೆಗಳ ಹೊಸ ಬಾಗಿಲು ತೆರೆಯುವ ಸಾಹಸಗಳ ಚಿತ್ರ ಯಾಕಾಗಬಾರದು ?

ಒಂದು ಕಾಲಕ್ಕೆ ವಿಧವೆ ಹೆಣ್ಣುಮಕ್ಕಳು ಮರು ಮದುವೆಯಾಗದಂತೆ ತಡೆಯಲು ಅವರ ಕೂದಲು ಬೋಳಿಸಿ, ಅವರನ್ನು 'ವಿರೂಪ'ಗೊಳಿಸಲಾಯಿತು ಎನ್ನುತ್ತಿದ್ದರು. ಈಗ ಕೂದಲು ಚಿಕ್ಕದಾಗಿ ಕತ್ತರಿಸಿಕೊಳ್ಳುವುದು ಅನುಕೂಲಕರ ಹಾಗೂ ಫ್ಯಾಷನ್ ಆಗಿದೆ. ಒಂದು ಕಡೆ ಅಪ್ಪಂದಿರೇ ಸ್ವಂತ ಮಕ್ಕಳ ಮೇಲೆ ಅತ್ಯಾಚಾರ ಮಾಡುತ್ತಿರುವಾಗ, ಇಲ್ಲಿ ಮಹಾವೀರ್ ಸಿಂಗ್ ಗೀತಾಳನ್ನು ಒಬ್ಬ ಕುಸ್ತಿಪಟುವಾಗಿ ಮಾತ್ರ ನೋಡುತ್ತಾನೆ; ಮಗಳೆಂದಾಗಲಿ, ಅಷ್ಟೇಕೆ ಹುಡುಗಿಯೆಂದಾಗಲಿ ನೋಡುವುದಿಲ್ಲ. ಹೆಚ್ಚಿನ ಕುಟುಂಬಗಳು ಇನ್ನೂ ತಮ್ಮ ಹೆಣ್ಣು ಮಕ್ಕಳಿಗೆ 'ನಾಲ್ಕು ಜನ ಮೆಚ್ಚುವಂತೆ ಇರು' ಎಂದೇ ಬೋಧನೆ ಮಾಡುತ್ತಿರುವಾಗ (ಆ ನಾಲ್ಕು ಜನ ಯಾರೆಂಬುದು ಬೇರೆ ಪ್ರಶ್ನೆ) ಮಹಾವೀರ್ ಸಿಂಗ್ ಸ್ವತಃ ಸಾಂಪ್ರದಾಯಿಕ ಸಮಾಜದ ಎಲ್ಲೆಗಳನ್ನು ತಳ್ಳಿಹಾಕಿ ಮಕ್ಕಳ ಹಾದಿ ಸುಗಮ ಮಾಡುತ್ತಾನೆ. ಒಪ್ಪಿತ ಮಾನದಂಡಕ್ಕಿಂತ ಭಿನ್ನವಾದ ಕನಸುಗಳನ್ನು ಕಾಣುವಂತಹ ಮನಸ್ಥಿತಿಯನ್ನು ಹುಟ್ಟುಹಾಕುತ್ತಾನೆ.

ಮಕ್ಕಳಿಗೆ ಆಯ್ಕೆ ಸ್ವಾತಂತ್ರ್ಯ ಇರಬೇಕು ಮತ್ತು ಮಕ್ಕಳ ಮನಸ್ಸು ಅರಿತು ನಡೆಯಬೇಕು ಎನ್ನುವುದು ಎಷ್ಟು ಸತ್ಯವೋ ಹಾಗೆಯೇ ಮಹಾವೀರ್ ಸಿಂಗ್ ತನ್ನ ಕನಸಿನ ಕಾರಣ ಆರಂಭಿಸಿದ ಯುದ್ಧೋಪಾದಿಯ ಒಂದು ಪಯಣ ಕೇವಲ ಅವನ ಮಕ್ಕಳಿಗೆ ಮಾತ್ರವಲ್ಲ, ಈ ದೇಶದ ಅಸಂಖ್ಯಾತ ಹೆಣ್ಣು ಮಕ್ಕಳಿಗೆ ಹೊಸ ಬಾಗಿಲು ತೆರೆದಿರುವುದು ಹಾಗೂ ಮುಂದೆಯೂ ಅದೊಂದು ಉಲ್ಲೇಖವಾಗಿ ಉಳಿಯುವುದೂ ಅಷ್ಟೇ ಸತ್ಯ.

ಹೆಣ್ಣು ಮಕ್ಕಳು ಮೈತುಂಬಾ ಬಟ್ಟೆ ಹಾಕಿಕೊಳ್ಳಬೇಕು, ನೀನು ಇಂತಹುದೇ ಊಟ ಮಾಡಬೇಕು ಎಂದೆಲ್ಲ ವೈಯಕ್ತಿಕ ಬದುಕಿನ ಮೇಲೆ ಫತ್ವಾಗಳನ್ನು ಹೇರುತ್ತಿರುವ ಇಂದಿನ ಕಾಲಘಟ್ಟದಲ್ಲಿ ಮಕ್ಕಳಿಗೆ ಚಡ್ಡಿ ತೊಡಿಸಿ, ಸ್ವತಃ ತಾನೇ ಮಾಂಸಾಹಾರ ಬೇಯಿಸಿ ತಿನ್ನಿಸುವ ಮಹಾವೀರ್ ಸಿಂಗ್‌ನ ಗುರಿ ಒಂದೇ ಆದರೂ ಸಾಗುವ ಹಾದಿಯಲ್ಲಿ ಅನೇಕ ಹೆಗ್ಗುರುತುಗಳನ್ನು ಮೂಡಿಸಿದ್ದಾನೆ.

ಕೊನೆಯದಾಗಿ, ಪ್ರತಿ ಪಂದ್ಯಕ್ಕೆ ಮೊದಲು ಗೀತಾಳ ಪ್ರತಿಸ್ಪರ್ಧಿಯ ಪಟ್ಟುಗಳನ್ನು ಅಭ್ಯಸಿಸಿ ಅವಳಿಗೆ ಹೇಗೆ ಸೆಣಸಾಡಬೇಕೆಂದು ಹೇಳಿಕೊಡುವ ಮಹಾವೀರ್‌ನನ್ನು ಕುರಿತು ಅಂತಿಮ ಪಂದ್ಯಕ್ಕೆ ಮೊದಲು ಮಗಳು ಕೇಳುತ್ತಾಳೆ, 'ನಾಳೆಯ ಆಟದ ತಂತ್ರಗಾರಿಕೆ ಏನಪ್ಪ ?' ಮಹಾವೀರ್ ಹೇಳುತ್ತಾನೆ, 'ನಾಳೆ ನೀನು ಈ ದೇಶದ ಹೆಣ್ಣುಮಕ್ಕಳನ್ನು ಗೆಲ್ಲಿಸುವ ಹಾಗೆ ಆಡಬೇಕು'. ವೈಯಕ್ತಿಕ ನೆಲೆಯಲ್ಲಿ ಆರಂಭವಾಗುವ ಮಹಾವೀರ್‌ನ ಕನಸು ಸಾರ್ವತ್ರಿಕ ನೆಲೆಯಲ್ಲಿ ಈ ದೇಶದ ಹೆಣ್ಣುಮಕ್ಕಳ ಸಾಧ್ಯತೆಯಾಗಿ ಪರಿವರ್ತನೆಯಾಗುವ ಈ ಗಳಿಗೆ ದಂಗಲ್ ಚಿತ್ರಕ್ಕೆ ಬರೆಯಬಹುದಾದ ಭಾಷ್ಯ ಎನ್ನಬಹುದು.

**ಸತ್ಯ ಎಸ್.**
ನಂ. ೮೧, ಮೊದಲ ಮಹಡಿ, ೩ನೇ ಅಡ್ಡರಸ್ತೆ, ಸಿಬಿಐ ಮುಖ್ಯರಸ್ತೆ
ಗಂಗಾನಗರ, ಬೆಂಗಳೂರು – ೫೬೦ ೦೩೨

# ಮಹಿಳೆಯರ ರಕ್ಷಣೆಗಾಗಿ

# ರೆಡ್ ಬ್ರಿಗೇಡ್

**ಪು**ಣೆಯಲ್ಲಿ ಕೆಲವು ದಿನಸಿ ಅಂಗಡಿಗಳ ಮಾಲೀಕರು ಕಲಬೆರಕೆಯ ಆಹಾರವಸ್ತುಗಳನ್ನು ಮಾರಾಟ ಮಾಡುತ್ತಿದ್ದರು. ಪಡಿತರ ಚೀಟಿದಾರರು ಈ ಕಾನೂನುಬಾಹಿರ ವ್ಯವಹಾರವನ್ನು ಪ್ರತಿಭಟಿಸಿದರು. ಆದರೆ ಮಾಲೀಕರು ತಮ್ಮ ತಪ್ಪು ತಿದ್ದಿಕೊಳ್ಳಲಿಲ್ಲ.

ಅನಂತರ ಒಂದು ದಿನ ಆ ಅಂಗಡಿಗಳ ಎದುರು ರೆಡ್ ಬ್ರಿಗೇಡ್ (ಕೆಂಪು ಸೈನ್ಯ)ನ ಸದಸ್ಯರು ಜಮಾಯಿಸಿದರು. ಕೆಂಪು ಸೀರೆಗಳನ್ನುಟ್ಟ ಸುಮಾರು ನೂರು ಮಹಿಳೆಯರನ್ನು ಕಂಡು ಅಂಗಡಿ ಮಾಲೀಕರು ಅಧೀರರಾದರು. ಅವರ ಪ್ರತಿಭಟನೆ ಕಂಡು ಬೆಚ್ಚಿಬಿದ್ದರು. ಕೊನೆಗೆ ಆ ಮಾಲೀಕರು ಮಾತುಕತೆಗೆ ತಯಾರಾದರು. ಇನ್ನು ಮುಂದೆ ಕಲಬೆರಕೆ ಮಾಡಬಾರದೆಂದು ರೆಡ್ ಬ್ರಿಗೇಡ್ ಮುಂದಾಳುಗಳು ತಾಕೀತು ಮಾಡಿದರು. ಒಂದು ವೇಳೆ ಕಲಬೆರಕೆ ಮಾಡಿದರೆ ಪುನಃ ರೆಡ್ ಬ್ರಿಗೇಡಿನ ಪ್ರತಿಭಟನೆ ಎದುರಿಸಬೇಕಾಗುತ್ತದೆಂದು ಎಚ್ಚರಿಸಿದರು.

ಪುಣೆಯ ರೆಡ್ ಬ್ರಿಗೇಡಿನ ಮುಖ್ಯಸ್ಥೆ ಅಪರ್ಣಾ ದರಾಡೆಗೆ ಈ ಅನುಭವ ಹೊಸತಲ್ಲ. ಔರಂಗಾಬಾದ್ ಜಿಲ್ಲೆಯ ಹಳ್ಳಿಯೊಂದರಲ್ಲಿ ಬಾಲ್ಯ ಕಳೆದ ಅಪರ್ಣಾ ಎಂ.ಎ. (ಚರಿತ್ರೆ) ಸ್ನಾತಕೋತ್ತರ ಪದವೀಧರೆ. ೩೫ ವರುಷ ವಯಸ್ಸಿನ ಅಪರ್ಣಾ ಎರಡು ಮಕ್ಕಳ ತಾಯಿ. ಇವರ ಪತಿ ಕಮ್ಯುನಿಸ್ಟ್ ಧೋರಣೆಗಳ ಬೆಂಬಲಿಗರು. ಇದರಿಂದ ಪ್ರಭಾವಿತರಾದ ಅಪರ್ಣಾರಿಗೂ ಸಮಾಜಕ್ಕಾಗಿ ತಾನೂ ಏನಾದರೂ ಮಾಡಬೇಕೆನಿಸಿತು. ಮಹಿಳೆಯರ ಮೇಲೆ ಎಲ್ಲ ರೀತಿಯ ದೌರ್ಜನ್ಯಗಳು ನಡೆಯುತ್ತಿದ್ದು, ಅವರನ್ನು ಬೆಂಬಲಿಸಲು ಯಾರೂ ಇಲ್ಲವೆಂಬುದನ್ನು ಅಪರ್ಣಾ ಗಮನಿಸಿದರು. "ಏಕಾಂಗಿ ಮಹಿಳೆ ತಾನೇ ಮುಂದಾಗಿ ಅನ್ಯಾಯಗಳನ್ನು ಪ್ರತಿಭಟಿಸುವುದು ಕಷ್ಟ. ಆದ್ದರಿಂದ ನಾವು ಸಂಘಟಿತರಾಗಿ ಹೋರಾಡಲು ನಿರ್ಧರಿಸಿದೆವು" ಎನ್ನುತ್ತಾರೆ ಅಪರ್ಣಾ.

ಅವರು ಮೊದಲ ಪ್ರತಿಭಟನೆ ಸಂಘಟಿಸಿದ್ದು ೨೦೧೨ರಲ್ಲಿ. ಅಪರ್ಣಾರ ಮುಂದಾಳುತನದಲ್ಲಿ ೨೫ ಮಹಿಳೆಯರು ಪುಣೆಯ ಹತ್ತಿರದ ಒಂದು ಹಳ್ಳಿಗೆ ಹೋದರು. ಅಲ್ಲೊಬ್ಬ ಕುಡುಕ ಗಂಡ ಹೆಂಡತಿಯನ್ನು ಪೀಡಿಸುತ್ತಿದ್ದ. ಅವಳನ್ನು ಮನೆಯಿಂದ ಹೊರಗೆ ಹಾಕುತ್ತೇನೆಂದು ಬೆದರಿಸುತ್ತಿದ್ದ. ಈ ಮಹಿಳೆಯರ ಗುಂಪು ಅವನು ಮಾಡುತ್ತಿರುವುದು ತಪ್ಪೆಂದು ತಿಳಿಸಿ, ಇನ್ನು ಮುಂದೆ ಹಾಗೆ ಮಾಡಬಾರದೆಂದು ಎಚ್ಚರಿಸಿತು. ಕೊನೆಗೆ ಅವಳ ಗಂಡ ಕುಡಿತ ಬಿಡಲು ಒಪ್ಪಿಕೊಂಡು, ಅದರಂತೆಯೇ ನಡೆದುಕೊಂಡ. ಈಗ ಇವರ ಕಾರ್ಯಕ್ರಮಗಳಿಗೆ ತನ್ನ ಪತ್ನಿಯನ್ನು ಅವನೇ ಕರೆದು ತರುತ್ತಾನೆ.

ಈ ಘಟನೆ, ಅಪರ್ಣಾ ದರಾಡೆ ಮತ್ತು ಅವಳ ಸಂಗಡಿಗರಿಗೆ ಧೈರ್ಯ ನೀಡಿತು. ಅನಂತರ ಆವರು ಪುಣೆಯ ಕಾಳೇವಾಡಿಯಲ್ಲಿ ಸಭೆ ಸೇರಿ, ತಮ್ಮ ಸಂಘಟನೆಗೆ ಅಹಲ್ಯಾಬಾಯಿ ರಂಗಣೇಕರ ಬ್ರಿಗೇಡ್ ಅಥವಾ ರೆಡ್ ಬ್ರಿಗೇಡ್ ಎಂದು ಹೆಸರಿಟ್ಟರು (ಅಹಲ್ಯಾಬಾಯಿ ಕಮ್ಯುನಿಸ್ಟ್ ಮುಂದಾಳು ಆಗಿದ್ದರು). ಈಗ ಪ್ರತೀ ಗುರುವಾರ ರೆಡ್ ಬ್ರಿಗೇಡಿನ ಸದಸ್ಯರು ಸಭೆ ಸೇರಿ ಚರ್ಚಿಸುತ್ತಾರೆ. ಸಂತ್ರಸ್ತ ಮಹಿಳೆಯರ ಸಮಸ್ಯೆ ಪರಿಹರಿಸಲು ಅವರು ಮಧ್ಯಸ್ಥಿಕೆ ವಹಿಸುತ್ತಾರೆ. ಅದರಿಂದ ಸಮಸ್ಯೆ ನಿವಾರಣೆಯಾಗದಿದ್ದರೆ, ಕಾನೂನು ಕ್ರಮ ಕೈಗೊಳ್ಳುತ್ತಾರೆ.

ಅಪರ್ಣಾ ದರಾಡೆ ನೆನಪು ಮಾಡಿಕೊಳ್ಳುವ ಪ್ರಕರಣವೊಂದು ಹೀಗಿದೆ : ಪುಣೆಯ ಅಕುರ್ಡಿಯ ಒಬ್ಬ ಕಾಲೇಜು ಪ್ರಿನ್ಸಿಪಾಲ್ ಕಾಲೇಜಿನ ಮಹಿಳಾ ವಿದ್ಯಾರ್ಥಿಗಳನ್ನು ಲೈಂಗಿಕವಾಗಿ ಪೀಡಿಸಿದ; ಅವರು ಇದನ್ನು ಯಾರಿಗೂ ತಿಳಿಸಬಾರದೆಂದು ಬೆದರಿಸಿದ. ಕೊನೆಗೆ ಇಬ್ಬರು ಪೀಡಿತ ವಿದ್ಯಾರ್ಥಿನಿಯರು ರೆಡ್ ಬ್ರಿಗೇಡನ್ನು ಸಂಪರ್ಕಿಸಿದರು. ಎಲ್ಲ ವಿವರಗಳನ್ನೂ ಪರಿಶೀಲಿಸಿದ ರೆಡ್ ಬ್ರಿಗೇಡ್ ಮುಂದಾಳುಗಳು ಪ್ರಿನ್ಸಿಪಾಲರ ವಿರುದ್ಧ ಕೇಸ್ ದಾಖಲಿಸಲಿಕ್ಕಾಗಿ ಪೊಲೀಸ್ ಠಾಣೆಗೆ ಹೋದರು. ಪೊಲೀಸರು ಆರಂಭದಲ್ಲಿ ನಿರಾಕರಿಸಿದರೂ, ೫೦–೬೦ ರೆಡ್ ಬ್ರಿಗೇಡ್ ಸದಸ್ಯೆಯರು ಒಟ್ಟಾಗಿ ಒತ್ತಾಯಿಸಿದಾಗ ಎಫ್‌ಐಆರ್ ದಾಖಲಿಸಿದರು. ಅನಂತರ ಆ ಪ್ರಿನ್ಸಿಪಾಲರನ್ನು ಅಮಾನತು ಮಾಡಲಾಯಿತು. ಅಂತಿಮವಾಗಿ ಆತನಿಗೆ ಮೂರು ವರುಷ ಜೈಲು ಶಿಕ್ಷೆಯಾಗಿ, ಈಗ ಅದನ್ನು ಅನುಭವಿಸುತ್ತಿದ್ದಾನೆ.

ರೆಡ್ ಬ್ರಿಗೇಡ್ ಸದಸ್ಯೆಯರಿಗೆ ಬೆದರಿಕೆಗಳು ಬಂದಿಲ್ಲವೆಂದಲ್ಲ. ವ್ಯಕ್ತಿಯೊಬ್ಬ ತನ್ನ ಹೆಂಡತಿಯನ್ನು ಮನೆಯಿಂದ ಹೊರಹಾಕಿ ತನ್ನ ಪ್ರೇಯಸಿಯನ್ನು ಮನೆಗೆ ಕರೆತರಲು ಸಂಚು ಹೂಡಿದ್ದ. ಅವನಿದ್ದ ಮನೆ ಅವನ ಪತ್ನಿಯ ಸೊತ್ತು. ಆದರೂ ಆತ ಪತ್ನಿಗೆ ಹಿಂಸೆ ನೀಡುತ್ತಿದ್ದ. ಅವನ ಪತ್ನಿಯಿಂದ ದೂರು ಸ್ವೀಕರಿಸಿದ ಅಪರ್ಣಾ ರೆಡ್ ಬ್ರಿಗೇಡಿನ ಕಚೇರಿಗೆ ಬರಬೇಕೆಂದು ಅವನಿಗೆ ಪತ್ರ ಬರೆದಳು. ಆ ಆಸಾಮಿ ಅಪರ್ಣಾರನ್ನು ನಿಂದಿಸಿದ. ಮಾತ್ರವಲ್ಲ, ಅವರನ್ನು ಬೆದರಿಸಲು ಬಾಡಿಗೆ ಗೂಂಡಾಗಳನ್ನು ಕಳಿಸಿದ. ಆದರೆ ಅವನ ಮನೆಯೆದುರು ರೆಡ್ ಬ್ರಿಗೇಡಿನ ನೂರು ಮಹಿಳೆಯರು ಜಮಾಯಿಸಿದಾಗ, ಆ ಬಾಡಿಗೆ ಗೂಂಡಾಗಳು ಓಟ ಕಿತ್ತರು. "ಅಂತಿಮವಾಗಿ ಆ ಮನೆಯನ್ನು ಅವನ ಪತ್ನಿಗೇ ಕೊಡಿಸಿದೆವು. ಈಗ ಅವನು ಮಗುವಿನ ಪೋಷಣೆಗಾಗಿ ಪ್ರತಿ ತಿಂಗಳೂ ೬,೦೦೦ ರೂಪಾಯಿ ಪಾವತಿಸುತ್ತಿದ್ದಾನೆ" ಎಂದು ಆ ಪ್ರಕರಣದ ಕುರಿತು ತಮ್ಮ ಅನಿಸಿಕೆಯನ್ನು ಹಂಚಿಕೊಳ್ಳುತ್ತಾರೆ ಅಪರ್ಣಾ.

ಇನ್ನೊಂದು ಪ್ರಕರಣದಲ್ಲಿ, ರೆಡ್ ಬ್ರಿಗೇಡ್ ನೆರವಿನ ಹಸ್ತ ಚಾಚಿದ್ದು ಒಬ್ಬಳು ವಿಧವೆಯತ್ತ. ಒಂದು ಸೆಲೂನಿನಲ್ಲಿ ದುಡಿಯುತ್ತಿದ್ದ ಅವಳು ಕೆಲಸ ಬಿಟ್ಟಾಗ, ಸೆಲೂನಿನ ಮಾಲೀಕ ಸಂಬಳ ಪಾವತಿಸಲಿಲ್ಲ. ಮಾತ್ರವಲ್ಲ, ಅವಳ ಮೇಲೆ ಕಳವಿನ ಆಪಾದನೆ ಹೊರಿಸಿದ. "ಅವಳು ಪೊಲೀಸ್ ಠಾಣೆಗೆ ಹೋಗಿ ದೂರು ನೀಡಿದಾಗ, ಪೊಲೀಸರು ದೂರು ಸ್ವೀಕರಿಸಲಿಲ್ಲ. ಹಾಗಾಗಿ ಅವಳು ನಮ್ಮಲ್ಲಿಗೆ ಬಂದಳು. ಅನಂತರ, ನಮ್ಮೊಂದಿಗೆ ಪೊಲೀಸ್ ಠಾಣೆಗೆ ಹೋಗಿ ಎಫ್‌ಐಆರ್ ಫೈಲ್ ಮಾಡಿದಳು" ಎಂದು ನೆನಪು ಮಾಡಿಕೊಳ್ಳುತ್ತಾರೆ ಅಪರ್ಣಾ.

ರೆಡ್ ಬ್ರಿಗೇಡಿನ ಚಟುವಟಿಕೆಗಳಿಗೆ ಬೇಕಾದ ಹಣವನ್ನು ಸದಸ್ಯರಿಂದ ಸಂಗ್ರಹಿಸಲಾಗುತ್ತಿದೆ. ಈಗ ಪುಣೆಯಲ್ಲಿ ರೆಡ್ ಬ್ರಿಗೇಡಿನ ಆರು ಘಟಕಗಳಿವೆ. ಒಂದು ಘಟಕ ಸ್ಥಾಪಿಸಬೇಕಾದರೆ, ಕನಿಷ್ಠ ಐವತ್ತು ಸದಸ್ಯೆಯರು ಇರಬೇಕು ಮತ್ತು ಅವರಲ್ಲಿ ಎದೆಗಾರಿಕೆಯಿರಬೇಕು ಎನ್ನುತ್ತಾರೆ ಅಪರ್ಣಾ ದರಾಡೆ.

ಪುಣೆಯ ಸುತ್ತಲಿನ ಹಳ್ಳಿಗಳಿಗೂ ರೆಡ್ ಬ್ರಿಗೇಡ್ ಆಂದೋಲನವನ್ನು ವಿಸ್ತರಿಸಬೇಕೆಂಬುದು ಅವರ ಹಂಬಲ. ಈವರೆಗಿನ ಸಾಧನೆಗಳನ್ನು ಗಮನಿಸಿದರೆ, ಈ ಆಂದೋಲನದ ಇನ್ನಷ್ಟು ಘಟಕಗಳು ಸ್ಥಾಪನೆಯಾಗುವ ದಿನಗಳು ದೂರವಿಲ್ಲ.

**ಅಡ್ಡೂರು ಕೃಷ್ಣ ರಾವ್**
'ಸುಮ', ೫ನೇ ಅಡ್ಡರಸ್ತೆ, ಬಿಜೈ ಹೊಸ ರಸ್ತೆ, ಮಂಗಳೂರು – ೫೭೫ ೦೦೪






ಲೇಖಕರು : ಎ. ರೇವತಿ

ಪುಟಗಳು : ೨೪೦ ಬೆಲೆ : ರೂ. ೪೨೫/–

ಪ್ರಕಾಶನ : **ಜುಬಾನ್**

ನಂ. ೧೨೮ 'ಬಿ' ಶಾಹಪುರ ಜಾಟ್, ೧ನೇ ಮಹಡಿ, ನವದೆಹಲಿ – ೧೦೦೪೯




# ಟ್ರಾನ್ಸ್ ಚಳುವಳಿಯ ನನ್ನ ಬಾಳ ಪುಟಗಳು

*"ಮೊಲೆ ಮೂಡಿ ಬಂದರೆ ಹೆಣ್ಣೆಂಬರು*
*ಗಡ್ಡ–ಮೀಸೆ ಬಂದರೆ ಗಂಡೆಂಬರು*
*ನಡುವೆ ಸುಳಿವ ಆತ್ಮನು*
*ಗಂಡೂ ಅಲ್ಲ ಹೆಣ್ಣು ಅಲ್ಲ ಕಾಣಾ ರಾಮನಾಥ"*

– ದೇವರ ದಾಸಿಮಯ್ಯ

ಸ್ತ್ರೀವಾದಿ ಚಿಂತನೆಯು ಪ್ರವರ್ಧಮಾನಕ್ಕೆ ಬಂದ ಕಳೆದ ಕೆಲವು ದಶಕಗಳಿಂದೀಚೆಗೆ ಹನ್ನೆರಡನೆಯ ಶತಮಾನದ ದೇವರ ದಾಸಿಮಯ್ಯನ ಮೇಲಿನ ವಚನದ ಮಾತುಗಳು ವಿಶೇಷ ಪ್ರಾಶಸ್ತ್ಯ ಪಡೆದಿವೆ; ಹಾಗೆಯೇ ಹೊಸ ಅರ್ಥ ಸ್ವರೂಪವನ್ನು ಪಡೆದಿವೆ. ಹುಟ್ಟಿದಾಗ ಇರುವ ವ್ಯಕ್ತಿಯ ದೈಹಿಕ ಲಕ್ಷಣಗಳೇ ಅವನ/ಅವಳ ಮನಸ್ಸನ್ನು ನಿರ್ಧರಿಸುವುದಿಲ್ಲ. ಮನಸ್ಸು ಬಯಸಿದಂತೆ ಲಿಂಗವನ್ನು ಹೊಂದಿ ಬದುಕುವ ಹಕ್ಕಿಗಾಗಿ ನಡೆಯುತ್ತಿರುವ ಹೋರಾಟಕ್ಕೆ ಎರಡು ದಶಕಗಳಿಗೂ ಮೀರಿದ ಇತಿಹಾಸವಿದೆ. ಅಂತಹದೊಂದು ಕಿರುನೋಟವನ್ನು ಬೀರುವ ಪುಸ್ತಕ ಇದು.

"ಎ ಲೈಫ್ ಇನ್ ಟ್ರಾನ್ಸ್‌ಜೆಂಡರಿಸಮ್" – ರೇವತಿಯವರ ಎರಡನೆಯ ಆತ್ಮಕಥಾನಕ. ಅವರ ಮೊದಲ ಆತ್ಮಕಥೆ, "ಟ್ರೂತ್ ಎಬೌಟ್ ಮಿ–ಎ ಹಿಜ್ರಾ ಲೈಫ್ ಸ್ಟೋರಿ"ಯು ಏಳು ಭಾರತೀಯ ಭಾಷೆಗೆ ಅನುವಾದಿಸಲ್ಪಟ್ಟಿರುವುದಷ್ಟೇ ಅಲ್ಲದೆ, ದೇಶದ ವಿವಿಧ ವಿಶ್ವವಿದ್ಯಾಲಯಗಳ ೩೦೦ ಕಾಲೇಜುಗಳ ಗ್ರಂಥಭಂಡಾರವನ್ನು ತಲುಪಿವೆ. ಇಪ್ಪತ್ತು ವಿಶ್ವವಿದ್ಯಾಲಯಗಳಲ್ಲಿ ಇದು ಶೈಕ್ಷಣಿಕ ಪಠ್ಯದ ಭಾಗವಾಗಿದೆ. ಇದನ್ನು 'ಬದುಕು ಬಯಲು' ಎಂಬ ಹೆಸರಿನಲ್ಲಿ ದು.ಸರಸ್ವತಿಯವರು ಕನ್ನಡಕ್ಕೆ ಅನುವಾದಿಸಿದ್ದಾರೆ. ಈ ಪುಸ್ತಕ ಇಂಗ್ಲಿಷಿನಲ್ಲಿ ಪ್ರಕಟವಾದಾಗ ಲೇಖಕಿ ರೇವತಿಗೆ ಸಿಕ್ಕ ಗೌರವ, ಪ್ರಚಾರ, ಮನ್ನಣೆ , ಪ್ರತಿಕ್ರಿಯೆಗಳು ಅವರ ಬದುಕಿನ ಕಷ್ಟಗಳನ್ನು ಸ್ವಲ್ಪ ಹಗುರವಾಗಿಸಿದವು. ಅದಕ್ಕೆ ಮುಖ್ಯ ಕಾರಣ, ಅದು ಅವರೊಬ್ಬಳ ಕತೆ ಮಾತ್ರವಾಗಿರದೆ, ಹಿಜ್ರಾ ಸಮುದಾಯದವರ ಬದುಕಿನ ಕತೆಯಾಗಿತ್ತು. ಅವರ ಬಗ್ಗೆ ಇದ್ದ ಹಲವಾರು ತಪ್ಪು ಕಲ್ಪನೆಗಳನ್ನು ಸಮಾಜಕ್ಕೆ ತೆರೆದಿಡಲು ಸಾಧ್ಯವಾಯಿತು. ಈ ಸಮುದಾಯದ ಸಮಸ್ಯೆಗಳ ಬಗೆಗೆ ಮಾತನಾಡಲು ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ವೇದಿಕೆಯನ್ನು ಕಲ್ಪಿಸಿಕೊಟ್ಟಿತು. ಸಮಾಜ ಪರಿಭಾವಿಸುವ 'ಅಸಹಜ ಬದುಕು' ಎನ್ನುವ ಒಟ್ಟು ಲೈಂಗಿಕ ಅಲ್ಪಸಂಖ್ಯಾತರ ಬದುಕಿನ ಸತ್ಯಗಳ ಬಗ್ಗೆ ಕಣ್ಣು ತೆರೆಸಿತು.

ತಮಿಳುನಾಡಿನಲ್ಲಿ ತೃತೀಯ ಲಿಂಗಿಗಳನ್ನು ಕುರಿತು ಅಧ್ಯಯನ ನಡೆಸುತ್ತಿದ್ದ ಸಾಮಾಜಿಕ ಕಾರ್ಯಕರ್ತೆ ಡಾ॥ ನಂದಿನಿ ಮುರಳಿಯವರು ತಮ್ಮ ಅಧ್ಯಯನಕ್ಕಾಗಿ ರೇವತಿಯವರ ವಿಸ್ತೃತ ಅಧ್ಯಯನ ಮಾಡಿಕೊಂಡಿರುತ್ತಾರೆ. ಹೀಗೆ ಉಂಟಾದ ಪರಿಚಯ ಮತ್ತು ರೇವತಿಯವರ ಮೊದಲ ಆತ್ಮಕಥೆಯನ್ನು ಓದಿದ ನಂತರ ಅವರಲ್ಲಿ ಈ ವಿಷಯದ ಬಗ್ಗೆ ಹೆಚ್ಚಿದ ಆಸಕ್ತಿಯಿಂದಾಗಿ ರೇವತಿಯವರ ಕ್ರಿಯಾಶೀಲ ಚಳುವಳಿಯನ್ನು ಕುರಿತು ಬರೆಯಲು ತೊಡಗಿದರ ಫಲವೇ ಈ ಪುಸ್ತಕ. ೨೦೧೫ರ ಜನವರಿ ತಿಂಗಳಿನ ಒಂದು ಸುಂದರ ಬೆಳಗ್ಗೆ ತಮಿಳುನಾಡಿನ ನಮಕ್ಕಲ್ ಜಿಲ್ಲೆಯ ತಿರುಚಿಂಗೊಡೆಯಲ್ಲಿರುವ ಬೆಟ್ಟದ ಮೇಲಿನ ಅರ್ಧನಾರೀಶ್ವರ ದೇವಾಲಯದ ಪ್ರಾಂಗಣದಲ್ಲಿದ್ದ ಗ್ರಾನೈಟ್ ಮಂಟಪದಲ್ಲಿ ಕುಳಿತು ರೇವತಿಯವರ ಬದುಕಿನ ಕಥೆಯನ್ನು ಆಲಿಸಲು ಆರಂಭಿಸುತ್ತಾರೆ. ನಂತರ ವಿವಿಧ ಸ್ಥಳಗಳಲ್ಲಿ ಸುಮಾರು ಆರು ತಿಂಗಳುಗಳ ಕಾಲ ಇವರಿಬ್ಬರ ನಡುವೆ ತಮಿಳಿನಲ್ಲಿ ನಡೆಯುವ ಸಂಭಾಷಣೆಯು ಇಂಗ್ಲಿಷಿನಲ್ಲಿ 'ಎ ಲೈಫ್ ಇನ್ ಟ್ರಾನ್ಸ್‌ಜೆಂಡರಿಸಮ್' ಎಂಬ ಕೃತಿಯಾಗಿ ಹೊರಹೊಮ್ಮುತ್ತದೆ. ಡಾ॥ ನಂದಿನಿ ಮುರಳಿಯವರ ಭಾಷಾ ಲಾಲಿತ್ಯವನ್ನು ಇಲ್ಲಿ ಮೆಚ್ಚಬೇಕು. ಪದಗಳು ತುಂಬಿಹ ಪುಸ್ತಕವಿದಲ್ಲ. ಹೃದಯವೇ ಅಡಗಿದೆ ಇದರಲ್ಲಿ. ಆರು ತಿಂಗಳುಗಳ ಕಾಲ ನಂದಿನಿ ಮತ್ತು ರೇವತಿಯವರು ನಡೆಸಿದ ಸಂಭಾಷಣೆಯ ಫಲವಾದ ಸಂವಾದದ ಮೂರ್ತರೂಪವಾದ ಈ ಕೃತಿ ಅವರ ಸೋದರಿತ್ವದ ಫಲ. ಮೂರು ತಲೆಮಾರುಗಳ ಹಿಜ್ರಾ ಸಮುದಾಯದ ನಡುವೆ ಬದಲಾಗುತ್ತಿರುವ ಮೌಲ್ಯಗಳ ಸಂಘರ್ಷವನ್ನು ಇಲ್ಲಿ ಗುರುತಿಸಬಹುದಾಗಿದೆ. ಸಮಾಜದ ಫ್ಯೂಡಲ್ ಮೌಲ್ಯಗಳು/ ಶ್ರೇಣೀಕರಣ ವ್ಯವಸ್ಥೆಯು 'ಜಮಾತ್' ಸಂಸ್ಕೃತಿಯಲ್ಲಿ ಪ್ರತಿಬಿಂಬಿತವಾಗಿದೆ. ಆ ಎಲ್ಲ ಸಾಂಪ್ರದಾಯಿಕ ಚೌಕಟ್ಟನ್ನು ಮೀರಿ ಮಾನವೀಯವಾಗಿ ಚಿಂತಿಸುವ ರೇವತಿಯೆಂಬ ಸ್ತ್ರೀಪರ ಮನಸ್ಸು ತನ್ನ ಸಮುದಾಯದ ಒಳಿತಿಗಾಗಿ ಶ್ರಮಿಸುವ ಮಾನವೀಯ ಕಥನ ಈ ಪುಸ್ತಕ.

ತಮಿಳುನಾಡಿನ ಸೇಲಂ ಜಿಲ್ಲೆಯ ನಮಕ್ಕಲ್ ತಾಲ್ಲೂಕಿನ ಪುಟ್ಟ ಹಳ್ಳಿಯಲ್ಲಿ ೧೯೬೪ರ ಏಪ್ರಿಲ್ ೧೪ ರಂದು ಜನಿಸಿದ ಬಾಲಕ ದೊರೆಸ್ವಾಮಿಯೆಂಬ ಹೆಸರು ಪಡೆಯುತ್ತಾನೆ. ತಾಯಿಯ ಮನೆಗೆಲಸಗಳೊಂದಿಗೆ ನೆರವಾಗುತ್ತಾ ಬೆಳೆಯುವ ದೊರೈಸ್ವಾಮಿಗೆ ಸ್ತ್ರೀಸಹಜ ಚಟುವಟಿಕೆಗಳಲ್ಲಿಯೇ ಹೆಚ್ಚು ಒಲವು. ಅವನ ಗಂಡುದೇಹದೊಳಗೆ ಹೊರಹೊಮ್ಮುವ ಹೆಣ್ಣುಜೀವವೇ ಮುಂದೆ ರೇವತಿಯಾಗಿ ಪರಿವರ್ತಿತವಾಗುತ್ತದೆ. ತನ್ನನ್ನು ತಾನು ಹೆಣ್ಣೆಂದು ತೀವ್ರವಾಗಿ ಭಾವಿಸುತ್ತಿದ್ದ ದೊರೈಸ್ವಾಮಿ, ರೇವತಿ ಎನ್ನುವ ಹೆಣ್ಣಾಗಿ ಬದಲಾಗುವ ಪ್ರಕ್ರಿಯೆಯಲ್ಲಿ ಅನುಭವಿಸುವ ನೋವು, ಅಪಮಾನ, ಹಿಂಸೆ ಮತ್ತು ಕೊನೆಗೆ ಗಳಿಸುವ ಜಯ – ಎಲ್ಲವೂ ಮನಮುಟ್ಟುವಂತೆ ಅವರ ಮೊದಲ ಕೃತಿಯಲ್ಲಿ ಚಿತ್ರಿತವಾಗಿದೆ. ತಮಿಳುನಾಡಿನಲ್ಲಿ ಆರಂಭವಾಗುವ ದೊರೈಸ್ವಾಮಿಯ ಈ ಹೆಣ್ಣಾಗುವ ಪಯಣ ದೆಹಲಿ, ಮುಂಬೈನಲ್ಲಿ ಸಂಸ್ಕೀಕರಣಗೊಂಡು ಬೆಂಗಳೂರಿನಲ್ಲಿ ಕ್ರಿಯಾಶೀಲ ಸ್ವರೂಪ ಪಡೆಯುತ್ತದೆ.

'ಎ ಲೈಫ್ ಇನ್ ಟ್ರಾನ್ಸ್‌ಜೆಂಡರಿಸಮ್' ಕೃತಿಯಲ್ಲಿ ರೇವತಿಯವರ ಕ್ರಿಯಾತ್ಮಕ ಸಾಮಾಜಿಕ ಚಟುವಟಿಕೆಗಳ ಪರಿಚಯ ಮಾಡಿಕೊಡುತ್ತದೆ. ಹಾಗೆಯೇ ರೇವತಿಯ ಒಳಗೆ ಇರುವಂತಹ ಒಬ್ಬ ಕವಯಿತ್ರಿ, ನಟಿ, ತಾಯಿ ಮತ್ತು ಸಂಘಟಕಿಯ ಪಾತ್ರವನ್ನು ಪರಿಚಯ ಮಾಡಿಕೊಡುತ್ತದೆ. ರೇವತಿಯವರ ಇಡೀ ಜೀವನವೇ ಒಂದು ದೀರ್ಘ ಹೋರಾಟವಾಗಿದೆ. ಹೆಣ್ತನವನ್ನು ಅನುಭವಿಸುವುದಕ್ಕಾಗಿ, ಹೆಣ್ಣಾಗಿ ಅಭಿವ್ಯಕ್ತಿಸುವುದಕ್ಕಾಗಿ ಅವರು ನಡೆಸಿದ ಹೋರಾಟವಿದು. ಹದಿನೇಳು ವರ್ಷಗಳಿಂದ ಅವರು ಲೈಂಗಿಕ ಅಲ್ಪ ಸಂಖ್ಯಾತರ ಹಕ್ಕುಗಳ ಹೋರಾಟದಲ್ಲಿ ತೊಡಗಿಕೊಂಡಿದ್ದಾರೆ. ಇದರ

**ಡಾ॥ ಎನ್. ಗಾಯತ್ರಿ**

ಜೊತೆಗೆ ಸಾಮಾಜಿಕ ಕಾರ್ಯಕರ್ತೆಯಾಗಿ ದಲಿತರ ಮತ್ತು ಆದಿವಾಸಿಗಳ ಹಕ್ಕುಗಳ ಹೋರಾಟಕ್ಕಾಗಿಯೂ ಹೋರಾಟ ನಡೆಸಿದ್ದಾರೆ. ಸರ್ಕಾರೇತರ ಸಂಸ್ಥೆಗಳು, ಕಾಲೇಜು, ವಿಶ್ವವಿದ್ಯಾಲಯ, ಸಾರ್ವಜನಿಕ ಸಭೆಗಳು, ಮಾಧ್ಯಮ, ರಂಗಭೂಮಿ ಮತ್ತು ಬರವಣಿಗೆ– ಈ ಎಲ್ಲ ಕ್ಷೇತ್ರಗಳಲ್ಲೂ ಅವರ ಕಾರ್ಯವ್ಯಾಪ್ತಿ ಹರಡಿದೆ. ಅವರ ಹೋರಾಟದ ಪಯಣದಲ್ಲಿ ಎದುರಿಸಿದ ಸವಾಲುಗಳು, ಚಿಕ್ಕಪುಟ್ಟ ವಿಜಯಗಳು, ಎಡರುತೊಡರುಗಳ ದರ್ಶನ ಇಲ್ಲಿ ಸಿಕ್ಕುತ್ತದೆ. ಇದುವರೆಗೆ ಲಭ್ಯವಿರುವ ಬರವಣಿಗೆಯಲ್ಲಿ ಟ್ರಾನ್ಸ್ ಮಹಿಳೆಯರ ಬದುಕಿನ ಚಿತ್ರಗಳ ವಿವರಗಳು ಸಿಕ್ಕುತ್ತವಾದರೂ ಟ್ರಾನ್ಸ್ ಪುರುಷರ ಬದುಕಿನ ಪರಿಚಯ ಸಿಕ್ಕುವುದು ಅಪರೂಪವೇ. ಸಾಮಾನ್ಯ ಜನರಿಗೆ ಮಾತ್ರವಲ್ಲ, ಹಿಜ್ರಾ ಸಮುದಾಯಕ್ಕೂ ಇಂತಹ ಗುಂಪಿನ ಅನುಭವ ಕಡಿಮೆಯೇ. ಈ ಪುಸ್ತಕದ ವಿಶೇಷವೇನೆಂದರೆ, ಇಲ್ಲಿ ಟ್ರಾನ್ಸ್ ಪುರುಷರ ಸಂಕಥನವು ನಮಗೆ ಲಭ್ಯವಿದೆ.

"ಭಾರತದಲ್ಲಿ ಶಿವನನ್ನು 'ಅರ್ಧ ನಾರೀಶ್ವರನೆಂದು ಪೂಜಿಸಲಾಗುತ್ತದೆ. ಅಂತಹ ದೇಶ ಹಿಜ್ರಾಗಳನ್ನು ಯಾಕೆ ನಿಂದಿಸಬೇಕು? ಮಹಾಭಾರತದಲ್ಲಿ 'ಶಿಖಂಡಿ'ಯ ಕತೆಯಿದೆ. ಹಾಗಿರುವಾಗ ಹಿಜ್ರಾಗಳನ್ನು ಯಾಕೆ ಅರ್ಥಮಾಡಿಕೊಳ್ಳಲಾಗುತ್ತಿಲ್ಲ? 'ಮೂಲಭೂತ ಹಕ್ಕುಗಳು' ಎನ್ನುವುದು ಕೇವಲ ಗಂಡು ಮತ್ತು ಹೆಣ್ಣು ಎಂದೆನಿಸಿಕೊಂಡವರಿಗೆ ಮಾತ್ರವೇ? ಈ ಹಕ್ಕುಗಳನ್ನು ಅನುಭವಿಸಲು ನಾವು ಹಿಜ್ರಾಗಳು ಮನುಷ್ಯರಲ್ಲವೆ? ನಾವು ಈ ದೇಶದ ಪ್ರಜೆಗಳಲ್ಲವೆ? ನಮಗೆ ಮತದಾನದ ಹಕ್ಕು, ಪಾಸ್ ಪೋರ್ಟ್, ರೇಷನ್ ಕಾರ್ಡ್, ಡ್ರೈವಿಂಗ್ ಲೈಸೆನ್ಸ್ ಮತ್ತು ಆಸ್ತಿಯ ಹಕ್ಕು – ಇವೆಲ್ಲ ಬೇಡವೇ? ಗಂಡಾಗಿ ಹುಟ್ಟಿದ ನಾನು, ಈ ಎಲ್ಲ ಸೌಕರ್ಯ ಪಡೆಯಲು ಗಂಡಾಗಿಯೇ ಬದುಕಬೇಕೆಂದು ಹೇಳುವುದು ಎಷ್ಟು ಸರಿ? ನನ್ನ ಲಿಂಗವನ್ನು ಬದಲಿಸಿಕೊಳ್ಳಬೇಕೆಂದು ಬಯಸಿದರೆ ಅದಕ್ಕೆ ನನಗೆ ಹಕ್ಕಿಲ್ಲವೆ? ನನ್ನನ್ನು ಮತ್ತು ನನ್ನ ಭಾವನೆಗಳನ್ನು ಅರ್ಥಮಾಡಿಕೊಳ್ಳಲು ನೀವೇಕೆ ನಿರಾಕರಿಸುತ್ತೀರ?" ಹೀಗೆ ಹಲವಾರು ಮೂಲಭೂತ ತಾತ್ವಿಕ ಪ್ರಶ್ನೆಗಳನ್ನು ಎತ್ತುತ್ತಾ ಆರಂಭವಾಗುವ ಈ ಪುಸ್ತಕ ರೇವತಿಯವರ ಪ್ರಶ್ನೆಗಳು ಮಾತ್ರವಾಗದೆ, ಇಂದಿನ ನಮ್ಮ ಸಮಾಜದ ಎಲ್ಲ ತೃತೀಯ ಲಿಂಗೀಯರ ಪ್ರಶ್ನೆಗಳಾಗಿ ಈ ಪುಸ್ತಕಕ್ಕೆ ಒಂದು ಅಧಿಕೃತತೆಯನ್ನು ಮತ್ತು ವ್ಯಾಪಕತೆಯನ್ನು ದೊರಕಿಸಿಕೊಡುತ್ತದೆ. ಇದು ಕೇವಲ ಅನುಭವ ಕಥನವಲ್ಲ. ಇದಕ್ಕೆ 'ಸಂಶೋಧನೆ' ಎನ್ನುವ ಗಂಭೀರ ಚೌಕಟ್ಟಿದೆ. ೨೦೦೦ದಿಂದೀಚೆಗೆ ರೇವತಿಯವರು ಕ್ರಿಯಾಶೀಲವಾಗಿ ನಡೆಸಿದ ಚಳುವಳಿಗಳ ಪರಿಚಯವನ್ನು ಈ ಪುಸ್ತಕ ಮಾಡಿಕೊಡುತ್ತದೆ. ಅವರ ಅಭಿಪ್ರಾಯದಲ್ಲಿ ತೃತೀಯಲಿಂಗೀಯರ ಚಳುವಳಿ ಕಲ್ಯಾಣ ಕಾರ್ಯಕ್ರಮ ಅಲ್ಲ; ಬದಲಿಗೆ ಹಕ್ಕುಗಳ ಸ್ಥಾಪನಾ ಕಾರ್ಯಕ್ರಮ.

ಕಾವ್ಯಲೋಕ



# ಬದುಕು ಕಟ್ಕೋಣ



ಆ ಬದಮಾಶ್‌ಗಳು ಅಲ್ಲಿ
ಏನನ್ನಾದರೂ ಕಟ್ಟಿಕೊಳ್ಳಲಿ
ನಾವು ಮಾತ್ರ ನಮ್ಮ ಬದುಕು ಕಟ್ಟಿಕೊಳ್ಳೋಣ
ನಮ್ಮ ಹೃದಯದಲ್ಲಿ ನೀವು
ನಿಮ್ಮ ಹೃದಯದಲ್ಲಿ ನಾವು
ಆಳವಾಗಿ ಬೇರುಬಿಟ್ಟು
ಚಿಗುರಿ ಹೂ-ಹಣ್ಣಾಗೋಣ !

ಬಡವರ ದೀನರ ದೇಹವನ್ನೇ
ಇಗರ್ಜಿ ದೇವಾಲಯವೆಂದುಕೊಳ್ಳೋಣ
ಅಲ್ಲಿ ಕಾಣುವ ಪ್ರೀತಿ-ಕಾರುಣ್ಯ
ಮನುಷ್ಯತ್ವದ ಅಮೂರ್ತ ಭಿಕ್ಷಾ ಕೋರಿಕೆಯ
ಪಾತ್ರೆಯನ್ನೇ
ಅಲ್ಲಾ ಎಂದು ಆರಾಧಿಸೋಣ

ಮನುಷ್ಯರಲ್ಲದವರ ಮಾತು ಕೇಳಿ
ನಾವೇಕೆ ಹೋರಾಡಿ ಹಣ್ಣಾಗಬೇಕು
ಮತ-ಮೇಲಾಟದ ಈ ಕಾದಾಟದಲ್ಲಿ
ನಾವೇಕೆ ದಾರಿಯ ಹೆಣವಾಗಬೇಕು

ನಮಗೆ ಸತ್ತ ನಂತರ ಸಿಗುವ ಸ್ವರ್ಗಕ್ಕಿಂತ
ಇಲ್ಲಿ ಅವಿಭಕ್ತ ಎರಡು ಹೊತ್ತು ನಿಶ್ಚಿಂತೆಯಿಂದ
ಗಂಜಿ ಕುಡಿಯುವ ಕುಡಿಸುವ ಭಾಗ್ಯಬೇಕು
ವಿಷಕಾರಿ ಸರ್ಪಗಳೇ ಪಾಪದ ಪಿಂಡಗಳೇ
ನಮ್ಮಷ್ಟಕ್ಕೆ ನಮ್ಮನ್ನು ಬಿಟ್ಟುಬಿಡಿ
ನಮಗೆ ಶಾಂತಿ ಬೇಕು

ಆ ಹರಾಮಕೋರ್ರು ಕಲ್ಲನ್ನೋ ಕಟ್ಟಿಗೆಯನ್ನೋ ಒಗೆದು
ಹುತ್ತದ ಹಾವಂತೆ ಸುರಕ್ಷಿತ ಬಂಗಲೆ ಸೇರಿಕೊಳ್ಳುತ್ತಾರೆ
ನಂತರ ಬರುವ ಪೊಲೀಸರು
ರೋಜಿಗಾಗಿ ಕಾಲೆಳೆಯುತ್ತ ಹೊರಬಂದ ನಮ್ಮನ್ನು
ಹಿಡಿದು ಥಳಿಸುತ್ತಾರೆ
ಕೈಯನ್ನೋ ಕಾಲನ್ನೋ ನಡುವನ್ನೋ ಮುರಿದು
ತುತ್ತಿನ ಕತ್ತು ಹಿಚುಕಿ
ಯಾರದ್ದೋ ಸೇಡು ತೀರಿಸಿಕೊಳ್ಳುತ್ತಾರೆ

ದಂಗೆ ನಡೆದಾಗ ಆ ದಗಾಕೋರರ ಬಂಗಲೆಗಳಿಗೆ
ಹಾಕುತ್ತಾರೆ ಪೊಲೀಸ್ ಕಾವಲು
ಪರದೇಶಿ ನಮ್ಮ ಜೋಪಡಿ – ಗೂಡಂಗಡಿಗಳಿಗೆ
ಬೆಂಕಿ ಮಸಾಜು ಮಾಡುವ ಹಿಲಾಲು !

ನಿಮ್ಮನ್ನುಳಿದು ನಮಗೆ
ನಮ್ಮನ್ನುಳಿದು ನಿಮಗೆ ನಿರ್ವಾಹವಿಲ್ಲ
ದಿನವೂ ಮೆಹನತ್ ಮಾಡದೆ
ತುತ್ತು ಅನ್ನಕ್ಕೂ ಗತಿಯಿಲ್ಲ
ನಮಗೆ ಯಾವ ಧರ್ಮ ಯಾವ ಜಾತಿ ?
ಶಿಲುಬೆ-ಸೂರ್ಯ-ಚಂದ್ರ ವಿಶೇಷವೇನಿಲ್ಲ
ಅನ್ನ ಕೊಟ್ಟವರೆ ದೇವರು;
ಆಶ್ರಯನಿತ್ತವರೆ ಗೆಳೆಯರು

ಈ ತೋಳ ನರಿ ಮುಂಗಲಿ ರಣಹದ್ದುಗಳ ನಡುವೆ
ನಾವು ಎಷ್ಟೆಂದರೂ ಕೋಳಿಗಳು
ನಮ್ಮ ಮರಿಗಳನ್ನು ಗಿಡುಗಗಳಿಂದ

ಮೈಯೆಲ್ಲ ಕಣ್ಣಾಗಿ ಜತನ್ ಮಾಡೋಣ
ಕಾಳು-ಕಡಿ, ಸ್ಥಳ ನೋಡಿಕೊಂಡು
ಒಂದೆರಡು ತತ್ತಿಯಿಟ್ಟು ಹಿಗ್ಗಿ
ಪ್ರೀತಿಯಿಂದ ಕಾವು ಕೊಡೋಣ !

**ಹಜರತಅಲಿ ದೇಗಿನಾಳ**
ಕೆಂಗಲಗುತ್ತಿ, ಗುಣದಾಳ ಅಂಚೆ
ವಿಜಯಪುರ ತಾಲೂಕು ಮತ್ತು ಜಿಲ್ಲೆ

ಬೆಂಗಳೂರಿನಲ್ಲಿ ತೃತೀಯ ಲಿಂಗೀಯರು ಮತ್ತು ಸಲಿಂಗಕಾಮಿಗಳ ಹಕ್ಕುಗಳ ಬಗ್ಗೆ ಜಾಗೃತಿ ಮೂಡಿಸುವ ಮತ್ತು ಹೋರಾಟ ನಡೆಸುವ ಹಾಗೂ ಅವರ ಬಗ್ಗೆ ಮಾಹಿತಿ, ಅಧ್ಯಯನ ನಡೆಸುವ ಸಂಸ್ಥೆ 'ಸಂಗಮ'ದ ಪರಿಚಯವಾದದ್ದೇ ರೇವತಿಯವರ ಬದುಕಿನಲ್ಲಿ ಹೊಸದೊಂದು ಬಾಗಿಲು ತೆರೆದುಕೊಳ್ಳುತ್ತದೆ. ತಮ್ಮ ಸಮುದಾಯದವರ ಒಳಿತಿಗಾಗಿ ದುಡಿಯಬೇಕೆಂದು ಸದಾ ತುಡಿಯುತ್ತಿದ್ದ ರೇವತಿಯ ಮನಸ್ಸು ಈ ಅವಕಾಶವನ್ನು ಸಮರ್ಥವಾಗಿ ಬಳಸಿಕೊಳ್ಳುತ್ತದೆ. ೨೦೦೦ದಲ್ಲಿ ಸಂಗಮದಲ್ಲಿ ಕಚೇರಿ ಸಹಾಯಕರಾಗಿ ಕೆಲಸಕ್ಕೆ ಸೇರುವ ರೇವತಿ, ನಂತರ ೨೦೦೮ರಲ್ಲಿ ಅದರ ನಿರ್ದೇಶಕ ಸ್ಥಾನದವರೆಗೂ ಬೆಳೆಯುವ ಪ್ರಕ್ರಿಯೆ ನಿಜಕ್ಕೂ ಅತ್ಯಂತ ರೋಮಾಂಚಕವಾದದ್ದು. ಈ ಸಂಗಮ ಸಂಸ್ಥೆಯಲ್ಲಿ ಕೆಲಸ ಮಾಡುತ್ತಿದ್ದಾಗ ಬೆಂಗಳೂರಿನ ಮಹಿಳಾ ಸಂಘಗಳ ಒಕ್ಕೂಟವು ವೈಭವದಿಂದ ಆಚರಿಸಿದ ವಿಶ್ವ ಮಹಿಳಾದಿನದಲ್ಲಿ ಭಾಗವಹಿಸಿದ ರೇವತಿ, ಅಲ್ಲಿ ನೂರಾರು ಮಹಿಳೆಯರ ಎದುರಿಗೆ ತನ್ನ ಸ್ವರಚಿತ ಕವನವನ್ನು ಓದುವ ಮೂಲಕ ಅವರ ಅಭಿವ್ಯಕ್ತಿಗೊಂದು ಹೊಸರೂಪ ಪಡೆದುಕೊಳ್ಳುತ್ತಾರೆ. ೨೦೦೪ರ ಜನವರಿಯಲ್ಲಿ ಮುಂಬೈನಲ್ಲಿ ನಡೆದ ವರ್ಲ್ಡ್ ಸೋಷಿಯಲ್ ಫೋರಂನಲ್ಲಿ ಆಹ್ವಾನಿತರಾದ ರೇವತಿಗೆ ಅವರ ಜೀವನ ಗಾಥೆಯನ್ನು ನಿವೇದಿಸುವ ಅವಕಾಶ ಸಿಕ್ಕುತ್ತದೆ. ಈ ಸಂಸ್ಥೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗಲೇ ಪರಿಚಯವಾಗುವ ಅಲ್ಲಿನ ಹಿರಿಯ ಸಹೋದ್ಯೋಗಿ ಯೊಬ್ಬರನ್ನು ಪ್ರೇಮಿಸಿ ಮದುವೆಯಾಗುವ ರೇವತಿಗೆ ಬದುಕಿನ ಮತ್ತೊಂದು ಮಜಲು ತೆರೆಯುತ್ತದೆ. ಆದರೆ ಮದುವೆಯ ಈ ಬದುಕು ಕೇವಲ ಒಂದು ವರ್ಷದ ಅವಧಿಯದ್ದಾಗಿದ್ದು ಅಲ್ಲೂ ಅವರಿಗೆ ನಿರಾಸೆ ಎದುರಾಗುತ್ತದೆ.

ಭಾರತದಲ್ಲಿ ಪಾಸ್‌ಪೋರ್ಟ್ ಪಡೆದ ಮೊದಲ ಹಿಜ್ರಾ ಮಹಿಳೆ ರೇವತಿಯವರು. ಪಾಸ್‌ಪೋರ್ಟ್ ಪಡೆಯಲು ಅವರು ನಡೆಸಿದ ಹೋರಾಟವು ಅವರ ಚಳುವಳಿಯ ಒಂದು ಪರಿಚಯವನ್ನು ಮಾಡಿಕೊಡುತ್ತದೆ. ಏಷ್ಯನ್ ವಿಮೆನ್ ರೈಟ್ಸ್ ಕೌನ್ಸಿಲ್‌ರವರು ಬಾಂಗ್ಲಾದೇಶದಲ್ಲಿ ವ್ಯವಸ್ಥೆ ಮಾಡಿದ್ದ ಕಾರ್ಯಕ್ರಮದಲ್ಲಿ ಭಾಗವಹಿಸಲು ಆಹ್ವಾನ ನೀಡಿದಾಗ ರೇವತಿಯವರಿಗೆ ಮೊದಲ ಬಾರಿಗೆ ಪಾಸ್‌ಪೋರ್ಟ್ ಪಡೆಯಬೇಕಾದ ಸಂದರ್ಭವೊದಗಿ ಬರುತ್ತದೆ. ಪಾಸ್‌ಪೋರ್ಟ್‌ಗೆಂದು ಸ್ಟಾಂಪ್ ಪೇಪರಿನಲ್ಲಿ ರೇವತಿಯೆಂಬ ಹೆಸರನ್ನು ಬದಲಾಯಿಸಿಕೊಂಡು ಪತ್ರಿಕೆಯಲ್ಲಿ ಕೊಟ್ಟು ಈ ವಿವರಗಳನ್ನು ಮತ್ತು ವಯಸ್ಸಿನ ಪುರಾವೆಗಾಗಿ ಶಾಲಾ ಸರ್ಟಿಫಿಕೇಟನ್ನು ಲಗತ್ತಿಸಿ ಪಾಸ್‌ಪೋರ್ಟ್ ಕಚೇರಿಗೆ ನೀಡಿದಾಗ, ಅಲ್ಲಿ ಅರ್ಜಿ ತಿರಸ್ಕೃತವಾಯಿತು. ಕಾರಣ ಶಾಲಾ ದಾಖಲೆಯಲ್ಲಿ ಹುಡುಗನಾಗಿದ್ದವನು, ಅರ್ಜಿಯಲ್ಲಿ ಹುಡುಗಿಯಾಗಿದ್ದುದು. ಲಿಂಗ ಬದಲಾವಣೆಗೆ ಪುರಾವೆ ಬೇಕು. ನಮ್ಮ ಆಸ್ಪತ್ರೆಗಳು ಇಂತಹ ಸರ್ಟಿಫಿಕೇಟ್ ಅಷ್ಟು ಸುಲಭವಾಗಿ ಕೊಟ್ಟುಬಿಡುತ್ತಾರಾ? ವಾಣಿವಿಲಾಸ ಆಸ್ಪತ್ರೆಗೆ ಹೋದರೆ, ಅವರು ವಿಕ್ಟೋರಿಯಾ ಆಸ್ಪತ್ರೆಗೆ ಸಾಗುಹಾಕುತ್ತಾರೆ. ಅಲ್ಲಿ ವಿಮೋಚನಾದವರ ನೆರವಿನಿಂದ ಅಂತೂ ಸರ್ಟಿಫಿಕೇಟ್ ಪಡೆಯುವ ವೇಳೆಗೆ ಒಂದು ದೊಡ್ಡ ಹೋರಾಟವೇ ಆಗಿಹೋಗುತ್ತದೆ. ನಂತರ ಈ ಮೆಡಿಕಲ್ ಸರ್ಟಿಫಿಕೇಟ್ ಹಾಗೂ ಕರ್ನಾಟಕ ಹೈಕೋರ್ಟ್ ಆದೇಶದ ಮೂಲಕ ಎಲ್ಲ ದಾಖಲೆಗಳಲ್ಲೂ ಬ್ಯಾಂಕ್ ಠೇವಣಿ, ಆಸ್ತಿ ದಾಖಲೆ, ವಿದ್ಯುಚ್ಛಕ್ತಿ ಬಿಲ್ – ಹೀಗೆ ಎಲ್ಲ ದಾಖಲೆಗಳಲ್ಲೂ ರೇವತಿಯೆನಿಸಿಕೊಳ್ಳುವ ಪ್ರಕ್ರಿಯೆ ಒಂದು ಹೋರಾಟವಾಯಿತು. ನಂತರ ಉಳಿದವರಿಗೆ ಇದರಿಂದ ಹಾದಿ ಸ್ವಲ್ಪ ಸುಗಮವಾಯಿತು.

ಈ ಪುಸ್ತಕದ ವಿಶೇಷವೇನೆಂದರೆ, ಟ್ರಾನ್ಸ್ ಪುರುಷರ ಹಕ್ಕಿನ ಹೋರಾಟದ ಕಥೆಯೂ ಇಲ್ಲಿದೆ. ಟ್ರಾನ್ಸ್ ಪುರುಷರ ಬದುಕು ಟ್ರಾನ್ಸ್ ಮಹಿಳೆಯರ ಬದುಕಿಂತ ಕಷ್ಟತರವಾದ್ದು. ಮೂಕನ್, ಚಾರು, ಕಿರಣ್, ಸೋನು ನಿರಂಜನ್, ಕ್ರಿಷ್ಟಿ ರಾಜ್, ಗೀ ಇಮಾನ್ ಸೆಮ್ಮಲಾ ಮತ್ತು ಸತ್ಯ ರಾಯ್ ನಾಗಪಾಲ್ ಮುಂತಾದವರ ಬದುಕಿನ ಸಂಕಥನವೂ ಇಲ್ಲಿ ಬಿಚ್ಚಿಕೊಳ್ಳುತ್ತದೆ. ಹೆಣ್ಣು ದೇಹದೊಳಗೆ ಅಡಗಿಕೊಂಡಿದ್ದ ಈ ಗಂಡು ಜೀವಗಳ ಜೀವನ ಕಥನ ಯಾರಿಗೂ ಅರ್ಥವಾಗುವುದಿಲ್ಲ. ಇವರೆಲ್ಲರು ಗಂಡಾಗಿ ಬದುಕಲು ಆಸೆಪಟ್ಟು ಹೆಂಗಸರೊಂದಿಗೆ ಬದುಕಲು ಇಚ್ಛಿಸಿದವರು. ಸತ್ಯ ರಾಯ್ ನಾಗಪಾಲ್ ರಾಷ್ಟ್ರ ಪ್ರಶಸ್ತಿಪಡೆದ ಛಾಯಾಚಿತ್ರ ಕಲಾವಿದರು. ಇವರಲ್ಲಿ ಕೆಲವರು ಮದುವೆಯಾಗಿ ಸುಂದರ ಬದುಕನ್ನು ಸಾಗಿಸುತ್ತಿದ್ದಾರೆ. ಇವರೆಲ್ಲ ಅವರದೇ ಗುಂಪಿನ ಸಂಘ, ಸಂಸ್ಥೆಗಳಲ್ಲಿ ಸಕ್ರಿಯವಾಗಿ ಕೆಲಸ ಮಾಡುತ್ತಿದ್ದಾರೆ. ಇವರ ಬಾಳಿನ ಸಂಕಥನದ ವೈವಿಧ್ಯಮಯ ಅನುಭವವನ್ನು ಪರಿಚಯಿಸುವುದರ ಮೂಲಕ ಈ ಪುಸ್ತಕಕ್ಕೆ ಮೌಲಿಕತೆಯನ್ನು ತಂದುಕೊಟ್ಟಿದ್ದಾರೆ. ರೇವತಿಯವರಲ್ಲಿ ಕವಿ ಹೃದಯದ ಜೊತೆಗೆ ನಟಿಯೂ ಇದ್ದಾಳೆ. ಪ್ರಸಿದ್ಧ ತಮಿಳು ನಿರ್ದೇಶಕ ಸಂತೋಷ್ ಶಿವನ್ ಅವರ ನಿರ್ದೇಶನದ ಚಿತ್ರ 'ನವರಸ'ದಲ್ಲಿ ನಟಿಸಿದರು. ಈ ಚಿತ್ರಕ್ಕೆ ರಾಷ್ಟ್ರಪ್ರಶಸ್ತಿಯು ಸಿಕ್ಕಿತು. ನಂತರ ಮತ್ತೊಂದು ತಮಿಳು ಚಿತ್ರ ವಿ.ವಿ. ಕಾತಿರ್ ನಿರ್ದೇಶನದ 'ತೇನವತ್ತು'ನಲ್ಲಿಯೂ ಅಭಿನಯಿಸಿದ್ದಾರೆ. ೨೦೧೩ರಲ್ಲಿ ಹೆಗ್ಗೋಡಿನ ನೀನಾಸಂ ಕಲಾವಿದ ಡಾ॥ ಎಂ. ಗಣೇಶ್ ಅವರ ಹನ್ನೊಂದು ಸದಸ್ಯರ ಜನಮನದಾಟ ತಂಡದ ಮೂಲಕ ರೇವತಿಯವರ ಆತ್ಮಕಥೆ (ಬದುಕು ಬಯಲು) ಕೃತಿಯನ್ನು ರಂಗದ ಮೇಲೆ ತಂದರು. ಈ ನಾಟಕ ೫೦ ಶೋಗಳನ್ನು ಕಂಡಿತು. ಇದನ್ನು ನೋಡಿದ ಮೇಲೆ ರೇವತಿಗೂ ನಾಟಕದಲ್ಲಿ ಅಭಿನಯಿಸುವ ಆಸೆ ಮೂಡುತ್ತದೆ. ಎಂದೂ ನಟನಾ ತರಬೇತಿ ಪಡೆಯದ ರೇವತಿ, ನಟನೆಯನ್ನು ಅಭ್ಯಾಸ ಮಾಡಲು ನೀನಾಸಂನಲ್ಲಿ ಎರಡು ತಿಂಗಳ ತರಬೇತಿ ಪಡೆಯುತ್ತಾರೆ. ನಂತರ ನಾಟಕದಲ್ಲಿ ರೇವತಿಯ ಪಾತ್ರವನ್ನು ಅಭಿನಯಿಸುತ್ತಾರೆ. ಸಾಮಾಜಿಕ ಕಾಳಜಿಯನ್ನು ಹೊಂದಿರುವ ಜನಮನದಾಟ ತಂಡ ಕರ್ನಾಟಕದ ೩೦ ಜಿಲ್ಲೆಗಳಲ್ಲೂ ಈ ನಾಟಕವನ್ನು ಅಭಿನಯಿಸಿದಾಗ, ರೇವತಿ ಮತ್ತು ಅವರ ಇಡೀ ಜೀವನದ ಕಥೆ ಕರ್ನಾಟಕದಾದ್ಯಂತ ಪ್ರಚಾರವಾಗುತ್ತದೆ.

ಕಳೆದ ಒಂದೂವರೆ ದಶಕಗಳಿಂದ ತೃತೀಯ ಲಿಂಗಿಗಳು ತಮ್ಮ ಹಕ್ಕುಗಳಿಗಾಗಿ ನಡೆಸಿರುವ ಹೋರಾಟ ತಡವಾಗಿಯಾದರೂ ಫಲ ಬಿಡಲು ಆರಂಭಿಸಿದೆ. ಏಪ್ರಿಲ್ ೧೫, ೨೦೧೪ರಂದು ಸುಪ್ರೀಂಕೋರ್ಟು ಹಿಜ್ರಾಗಳನ್ನು ಈ ದೇಶದ ಪ್ರಜೆಗಳೆಂದು ಪರಿಗಣಿಸಬೇಕೆಂಬ ಚರಿತ್ರಾರ್ಹ ತೀರ್ಪು ನೀಡಿತು. ಈ ತೀರ್ಪಿನ ಅನ್ವಯ ಸುಪ್ರೀಂಕೋರ್ಟು ತೃತೀಯಲಿಂಗಿಗಳನ್ನು ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಹಿಂದುಳಿದ ವರ್ಗವಾಗಿ ಪರಿಗಣಿಸಿ ಓಬಿಸಿಗಳಿಗೆ ಸಿಕ್ಕುವ ಸ್ಥಾನಮಾನವನ್ನು ಅವರಿಗೆ ನೀಡಬೇಕೆಂದು ಕೇಂದ್ರ ಸರ್ಕಾರಕ್ಕೆ ಸೂಚಿಸಿತು. ಮುಂದುವರೆದಂತೆ ಶಿಕ್ಷಣ ಸಂಸ್ಥೆಗಳಲ್ಲಿ ಪ್ರವೇಶಕ್ಕೆ ಮತ್ತು ಉದ್ಯೋಗಾವಕಾಶಗಳಿಗೆ ಅವರನ್ನು ಓಬಿಸಿ ವಲಯದೊಳಗೆ ಪರಿಗಣಿಸಬೇಕೆಂದು ಆದೇಶಿಸಿತು. ಶ್ರೀ ತಿರುಚಿ ಶಿವ, ಡಿಎಂಕೆ ಪಕ್ಷದ ಸಂಸತ್ ಸದಸ್ಯ ೨೦೧೫ರ ಏಪ್ರಿಲ್ ೨೪ರಂದು ಮಂಡಿಸಿದ ಟ್ರಾನ್ಸ್ ಜೆಂಡರ್ ಹಕ್ಕುಗಳ ಮಸೂದೆ, ೨೦೧೫ ರಾಜ್ಯಸಭೆಯಲ್ಲಿ ಜಾರಿಯಾಯಿತು. ಈ ದಿಕ್ಕಿನಲ್ಲಿ ಇದೂ ಒಂದು ಸ್ವಾಗತಾರ್ಹ ಬೆಳವಣಿಗೆ.

ಈ ಹಿನ್ನೆಲೆಯಲ್ಲಿ ರೇವತಿಯವರು ಕೊನೆಗೆ ಹೇಳುತ್ತಾರೆ: "ಇಂದು ಮತ್ತು ಮುಂದು ಟ್ರಾನ್ಸ್ ಜೆಂಡರ್‌ಮಂದಿಗೆ ಒಂದು ಸಮಾನತೆಯ, ಸಮಾಜ ಒಪ್ಪಿತ ಜಗತ್ತು ಸೃಷ್ಟಿಯಾಗುವ ಕನಸು ಕಾಣುತ್ತೇನೆ. ಈ ಜಗತ್ತಿನಲ್ಲಿ ಶಾಸನಗಳು ಮತ್ತು ಸಮಾಜದ ಒಪ್ಪಿಗೆ ಪರಸ್ಪರ ಬೆಂಬಲಿಸುವಂತೆ ಆಗಲಿ. ಈ ವಿಷಯವಾಗಿ ಸುಪ್ರೀಂಕೋರ್ಟು ನೀಡಿರುವ ತೀರ್ಪು ಟ್ರಾನ್ಸ್ ಮಹಿಳೆಯರ ಅಸ್ತಿತ್ವವನ್ನು ಮತ್ತು ಅವರನ್ನು ಮನುಷ್ಯರೆಂದು ಗುರುತಿಸಿದಂತಾಗಿದೆ. ಇದು ಸ್ವಾಗತಾರ್ಹ ಹೆಜ್ಜೆಯಷ್ಟೇ. ಸಮಾಜದ ಒಪ್ಪಿಗೆ ಮತ್ತು ಸಾಮಾಜಿಕ ಪರಿವರ್ತನೆಯನ್ನು ತರುವ ನಿಟ್ಟಿನಲ್ಲಿ ಇನ್ನೂ ಆಗಬೇಕಾದ್ದು ಬಹಳಷ್ಟಿದೆ."

ರೇವತಿಯವರು ಈ ಪುಸ್ತಕದಲ್ಲಿ ಚರ್ಚಿಸಿರುವ ಸಮಸ್ಯೆಗೆ ವಿಶಾಲವಾದ ಪರಿಹಾರವನ್ನು ಕಾಣಬಯಸುವುದರಲ್ಲೇ ಅವರ ಚಿಂತನೆ ಮತ್ತು ಕ್ರಿಯೆಯ ಶ್ರೇಷ್ಠತೆ ಅಡಗಿದೆ. "ಕೇವಲ ಲೈಂಗಿಕ ಶೋಷಣೆಯಿಂದ ಮುಕ್ತರಾದರೆ ಸಾಲದು, ಜಾತಿ, ವರ್ಣ, ಧರ್ಮ–ಮುಂತಾದ ಎಲ್ಲ ಅಧಿಕಾರ ವಲಯದ ಶೋಷಣೆಗಳಿಂದಲೂ ಮುಕ್ತವಾಗಬೇಕು" ಎಂದು ಆಶಿಸುವ ರೇವತಿಯವರ ಜೀವನ ದರ್ಶನವನ್ನು ಈ ಪುಸ್ತಕದಲ್ಲಿ ಕಟ್ಟಿಕೊಡಲಾಗಿದೆ. "ನಮ್ಮ ಕನಸುಗಳು ನನಸಾಗುವುದಕ್ಕೆ ಬದ್ಧತೆ ಮತ್ತು ಅವಕಾಶ" ಎರಡೂ ಬೇಕು, ಎನ್ನುವ ರೇವತಿಯವರಿಗೆ ಅವರ ಬದುಕಿನಲ್ಲಿ ಎರಡೂ ಸಿಕ್ಕಿವೆ. "ಕೊನೆಗೆ, ಜೆಂಡರ್ ಇಲ್ಲದಂತಹ ವಿಶ್ವವೊಂದನ್ನು ನಾನು ಕಾಣ ಬಯಸುತ್ತೇನೆ... ನಮ್ಮನ್ನು ಮನುಷ್ಯರೆಂಬಂತೆ ಕಾಣಿ. ಘನತೆ, ಗೌರವಗಳಿಂದ ಬದುಕ ಬಯಸುವ ನಮ್ಮ ಆಸೆಯನ್ನು ಗೌರವಿಸಿ. ಈ ನನ್ನ ಪುಸ್ತಕದ ಓದುಗರಿಂದ ನಾನು ನಿರೀಕ್ಷಿಸುವುದು ಅದನ್ನೇ", ಎಂಬ ಅವರ ಮಾತುಗಳು ಪುಸ್ತಕ ಓದಿಟ್ಟ ನಂತರವೂ ನಮ್ಮ ಕಿವಿಯಲ್ಲಿ ಪ್ರತಿಧ್ವನಿಸುತ್ತಿರುತ್ತದೆ.

**ಡಾ॥ ಎನ್. ಗಾಯತ್ರಿ**
ನಂ. ೨೦೧, 'ಸ್ಕೈಲೈನ್ ಗೋಲ್ಡನ್ ರೇಸ್', ಛತ್ರಂ ಬ್ಲಾಕ್, ಕೆಂಪೇಗೌಡ ನಗರ
ಗವೀಪುರಂ, ಬೆಂಗಳೂರು – ೫೬೦ ೦೧೯

# ಹೇಳದೇ ಹೋದ ಭೂಪತಿ



**ದಿ** : ೨೫-೧-೨೦೧೭ರಂದು ಭಾರತ ಕಮ್ಯುನಿಸ್ಟ್ ಪಕ್ಷದ ಮಾಜಿ ಶಾಸಕ, ಪ್ರಸ್ತುತ ಕಾಂಗ್ರೆಸ್ ಪಕ್ಷದ ವಕ್ತಾರ ಯು. ಭೂಪತಿಯವರ ಅಕಾಲಿಕ ಸಾವು ಹೊಸವರ್ಷದ ಆರಂಭದಲ್ಲಿಯೇ ಆಘಾತ ನೀಡಿತು. ೫೮ ವರ್ಷದ ಭೂಪತಿಯವರು ಗೋವಾದಲ್ಲಿ ನಡೆಯುತ್ತಿದ್ದ ಶಾಸನಸಭಾ ಚುನಾವಣೆಗಳಲ್ಲಿ ಕಾಂಗ್ರೆಸ್ ಪಕ್ಷದ ಪರವಾಗಿ ಪ್ರಚಾರ ಮಾಡುತ್ತ, ಅಲ್ಲಿನ ಕನ್ನಡಿಗರ ಮನೆಮನೆಗೆ ಹೋಗಿ ಮತಯಾಚಿಸುವ ಸಂದರ್ಭದಲ್ಲಿಯೇ ಹೃದಯಾಘಾತವಾಗಿ ನಿಧನರಾದರು.

ಭೂಪತಿಯವರದು ಕ್ರಿಯಾಶೀಲ ವ್ಯಕ್ತಿತ್ವ. ೧೯೮೨ರ ಸಂದರ್ಭದಲ್ಲಿ ಅವರು ಬಳ್ಳಾರಿಯಲ್ಲಿ ಓದುತ್ತಿರುವಾಗಲೇ ಅಖಿಲ ಭಾರತ ವಿದ್ಯಾರ್ಥಿ ಫೆಡರೇಶನ್, ಯುವಜನ ಫೆಡರೇಶನ್‌ಗಳ ಸಕ್ರಿಯ ಕಾರ್ಯಕರ್ತರಾಗಿದ್ದರು. ೧೯೮೪ರಲ್ಲಿ ಈ ಎರಡೂ ಸಂಘಟನೆಗಳಿಂದ ಜಂಟಿಯಾಗಿ ವಿಜಯನಗರ ಉಕ್ಕಿನ ಕಾರ್ಖಾನೆ ಸ್ಥಾಪನೆಗಾಗಿ ಒತ್ತಾಯಿಸಿ ಸಂಡೂರಿನಿಂದ ಬೆಂಗಳೂರಿಗೆ ಸೈಕಲ್ ಜಾಥಾ ಹಮ್ಮಿಕೊಳ್ಳಲಾಗಿತ್ತು. ಅದರ ಮುಖ್ಯ ಸಂಘಟಕರಾಗಿದ್ದವರು ಭೂಪತಿ. ಸಾವಿರಾರು ಯುವಕರನ್ನು ಸಂಘಟಿಸಿ ಸೈಕಲ್ ಜಾಥಾ ನಡೆಸಿ ವಿದ್ಯಾರ್ಥಿ, ಯುವಜನರ ಕುರಿತು ತೋರಿದ ಕಾಳಜಿ ಅವರನ್ನೊಬ್ಬ ನಾಯಕರನ್ನಾಗಿ ರೂಪಿಸಿತು. ಬಳ್ಳಾರಿಯ ಹಿರಿಯ ಸ್ವಾತಂತ್ರ್ಯ ಹೋರಾಟಗಾರ, ಖ್ಯಾತ ನ್ಯಾಯವಾದಿಗಳಾಗಿದ್ದ ಅರವಿಂದ ಮಲೆಬೆನ್ನೂರ ಅವರ ಮಾರ್ಗದರ್ಶನದಲ್ಲಿ ಆ ಭಾಗದ ಕಾರ್ಮಿಕನಾಯಕರಾಗಿಯೂ ಬೆಳೆದರು. ಸೊಂಡೂರು, ತೋರಣಗಲ್ಲು, ಹೊಸಪೇಟೆ ಪ್ರದೇಶದಲ್ಲಿ ನಡೆಯುತ್ತಿದ್ದ ಗಣಿಗಾರಿಕೆ ಕಾರ್ಮಿಕರ ಸಂಘಟನೆ ಮತ್ತು ಹೋರಾಟದಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡ ಭೂಪತಿ ಅವರು ನಾಯಕರಾಗಿ ಬೆಳೆದರು. ದೋಣಿಮಲೈ ಮತ್ತು ಹಟ್ಟಿ ಚಿನ್ನದ ಗಣಿ ಕಾರ್ಮಿಕರ ಹೋರಾಟಗಳಲ್ಲಿ ಕ್ರಿಯಾಶೀಲವಾಗಿ ತೊಡಗಿಸಿಕೊಂಡು ಚಿಕ್ಕವಯಸ್ಸಿನಲ್ಲಿಯೇ ಆ ಭಾಗದ ಪ್ರಮುಖ ನಾಯಕರಾಗಿ ಬೆಳೆದರು.

೧೯೮೫ರಲ್ಲಿ ನಡೆದ ವಿಧಾನಸಭಾ ಚುನಾವಣೆಯಲ್ಲಿ ಸಂಡೂರು ಕ್ಷೇತ್ರದಿಂದ ಭಾರತ ಕಮ್ಯುನಿಸ್ಟ್ ಪಕ್ಷ ಭೂಪತಿಯವರನ್ನು ಅಭ್ಯರ್ಥಿಯಾಗಿ ಕಣಕ್ಕಿಳಿಸಿತು. ಜನತಾ ಪಕ್ಷದ ಬೆಂಬಲವಿದ್ದರೂ ಬಳ್ಳಾರಿ ಆಗ ಕಾಂಗ್ರೆಸ್ ಪಕ್ಷದ ಭದ್ರಕೋಟೆಯಾಗಿತ್ತು. ಸೊಂಡೂರು ಕ್ಷೇತ್ರದ ಕಾಂಗ್ರೆಸ್‌ನಲ್ಲಿ ಆಂತರಿಕ ಭಿನ್ನಾಭಿಪ್ರಾಯವೂ ಇತ್ತು. ಆದರೂ ಪ್ಯೂಡಲ್ ಸಂಸ್ಕೃತಿಯ ಪ್ರಭಾವವಿದ್ದ ಆ ಪ್ರದೇಶದಲ್ಲಿ ಮೇಲ್ವರ್ಗದ, ಮೇಲ್ಜಾತಿಯ ಕಾಂಗ್ರೆಸ್ ಅಭ್ಯರ್ಥಿಯನ್ನು ಎದುರಿಸುವುದು ಸುಲಭದ ಕೆಲಸವಾಗಿರಲಿಲ್ಲ. ತೋರಣಗಲ್ಲು ಎಂಬ ಪುಟ್ಟ ಹಳ್ಳಿಯ, ಹಿಂದುಳಿದವರ್ಗದ, ಬಡರೈತನ ಮಗನಾದ ಭೂಪತಿಯವರಿಗೆ ಕಮ್ಯುನಿಸ್ಟ್ ಪಕ್ಷದ, ಕಾರ್ಮಿಕಸಂಘಟನೆ, ವಿದ್ಯಾರ್ಥಿ, ಯುವಜನ ಸಂಘಟನೆಯ ಬೆಂಬಲವಿತ್ತು. ತೀವ್ರವಾದ ಆರ್ಥಿಕ ತೊಂದರೆಯ ನಡುವೆಯೂ ಕ್ರಿಯಾಶೀಲರಾಗಿ ಕ್ಷೇತ್ರದ ತುಂಬ ಸಂಚರಿಸಿ ತಮ್ಮ ಮಾತು ಮತ್ತು ಕ್ರಿಯಾಶೀಲತೆಗಳಿಂದಲೇ ಜನರನ್ನು ಆಕರ್ಷಿಸಿದರು. ಇಡೀ ರಾಜ್ಯ ಅಚ್ಚರಿಗೊಳ್ಳುವಂತೆ ಕಾಂಗ್ರೆಸ್ ಪಕ್ಷವನ್ನು ಸೋಲಿಸಿ ಸಿಪಿಐನಿಂದ ಶಾಸಕರಾಗಿ ಆಯ್ಕೆಯಾದರು. ಆಗ ಅವರಿಗೆ ಕೇವಲ ೨೬ ವರ್ಷ. ರಾಜ್ಯದಲ್ಲಿಯೇ ಚಿಕ್ಕವಯಸ್ಸಿನ ಶಾಸಕ. ಕಮ್ಯುನಿಸ್ಟ್ ಶಾಸಕರಾಗಿ ಆಯ್ಕೆಯಾಗಿದ್ದ ಹಿರಿಯರಾದ ಎಂ. ಎಸ್. ಕೃಷ್ಣನ್, ಪಂಪಾಪತಿಯವರ ಮಾರ್ಗದರ್ಶನದಲ್ಲಿ ಒಬ್ಬ ಸಮರ್ಥ ಶಾಸಕರಾಗಿ ಶಾಸನಸಭೆಯಲ್ಲಿ ಕೆಲಸ ಮಾಡಿದರು.

ಎ.ಐ.ಎಸ್.ಎಫ್‌ನ ಬಳ್ಳಾರಿಯ ಸಂಘಟನೆಯ ಕ್ರಿಯಾಶೀಲ ವಿದ್ಯಾರ್ಥಿನಿಯಾಗಿದ್ದ ವಸುಂಧರಾ ಅವರು ಭೂಪತಿಯವರ ಸಮಕಾಲೀನರು. ವಸುಂಧರಾ ಆಯುರ್ವೇದ ವೈದ್ಯಕೀಯ ಕಾಲೇಜಿನ ವಿದ್ಯಾರ್ಥಿನಿ. ಚಳುವಳಿಯ ಸಂದರ್ಭದಲ್ಲಿಯೇ ಪರಸ್ಪರ ಪ್ರೀತಿಸಿ ಕಮ್ಯುನಿಸ್ಟ್ ಪಕ್ಷದ ರಾಜ್ಯ ಸಮ್ಮೇಳನದ ವೇದಿಕೆಯ ಮೇಲೆಯೇ ಸರಳ ವಿವಾಹವಾಗಿ ಮಾದರಿಯಾದರು. ಅಂತರ್‌ಜಾತಿ ವಿವಾಹದಿಂದಾಗಿ ಉಂಟಾದ ಪ್ರತಿಕೂಲ ವಾತಾವರಣವನ್ನು ಸಹನೆಯಿಂದ ನಿಭಾಯಿಸಿದರು.

೯೦ರ ದಶಕದಲ್ಲಿ ಕಮ್ಯುನಿಸ್ಟ್ ಪಕ್ಷ ತೊರೆದ ಭೂಪತಿ ಜನತಾಪಕ್ಷ ನಂತರ ಕಾಂಗ್ರೆಸ್ ಸೇರಿದರು. ಕಾಂಗ್ರೆಸ್ ಪಕ್ಷದಲ್ಲಿದ್ದರೂ ತಮ್ಮ ಮೊದಲಿನ ಸರಳತನ ವೈಚಾರಿಕ ಚಿಂತನೆಗಳನ್ನು ಬಿಡಲಿಲ್ಲ. ವಸುಂಧರಾ ನಾಡಿನ ಖ್ಯಾತ ವೈದ್ಯೆಯಾಗಿ, ಲೇಖಕಿಯಾಗಿ, ಸಂಘಟಕಿಯಾಗಿ ಬೆಳೆದರೆ ಭೂಪತಿ ಕಾಂಗ್ರೆಸ್ ವಕ್ತಾರರಾಗಿ ಪ್ರಸಿದ್ಧಿ ಪಡೆದರು. ಇಬ್ಬರಿಗೂ ಕಮ್ಯುನಿಸ್ಟ್ ಪಕ್ಷದ ಕುರಿತು, ಎಡ ಚಳುವಳಿಯ ಕುರಿತು ಅಪಾರ ಗೌರವವಿತ್ತು. ವಸುಂಧರಾ ಮತ್ತು ಭೂಪತಿ 'ನವಕರ್ನಾಟಕ ಪ್ರಕಾಶನ' ಹಾಗೂ 'ಹೊಸತು' ಪತ್ರಿಕೆಯ ಭಾಗವಾಗಿಯೇ ಇದ್ದವರು. ಈ ಸಲದ ಹೊಸತು ವಿಶೇಷ ಸಂಚಿಕೆಗಾಗಿ ಭೂಪತಿಯವರೂ ಹಿನ್ನೆಲೆಯಲ್ಲಿ ಕೆಲಸ ಮಾಡಿದರು. ನ್ಯಾಯವಾದಿಯಾಗಿದ್ದ ಅವರು ನ್ಯಾಯಾಲಯಕ್ಕೆ ಹೋಗದೆ ಸಾಮಾಜಿಕ ಚಟುವಟಿಕೆಗಳಲ್ಲಿ ಕ್ರಿಯಾಶೀಲರಾಗಿದ್ದರು. ಮಾನವ ಮಂಟಪ ಎಂಬ ದಲಿತ - ಪ್ರಗತಿಪರ ಚಿಂತಕರು ಸೇರಿ ಕಟ್ಟಿದ ವೇದಿಕೆಯ ಭಾಗವಾಗಿ ಹಲವಾರು ಅಂತರ್ ಜಾತಿ ವಿವಾಹಗಳನ್ನು ಮಾಡಿಸಿದರು. ಜಾತಿ ವ್ಯವಸ್ಥೆಯ ನಿರ್ಮೂಲನೆಗಾಗಿ ತಮ್ಮ ಮಿತಿಯಲ್ಲಿಯೇ ಕೆಲಸ ಮಾಡಿದರು.

ಕಾಂಗ್ರೆಸ್ ಪಕ್ಷ ಅವರನ್ನು ಕರೆದುಕೊಂಡಿತೆ ಹೊರತು ಅವರಿಗೆ ತಕ್ಕ ಸ್ಥಾನ ಕೊಡಲಿಲ್ಲ. ಆದರೂ ಪತ್ನಿ ವಸುಂಧರಾ ಜೊತೆಗೂಡಿ ಭ್ರಮನಿರಸನರಾಗದೇ ಕೆಲಸ ಮಾಡಿದ ಸ್ನೇಹಜೀವಿ ಭೂಪತಿ ದೂರದ ಗೋವೆಯಲ್ಲಿ ಹೃದಯಾಘಾತವಾಗಿ ಯಾರಿಗೂ ಹೇಳದೇ ಹೋದರು. ಒಬ್ಬ ಪ್ರಗತಿಪರ, ಜಾತ್ಯತೀತ, ಕ್ರಿಯಾಶೀಲ ಮನೋಭಾವದ ರಾಜಕಾರಣಿಯನ್ನು ರಾಜ್ಯ ಕಳೆದುಕೊಂಡಿತು. ರಾಜ್ಯದ ರಾಜಕೀಯ ಕೋಮುವಾದ ಜಾತಿವಾದದ ದಾಳಿಯಲ್ಲಿ ಸಿಲುಕಿರುವಾಗ ಭೂಪತಿಯವರಂಥ ಜಾತ್ಯತೀತ, ಪ್ರಗತಿಪರ ಮನೋಭಾವದ ರಾಜಕಾರಣಿ ಇರಬೇಕಾಗಿತ್ತು. ಭೂಪತಿಯವರದು ಸಾಯುವ ವಯಸ್ಸಲ್ಲ. ಸ್ವಂತ ಮನೆಯೂ ಇಲ್ಲದ ಭೂಪತಿ ಪತ್ನಿ ವಸುಂಧರಾ, ಮಕ್ಕಳಾದ ಅಭಿಮನ್ಯು, ಸಿದ್ಧಾರ್ಥ, ತಾಯಿ, ಸಹೋದರರು ಅಪಾರ ಸ್ನೇಹಿತರು ಬಂಧುಬಳಗದವರನ್ನು ಅಗಲಿದ್ದಾರೆ. ಅವರ ನಿಧನಕ್ಕೆ ಹೊಸತು ಹಾಗೂ ನವಕರ್ನಾಟಕದ ಬಳಗ ನೋವಿನ ನಮನಗಳನ್ನು ಸಲ್ಲಿಸುತ್ತದೆ.

*-ಸಂ.*

# ತಲೆ ಕೊರೆಯುವುದು!

ಎಸ್. ಜಿ. ಶಿವಶಂಕರ್

ವಿಡಂಬನೆ

ಆಹಾ...! ಇಂದಿನ ಲೇಖಕರಿಗೆ ಬರೆಯಲು ಏನೆಲ್ಲಾ ವಿಷಯಗಳು ಹೊಳೆಯುತ್ತವೆ ಎಂದು ಮೂಗೆಳೆಯಬೇಡಿ ! ಈ ವಿಷಯದ ಬಗ್ಗೆ ನಲವತ್ತೈದು ವರ್ಷಗಳಷ್ಟು ಕಾಲ ನಾನು ತಲೆ ಕೆಡಿಸಿಕೊಂಡೇ ಇರಲಿಲ್ಲ ! (ಈಗೇಕೆ ಎಂದು ಕೇಳಬೇಡಿ !)

ಇದೀಗ ಹದಿಹರೆಯಕ್ಕೆ ಬರುತ್ತಿರುವ ನನ್ನ ಮಗಳು ಪದೇಪದೇ ಈ ಪದಪ್ರಯೋಗ ಮಾಡತೊಡಗಿದಾಗ ನಾನು ಈ 'ತಲೆ ಕೊರೆಯುವ' ವಿಷಯದ ಬಗೆಗೆ ಗಂಭೀರ ಚಿಂತನೆ ನಡೆಸಿದೆ.

ಚಿಂತನೆಯ ಆಳಕ್ಕಿಳಿಯುತ್ತ ಇದರ ವ್ಯಾಪಕತೆಯ ಬಗೆಗೆ ವಿಸ್ಮಯಗೊಂಡೆ ! ಸಾಮಾನ್ಯವಾಗಿ ಎಲ್ಲರೂ ಚಿಂತನೆಯ ಆಳಕ್ಕಿಳಿಯುವುದು ಜಳಕ ಮಾಡುವಾಗ, ಅಂದರೆ ಸ್ನಾನ ಮಾಡುವಾಗ ! ಆಗಲೇ...ಎಲಾ...!? ತಲೆ ಕೊರೆಯುವಿಕೆ ಇಷ್ಟು ವಿಶಾಲವೂ, ವೈವಿಧ್ಯಮಯವೂ ಆಗಿದೆಯಲ್ಲ ಎಂದು ಜಳಕ ಮಾಡುವಾಗ ಪುಳಕಗೊಂಡೆ !

ಮೊದಲಿಗೆ, ತಲೆ ಕೊರೆಯುವ ಪದದ ಬಗೆಗೆ ಪರಿಚಯ ಮಾಡಿಕೊಟ್ಟು ನನ್ನ ಮಗಳಿಗೆ ಕೃತಜ್ಞತೆ ಅರ್ಪಿಸುವುದು ನನ್ನ ಕರ್ತವ್ಯ ಎಂದು ತಿಳಿಯುವೆ. ಬಾಲ್ಯ ಮುಗಿಯದ, ಯೌವನ ಬಾರದ ಎಡಬಿಡಂಗಿ ವಯಸ್ಸಿನಲ್ಲಿರುವವರ ಕ್ರಿಯಾಶೀಲತೆಯ ಬಗ್ಗೆ ಒಂದೆರಡು ಮಾತುಗಳನ್ನಿಲ್ಲಿ ಹೇಳದೆ ಮುಂದುವರಿಯುವುದು ಸೂಕ್ತವೆನಿಸುವುದಿಲ್ಲ. ಮುಂದೆ ನಾನು ಹೇಳಲಿರುವ ಮಾತುಗಳನ್ನು ಎಲ್ಲ ತಂದೆ–ತಾಯಿಯರೂ ಒಪ್ಪುವರೆಂದು ನನ್ನ ಖಚಿತ ನಂಬಿಕೆ. ನಮ್ಮ ಮುಂದೆಯೇ ನಮ್ಮ ಮಕ್ಕಳು ಆಕಾರದಲ್ಲಿ ಬೆಳೆಯುತ್ತಾ, ನಮ್ಮ ಹಿತನುಡಿಗೆ ಮುಖ ಸಿಂಡರಿಸಿಕೊಳ್ಳುತ್ತ ಸಿಂಡ್ರೆಲಾಗಳಂತೆ ಆಡುವ ಕಾಲವೇ ಅವರ ಬದುಕಿನಲ್ಲಿ ತುಂಬ ಕ್ರಿಯಾಶೀಲ ಎನ್ನುವುದು ನನ್ನ ಖಚಿತ ಅಭಿಪ್ರಾಯ ! ನಮ್ಮ ಬುದ್ಧಿಮಾತುಗಳನ್ನು ಲದ್ದಿ ಮಾತುಗಳಂತೆ ಅಸಹ್ಯಿಸಿಕೊಳ್ಳುವುದು ಶುರುವಾದಾಗ ಎಲ್ಲ ತಂದೆ–ತಾಯಿಯರೂ ಎಚ್ಚರಿಕೆಯಿಂದ ತಮ್ಮ ಮಕ್ಕಳನ್ನು ಗಮನಿಸಬೇಕು. ಈ ಸ್ಥಿತ್ಯಂತರದ ಕಾಲದಲ್ಲಿ ಅವರನ್ನು ಮತ್ತು ಅವರ ಚಟುವಟಿಕೆಗಳನ್ನು ಗಮನಿಸುತ್ತ, ತಪ್ಪು ಕಂಡಾಗ ಎಚ್ಚರಿಸುತ್ತ, ಗದರಿಸುತ್ತ, ಅವರು ಕೇಳದೆ ಮುಖ ಮುರಿದರೂ ಸಹ ಹಿತವಚನಗಳನ್ನು ಹೇಳುವುದು ತೀರಾ ಅವಶ್ಯಕ.

ಉದಾಹರಣೆಗೆ, ವಯಸ್ಸಿಗೆ ಬಂದ ಮಗ ಒಮ್ಮೆಲೇ ಸಂಗೀತಪ್ರೇಮಿಯಾಗಿ, ಕೋಮಲತೆ ಕಳೆದುಕೊಂಡ ತನ್ನ ಒಡಕಲು ದನಿಯಲ್ಲಿ ಹಿಂದಿ ಇಲ್ಲವೇ ಇಂಗ್ಲಿಷ್ ಹಾಡುಗಳನ್ನು ಜೋರಾಗಿ ಹಾಡುವಾಗ ತಂದೆ–ತಾಯಿಯರು ಅಕ್ಕಪಕ್ಕದ ಮನೆಯ ಕಡೆ ನೋಡಿ ಅರಿತುಕೊಳ್ಳಬೇಕಾದ ವಿಷಯವಿರುತ್ತದೆ. ಹೀಗೆ ಕಿರಿಚಿಕೊಳ್ಳುವುದು ಸನಿಹದಲ್ಲಿ ಹುಡುಗಿಯೊಬ್ಬಳು ಇದ್ದಾಗ ಎನ್ನುವುದನ್ನು ಶೀಘ್ರವೇ ಅರ್ಥಮಾಡಿಕೊಳ್ಳಬೇಕು !

ಇನ್ನು, ಹೆಣ್ಣುಮಕ್ಕಳ ವಿಷಯದಲ್ಲಿ ಹೇಳುವುದಾದರೆ, ಕನ್ನಡಿಯ ಮುಂದೆ ಹೆಚ್ಚುಹೆಚ್ಚು ಸಮಯ ಕಳೆಯಲು ಪ್ರಾರಂಭಿಸಿದಾಗಿನಿಂದ ತಂದೆ–ತಾಯಿಯರು ಎಚ್ಚರಗೊಳ್ಳಲೇಬೇಕು ! ಆಕೆ ಆಚೆ ನಿಂತು ಸರಿಯಾಗಿರುವ ತನ್ನ ಬಟ್ಟೆಗಳನ್ನು ಮತ್ತೆ ಮತ್ತೆ ಸರಿ ಮಾಡಿಕೊಳ್ಳುವುದೋ, ಇಲ್ಲ ತನ್ನ ಗೆಳತಿಯ ಜೊತೆ ನಿಂತು ಮಾತನಾಡುವಾಗ ವಿನಾ ಕಾರಣ ನಗಲು ಪ್ರಾರಂಭಿಸಿದರೆ ಪಕ್ಕದ ಮನೆಯ ಹುಡುಗ ಹತ್ತಿರದಲ್ಲೆಲ್ಲೋ ಠಳಾಯಿಸುತ್ತಿದ್ದಾನೆ ಎಂದು ಅರ್ಥ ಮಾಡಿಕೊಳ್ಳಬೇಕು !

ಕ್ಷಮಿಸಿ, ನಾನು ತಲೆ ಕೊರೆಯುವ ವಿಷಯದಿಂದ ದೂರ ಸರಿದಂತೆ ಕಾಣುತ್ತದೆ. ಅದಕ್ಕೇ ಈಗ ತಲೆ ಕೊರೆಯುವುದಕ್ಕೆ ಕ್ಷಮಿಸಿ, ತಲೆ ಕೊರೆಯುವ ವಿಷಯಕ್ಕೆ ಬರುತ್ತೇನೆ. ಮೊದಲಿಗೆ 'ತಲೆ ಕೊರೆಯುವುದು' ಎಂದರೇನು ಎಂದು ಖಚಿತವಾಗಿ ತಿಳಿಯುವುದು ಅವಶ್ಯಕ.

ತಲೆ ಕೊರೆಯುವಿಕೆಯ ಅರ್ಥ ಗ್ರಹಿಸಲು, ಅದನ್ನು ಪದಶಃ ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಬಾರದು. ಹಾಗೆ ಅರ್ಥ ಮಾಡಿಕೊಳ್ಳಲು ಹೊರಟರೆ ಭೌತಿಕವಾಗಿ ಯಾರದರೊಬ್ಬರ ತಲೆಯನ್ನು ಮತ್ತೊಬ್ಬರು ಹಿಡಿದು ಡ್ರಿಲ್ಲಿಂಗ್ ಮಷೀನಿನಿಂದ ರಂಧ್ರ ಕೊರೆಯುವ ಚಿತ್ರ ನಮ್ಮ ಕಣ್ಮುಂದೆ ಬರುತ್ತದೆ. ಇದು ಅನರ್ಥಕ್ಕೆ ಎಡೆಮಾಡಿಕೊಡುತ್ತದೆ. ಇಂಥ ತಲೆ ಕೊರೆಯುವಿಕೆಯಲ್ಲಿ ವಿಶೇಷ ಪರಿಣತಿ ಪಡೆದ ಶಸ್ತ್ರವೈದ್ಯರೊಬ್ಬರು (ಸಕಾರಣವಾಗಿದ್ದರೆ) ಮಾತ್ರ ಮಾಡಲು ಸಾಧ್ಯ !

ಹಾಗಾದರೆ ತಲೆ ಕೊರೆಯುವಿಕೆಯನ್ನು ಹೇಗೆ ಅರ್ಥಮಾಡಿಕೊಳ್ಳಬೇಕು ? ಇದಲ್ಲವೇ ಸಮಸ್ಯೆ ! ಇದಕ್ಕೆ ಸಾರ್ವಜನಿಕವಾದ, ಸರ್ವಕಾಲಕ್ಕೂ ಅನ್ವಯವಾಗುವ ಅರ್ಥ ಹೀಗಿದೆ : ಒಬ್ಬರಿಗೆ ಇಷ್ಟವಾಗದ ವಿಷಯವನ್ನು ಇನ್ನೊಬ್ಬರು ಅವರ ಕಿವಿಯ ಮೇಲೆ ನಿರಂತರವಾಗಿ ತುರುಕುವುದೇ ತಲೆ ಕೊರೆಯುವುದು. ಈ ಪದ ವ್ಯಾಪಕವಾಗಿ ಬಳಕೆಯಲ್ಲಿದೆ. ಇಲ್ಲಿ ಮಾತು ಒಲ್ಲದವರನ್ನು ತಲೆ ಕೊರೆಸಿಕೊಳ್ಳುವವರು ಎಂದೂ, ಅತ್ಯುತ್ಸಾಹದಿಂದ ಮಾತಾಡುವವರನ್ನು ತಲೆ ಕೊರೆಯುವರು ಎಂದು ಕರೆಯಬಹುದು. ಈ ತಲೆ ಕೊರೆಯುವಿಕೆಗೆ ಜಾತಿ, ವರ್ಗ, ವರ್ಣ, ಗಂಡು–ಹೆಣ್ಣು ಎಂಬ ಭೇದವಿಲ್ಲ ! ಇದು ಸಾರ್ವವ್ಯಾಪಕ ಮತ್ತು ಸಾರ್ವಕಾಲಿಕ !

'ತಲೆ ಕೊರೆಯುವುದು' ಎಂಬುದು ಒಂದು ಭಾವನಾತ್ಮಕ ಪದ ! ಒಲ್ಲದ ವ್ಯಕ್ತಿಯ ತಲೆಯಲ್ಲಿ ಅತ್ಯುತ್ಸಾಹದಿಂದ ಮಾತು ತುರುಕುವ ಭಾವನಾತ್ಮಕವಾದ ಅರ್ಥವನ್ನಿಲ್ಲಿ ಗ್ರಹಿಸಲಾಗಿದೆ.

'ತಲೆ ಕೊರೆಯುವುದು' ಪದಕ್ಕೆ ಅನೇಕ ಪರ್ಯಾಯ ಪದಗಳೂ ಇವೆ. ಇವು ಆಯಾ ಪ್ರಾಂತ್ಯಕ್ಕೆ, ಪ್ರಾದೇಶಿಕತೆಗೆ ಅನುಗುಣವಾಗಿರುತ್ತವೆ. ಉದಾಹರಣೆಗೆ, ಮೈಸೂರಿನಲ್ಲಿ 'ತಲೆ ಕೊರೆಯುವುದು' ಎಂಬ ಪದ ಬಳಕೆಯಲ್ಲಿದ್ದರೆ, ಬೆಂಗಳೂರಿನಲ್ಲಿ ಅದು 'ಭೈರಿಗೆ ಹಿಡಿಯುವುದು' ಅಥವಾ 'ರೀಲು ಸುತ್ತುವುದು' ಆಗಿರಬಹುದು. ಕೆಲವು ವರ್ಷ ನಾನು ಕೋಲಾರ ಚಿನ್ನದ ಗಣಿ ಪ್ರದೇಶದಲ್ಲಿ ಕೆಲಸ ಮಾಡಿದ್ದೆ. ಆಗ ಅಲ್ಲಿ 'ಮೊಳೆ ಹೊಡೆಯುವುದು' ಎಂಬ ಪದವನ್ನು ಆಂಗಿಕ ಕ್ರಿಯೆಯೊಂದಿಗೆ ಉಪಯೋಗಿಸುತ್ತಿದ್ದೆವು.

ಮಾತಾಡುವವನ ವೈಖರಿ ಕರ್ಕಶವಾಗಿದ್ದರೆ ಅದನ್ನು 'ರಣಭೈರಿಗೆ' ಎಂದೂ ಕರೆಯಬಹುದು. ಇದೇ ಶಬ್ದ ದಕ್ಷಿಣ ಕನ್ನಡದ ಮಂಗಳೂರು ಕಡೆ 'ಪಿರಿಪಿರಿ' ಆಗಿರಬಹುದು. ಹೀಗೆ ತಲೆ ಕೊರೆಯುವಿಕೆ ಪದಕ್ಕೆ ಪರ್ಯಾಯ ಪದಗಳು ಜಾಗದಿಂದ ಜಾಗಕ್ಕೆ, ಕಾಲದಿಂದ ಕಾಲಕ್ಕೆ, ಭಾಷೆಯಿಂದ ಭಾಷೆಗೆ, ಬೇರೆ ಬೇರೆಯಾಗಿರುತ್ತವಾದರೂ ಅರ್ಥ ಮಾತ್ರ ಒಂದೇ.




ಕೆಲವರು ತಲೆ ಕೊರೆದರೂ ತಡೆದುಕೊಳ್ಳಬಹುದು, ಇನ್ನು ಕೆಲವರ ತಲೆ ಕೊರೆತ ತಡೆಯಲಾಗದೆ ಆಸ್ಪ್ರೋ, ಅನಾಸಿನ್ ಮಾತ್ರೆಗಳನ್ನು ತಯಾರಿಸುವ ಕಂಪನಿಗಳ ವ್ಯಾಪಾರ ಹೆಚ್ಚಿಸಬೇಕಾಗುತ್ತದೆ. ಈ ತಲೆ ಕೊರೆಯುವವರಿಗೆ ತಮ್ಮ ಈ ಪ್ರವೃತ್ತಿ ತಿಳಿದಿರುತ್ತೋ ಇಲ್ಲವೋ ಎಂದು ಒಮ್ಮೊಮ್ಮೆ ಅಚ್ಚರಿಯಾಗುತ್ತದೆ.

ತಮ್ಮ ಮಾತು ಕೇಳುತ್ತಿರುವವರು ಬೇಸತ್ತು ಆಕಾಶ ನೋಡಿದರೂ, ಆಕಳಿಸಿದರೂ, ತಮಗೆ ಮಾತಿನಲ್ಲಿ ಇಷ್ಟವಿಲ್ಲ ಎಂಬುದನ್ನು ಅದೆಷ್ಟೇ ರೀತಿಯಲ್ಲಿ ವ್ಯಕ್ತಪಡಿಸಿದರೂ ತಲೆ ಕೊರೆಯುವಿಕೆಯನ್ನು ನಿಲ್ಲಿಸಲಾರರು – ಈ ರಣಕಲಿಗಳು !

ಕಾಲೇಜಿನಲ್ಲಿ ಓದುತ್ತಿದ್ದ ಸಮಯದಲ್ಲಿ ನನ್ನ ಸ್ನೇಹಿತರಲ್ಲಿ ಕೆಲವರು ತಲೆ ಕೊರೆಯುವವರು ಇದ್ದರು. ಬರೀ ನನ್ನ ಸ್ನೇಹಿತರಲ್ಲೇ ಏಕೆ, ಎಲ್ಲರ ಸ್ನೇಹಿತರಲ್ಲೂ ತಲೆ ಕೊರೆಯುವವರು ಇದ್ದೇ ಇರುತ್ತಾರೆ.

ಕಾಲೇಜು ದಿನಗಳ ನನ್ನ ಸ್ನೇಹಿತರಲ್ಲಿ ಒಬ್ಬನಾದ ರಾಮಚಂದ್ರನನ್ನು ನಾವು 'ಮೊಳೆ' ಎಂಬ ಹೆಸರಿನಿಂದಲೇ ಕರೆಯುತ್ತಿದ್ದೆವು ! ಹೀಗೆ ಕರೆಯುವುದರಿಂದ ಅವನಿಗೆ ವಿಲಕ್ಷಣವಾದ ಸಂತೋಷವಾಗುತ್ತಿತ್ತಂತೆ ! ಅವನಂತೂ ಮಾತನಾಡಬೇಕೆಂದೇ ಮಾತನಾಡುತ್ತಿದ್ದ ! ಇದರೊಟ್ಟಿಗೆ ಆಡಂಬರದ, ಆಲಂಕಾರಿಕ ಪದಗಳನ್ನು ಉಪಯೋಗಿಸುವ ಚಟ ಬೇರೆ ! ಅವಶ್ಯಕತೆ ಇರಲಿ, ಇಲ್ಲದಿರಲಿ, 'ಸಾಹಿತ್ಯಿಕ', 'ಶೈಕ್ಷಣಿಕ', 'ಸಾಮಾಜಿಕ ಕಳಕಳಿ', 'ಮಣ್ಣಿನ ವಾಸನೆ', 'ಅನನ್ಯ', 'ಉತ್ಕರ್ಷ' – ಮುಂತಾದ ಹತ್ತಾರು ಪದಗಳನ್ನು ಎಗ್ಗಿಲ್ಲದೆ, ಎಲ್ಲೆಂದರಲ್ಲಿ, ಅರ್ಥ ಬಾರದಿದ್ದರೂ ಸಹ ಪ್ರಯೋಗಿಸುತ್ತ ದೊಡ್ಡ ಭೈರಿಗೆಯಾಗಿದ್ದ. ಕಳೆದ ಮೂರು ವರ್ಷಗಳಿಂದ ಅವನನ್ನು ಭೇಟಿಯಾಗಿಲ್ಲವಾದರೂ ಅವನು ತನ್ನ ಮೂಲಪ್ರವೃತ್ತಿಯನ್ನು ಬದಲಾಯಿಸದೆ ಸಿಕ್ಕಸಿಕ್ಕಲ್ಲಿ ಸಿಕ್ಕಸಿಕ್ಕವರಿಗೆ ಮೊಳೆ ಹೊಡೆಯುತ್ತಿದ್ದಾನೆ ಎಂದು ಖಡಾಖಂಡಿತವಾಗಿ ಹೇಳಬಲ್ಲೆ.

ನನ್ನ ಸ್ನೇಹಿತರಲ್ಲಿ ಭೈರಿಗೆಗೆ ಹೆಸರಾದ ಇನ್ನೊಬ್ಬನೆಂದರೆ ಆನಂದ. ಇವನಿಗೂ ರಾಮಚಂದ್ರನಿಗೂ ಅಜಗಜಾಂತರ ವ್ಯತ್ಯಾಸ ! ರಾಮಚಂದ್ರ ತಾನು ತಲೆ ಕೊರೆಯುತ್ತಿರುವೆ ಎಂದು ತಿಳಿದೇ ತಲೆ ಕೊರೆಯುವ ಭೂಪ ! ಆದರೆ ಆನಂದ ತಾನು ರಸವತ್ತಾಗಿ, ಅರ್ಥಪೂರ್ಣವಾಗಿ ಮಾತಾಡುತ್ತಿರುವೆ ಎಂಬ ನಂಬಿಕೆಯಿಂದಲೇ ಮಾತಾಡುವ ಮನುಷ್ಯ ! 'ನಿನ್ನ ಮಾತು ರಣಭೈರಿಗೆ' ಎಂದು ನಾವೆಷ್ಟೇ ಹೇಳಿದರೂ ಅವನು ನಂಬುತ್ತಿರಲಿಲ್ಲ. ಈಗ ಅವನ ವಿಷಯ ಗೊತ್ತಿಲ್ಲ. 'ಉದರ ನಿಮಿತ್ತಂ' ನಾವೆಲ್ಲರೂ ಪದವಿಗಳನ್ನು ಮುಗಿಸಿ ಹಲವು ಕಡೆ ಚದುರಿಹೋಗಿದ್ದೇವೆ.

'ನೆಲ ಹತ್ತಿ ಉರಿದೊಡೆ ನಿಲಬಹುದಲ್ಲದೆ, ಒಲೆ ಹತ್ತಿ ಉರಿದೊಡೆ ನಿಲಬಹುದೆ ಅಯ್ಯಾ ?' ಎಂದು ಹನ್ನೆರಡನೆ ಶತಮಾನದಲ್ಲಿ ಬಸವಣ್ಣ ಪ್ರಶ್ನಿಸಿದರು. ಹಾಗೆ, ತಲೆ ಕೊರೆಯುವವನು ಸ್ನೇಹಿತನೇ ಆದರೆ ನಮ್ಮ ಗತಿಯೇನು...? ತೀರಾ ಹತ್ತಿರದ ಸ್ನೇಹಿತನಾದರೆ ತಲೆಯ ಮೇಲೆ ಮೊಟಕಿ 'ನಿನ್ನ ಭೈರಿಗೆ ನಿಲ್ಲಿಸು' ಎನ್ನಬಹುದು. ಅಪರಿಚಿತನಾದರೆ ತಲೆಯನ್ನು ಇನ್ನೊಂದು ಕಡೆ ತಿರುಗಿಸಿ ನಮ್ಮ ಕಿವಿಯನ್ನು ರಕ್ಷಿಸಿಕೊಳ್ಳಬಹುದು. ಆದರೆ ಉದರ ನಿಮಿತ್ತ ತೇಪೇದಾರಿಕೆಯಲ್ಲಿ ಇರುವಾಗ ನಮ್ಮ ಮೇಲಧಿಕಾರಿ, ಅರ್ಥಾತ್ ನಮ್ಮ ಬಾಸೇ ತಲೆ ಕೊರೆದರೆ ನಮ್ಮನ್ನು ರಕ್ಷಿಸುವವರು ಯಾರು...? ಬಹುಶಃ ಭಕ್ತಿ ಭಂಡಾರಿ ಬಸವಣ್ಣನವರಿಗೆ ಅವರ ಬಾಸ್ ಯಾನೆ ರಾಜ ಬಿಜ್ಜಳ ಈ ರೀತಿ ತಲೆ ಕೊರೆದಾಗ ಈ ವಚನ ಸೃಷ್ಟಿ ಯಾಯಿತೆ...? ಮೇಲಧಿಕಾರಿಯೇ ತಲೆ ಕೊರೆದರೆ ಬೇರೆ ದಾರಿಯಿಲ್ಲದ ವಿಧಿಯನ್ನು ಹಳಿಯುತ್ತಾ ಅವರ ಹಳೆಯ ಮೊಳೆಗಳಿಗೆ ನಮ್ಮ ಕಿವಿಯನ್ನೀಯಲೇಬೇಕು! ಒಮ್ಮೊಮ್ಮೆ ಈ ಬಾಸುಗಳೋ ಎಂತೆಂಥಾ ವಿಷಯಗಳ ಬಗೆಗೆ ಮೊಳೆ ಹೊಡೆಯುತ್ತಾರೆಂದರೆ, ಅಲ್ಲಿಯೇ ಯಾವುದಾದರೊಂದು ಹಳೆಯ ಚಾಕು ಸಿಕ್ಕರೆ ಅದರಿಂದ ತಿವಿದುಕೊಂಡು ಸಾಯಬೇಕೆನಿಸುತ್ತದೆ. ಇದು ಬಹುಶಃ ನಿಮ್ಮ ಅನುಭವ ಕೂಡ ಆಗಿರಬಹುದು !!

ಮೊನ್ನೆಯ ಮಾತನ್ನೇ ಹೇಳುತ್ತೇನೆ. ಬೆಳ್ಳಂಬೆಳಿಗ್ಗೆ, ಅಂದರೆ ಸುಮಾರು ಒಂಬತ್ತು ಗಂಟೆಯ ಸಮಯ. ಇದೇನು ಬೆಳಿಗ್ಗೆ ಒಂಬತ್ತಕ್ಕೇ ಬೆಳ್ಳಂಬೆಳಿಗ್ಗೆ ಎನ್ನುತ್ತಾನಲ್ಲ ಎಂದು ನಿಮಗೆ ಅಚ್ಚರಿಯಾಗಬಹುದು. ನನ್ನೂರಾದ ಮೈಸೂರಿನ ಜನರೆಷ್ಟು ಸೋಮಾರಿಗಳೆಂದರೆ ಇವರಿಗೆ ಸೂರ್ಯೋದಯ ವಾಗುವುದೇ ಎಂಟು ಗಂಟೆಗೆ ! ಹಾಲಿನವ ನಿಮ್ಮ ಮನೆಯ ಕಾಲಿಂಗ್ ಬೆಲ್ ಒತ್ತುವುದೇ ಎಂಟಕ್ಕೆ ! ದಿನಪತ್ರಿಕೆ ಬರುವುದೇ ಏಳೂವರೆಗೆ ! ನಮ್ಮ ಕಾರ್ಖಾನೆಯ ಸಾಮಾನ್ಯ ಪಾಳಿ ಶುರುವಾಗುವುದು ಎಂಟಕ್ಕೆ.

ಅಂದು ಬೆಳಿಗ್ಗೆ ಬಾಸ್ ಕರೆದಿದ್ದರು. ನಾನಲ್ಲಿಗೆ ಹೋದಾಗ ಇನ್ನೂ ಎರಡು ಸೆಕ್ಷನ್ನುಗಳ ಹೆಡ್ಡುಗಳು ಬಂದಿದ್ದರು. ಕಾರ್ಖಾನೆಗೆ ಸಂಬಂಧಿಸಿದ ವಿಷಗಳನ್ನು ತಿಳಿಸಿದರು, ಅದರ ಬಗೆಗೆ ಚರ್ಚೆ, ತೀರ್ಮಾನಗಳೂ ಆದುವು. ಮಧ್ಯೆ ಒಮ್ಮೆ ಕಾಫಿ ತರಿಸಿಕೊಟ್ಟರು. ಇದೆಲ್ಲಾ ಹದಿನೈದು ನಿಮಿಷಕ್ಕೆ ಮುಗಿಯಿತು. ಆಮೇಲೆ ಶುರುವಾಯಿತು ನೋಡಿ ತಲೆ ಕೊರೆಯುವುದು !! ಬಾಸಿಗೆ ಒಳ್ಳೇ ಮೂಡ್ ಬಂದಿತ್ತೆಂದು ಕಾಣುತ್ತದೆ. ನಮ್ಮ ಅಫಿಷಿಯಲ್ ವಿಷಯಗಳು ಮುಗಿದಿದ್ದರೂ ಬರೋಬ್ಬರಿ ಅರ್ಧ ಗಂಟೆ ಅಗತ್ಯವಿಲ್ಲದ ವಿಷಯಗಳನ್ನೆತ್ತಿ ಭೈರಿಗೆ ಹಿಡಿದರು ! ಇಷ್ಟಾದರೂ ಅವರಿಗೆ ತೃಪ್ತಿಯಾಗಿರಲಿಲ್ಲ ! ನಮ್ಮನ್ನು ಭೈರಿಗೆಯಿಂದ ಬಿಡುಗಡೆ ಮಾಡುವಂತೆ ಕಾಣಲಿಲ್ಲ.

ಅವರ ತಲೆ ಕೊರೆಯುವಿಕೆ, ಜಪಾನ್ ದೇಶದ ಜನರ ಕೆಲಸದ ಸಂಸ್ಕೃತಿಯಿಂದ ಶುರುವಾಗಿ, ದಿಕ್ಕು ತಪ್ಪಿ ಆನಂತರ ಎಲ್ಲೆಲ್ಲೋ ಹೋಗಿ ಸಿನಿಮಾ, ಚಿತ್ರಕಲೆ, ಬಾಟಿಕ್ ಇನ್ನೂ ಹಲವಾರು ವಿಷಯಗಳ ಮೇಲೆ ಹರಿದು ಕೊನೆಗೆ ಅವರ ಶ್ರೀಮತಿಯವರ ಹವ್ಯಾಸಗಳ ಬಗ್ಗೆ ಸಾಗಿತ್ತು. ಅಲ್ಲಿ ನಾವು ನಾಲ್ಕು ಜನ ಸೆಕ್ಷನ್ ಹೆಡ್ಡುಗಳು ಹೆಡ್ಡರಾಗಿ ಕುಳಿತಿದ್ದೆವು. ಹೇಳೀಕೇಳಿ ಬಾಸ್ ! ಬೇಸರಿಸು ವಂತಿರಲಿಲ್ಲ ! ಆಕಳಿಸುವಂತಿರಲಿಲ್ಲ ! 'ನಿಮ್ಮ ಭೈರಿಗೆ ಸಾಕು' ಅನ್ನುವಂತಿರಲಿಲ್ಲ !! ಹೇಳಲಾರದ ಹಿಂಸೆ !! ಬಿಡುಗಡೆಯಿಲ್ಲದ ಸ್ಥಿತಿ !! ನಮ್ಮ ಸ್ಥಿತಿಗೆ ನಾವೇ ಮರುಗುತ್ತಿದ್ದೆವು. ಈ ರಣಭೈರಿಗೆಯಿಂದ ಮುಕ್ತಿ ನೀಡುವಂತೆ ದೇವರನ್ನು ಮನಸ್ಸಿನಲ್ಲೇ ಪ್ರಾರ್ಥಿಸುತ್ತಿದ್ದೆವು. ಆ ಸಮಯಕ್ಕೇ ಭಗವಂತ ಒಂದು ದೂರವಾಣಿ ಕರೆಯನ್ನು ದಯಪಾಲಿಸಿದ. ಬಾಸ್‌ಗೆ ಫೋನು ಬಂದಿತ್ತು !! ಅದೂ ಸೂಪರ್ ಬಾಸ್‌ನಿಂದ !! ಆ ಸೂಪರ್ ಬಾಸ್ ನಮ್ಮ ಬಾಸ್‌ಗೆ ತಲೆ ಕೊರೆಯುವುದನ್ನು ಶುರುಮಾಡಿದಂತಿತ್ತು !!

ಅಂತಹ ಒಂದು 'ಪವಾಡಕ್ಕೆ' ಕಾಯುತ್ತಿದ್ದ ನಾವು ಒಬ್ಬೊಬ್ಬರಾಗಿ ಎದ್ದು ಜಾಗ ಖಾಲಿ ಮಾಡಿದೆವು !! ದೇವರಿಲ್ಲ ಎನ್ನುವ ನಾಸ್ತಿಕವಾದಿಗಳಿಗೆ ಇಲ್ಲಿದೆ ಉತ್ತರ ! ಫೋನಿನ ಆ ಪವಾಡ ನಡೆಯದಿದ್ದರೆ ನಮ್ಮ ಕಿವಿಗಳ ಗತಿ ಏನಾಗುತ್ತಿತ್ತೆಂಬುದನ್ನು! ನೀವೇ ಊಹಿಸಿ!!

ಇದೆಲ್ಲಾ ಓದಿದ ಮೇಲೆ ನಿಮಗೂ ಅನ್ನಿಸಿರಬೇಕು. ಈ ಲೇಖಕನೇನು ಸಾಮಾನ್ಯನಲ್ಲ. ತಲೆ ಕೊರೆಯುವ ವಿಷಯದಲ್ಲಿ ಇಷ್ಟೊಂದು ಕೊರೆದನಲ್ಲ ಎಂದು !! ಇದು ಕೊರೆತವಾಗಿ ಕಂಡರೆ ಕ್ಷಮಿಸಿ ! ನನ್ನ ಉದ್ದೇಶ ತಲೆ ಕೊರೆಯುವುದರ ಬಗೆಗೆ ಹೇಳುವುದಾಗಿತ್ತೇ ಹೊರತು ತಲೆ ಕೊರೆಯುವುದಲ್ಲ !!


**ಎಸ್. ಜಿ. ಶಿವಶಂಕರ್**
# ೫೧೭೭, 'ಶಿವಲತ', ಹೆಚ್. ಟಿ. ಜೋಡಿ ರಸ್ತೆ, ವಿಜಯನಗರ ೨ನೇ ಹಂತ, ಮೈಸೂರು–೧೭

# ಅಮೆರಿಕ : ಟ್ರಂಪ್ ದರ್ಬಾರಿಗೆ ಹೆಚ್ಚುತ್ತಿರುವ ಪ್ರತಿಭಟನೆ



ಇತಿಹಾಸವನ್ನು ಕೆದಕಿದರೆ ಸಾಕಷ್ಟು ಐಲುದೊರೆಗಳಿದ್ದುದನ್ನು ಕಾಣಬಹುದು. ರಾಜಮಹಾರಾಜರುಗಳ ನಿರಂಕುಶ ಆಡಳಿತ ಅಂತ್ಯಗೊಂಡು ಪ್ರಜಾಪ್ರಭುತ್ವ ಯುಗ ಪ್ರಾರಂಭಿಸಿದ ಇಪ್ಪತ್ತನೇ ಶತಮಾನದಲ್ಲಿ ಸರ್ವಾಧಿಕಾರಿಗಳು ಹಲವು ದೇಶಗಳಲ್ಲಿ ಮೆರೆದದ್ದನ್ನು ಕಂಡಿದ್ದೇವೆ. ಅದರಿಂದ ಪ್ರಜೆಗಳಿಗೆ ಆದ ಅನ್ಯಾಯ, ಭ್ರಷ್ಟಾಚಾರ, ಸ್ವಜನ ಪಕ್ಷಪಾತ, ಹಿಂಸಾಚಾರ ಎಲ್ಲವನ್ನೂ ನೋಡಿದ್ದೇವೆ. ಹಿಟ್ಲರ್, ಮುಸ್ಸೋಲಿನಿ, ಹಿರೋ ಹಿಟೊ, ಸ್ಟಾಲಿನ್, ಪೋಲ್‌ಪಾಟ್, ಪೆರಾನ್, ಪಿನೋಷೆ ಮುಂತಾದವರು ನಡೆಸಿದ ಕ್ರೌರ್ಯ ನೆನಪಿನಿಂದ ಮಾಸಿಲ್ಲ. ಒಂದು ಶತಮಾನದಲ್ಲಿ ಎರಡು ಮಹಾಯುದ್ಧಗಳು, ಕ್ರಾಂತಿಗಳು, ಸಂಭವಿಸಿದ ಸಣ್ಣಪುಟ್ಟ ಸಮರಗಳು, ಜಗತ್ತನ್ನೇ ಸರ್ವನಾಶ ಮಾಡಬಲ್ಲ ನ್ಯೂಕ್ಲಿಯ ಅಸ್ತ್ರಗಳು, ವಸಾಹತುಶಾಹಿಗಳು ನಿರ್ಮಿಸಿದ ಸಾಮ್ರಾಜ್ಯಗಳ ಪತನ, ಸ್ವತಂತ್ರ ರಾಷ್ಟ್ರಗಳ ಉದಯ, ವಿಜ್ಞಾನ, ತಂತ್ರಜ್ಞಾನಗಳ ಮುನ್ನಡೆ, ಬಂಡವಾಳಶಾಹಿಗಳ ಏಳುಬೀಳು, ಬೃಹತ್ ಕಾರ್ಪೊರೇಟುಗಳ ಉದಯ, ಜಾಗತೀಕರಣ, ಉದಾರೀಕರಣ, ಮುಕ್ತ ಮಾರುಕಟ್ಟೆಯ ಭರಾಟೆ, ಅಭಿವೃದ್ಧಿ ಹೊಂದಿದ, ಹೊಂದಿಲ್ಲದ ರಾಷ್ಟ್ರಗಳ ಮಧ್ಯೆ ಅಂತರ, ಶ್ರೀಮಂತರು–ಬಡಜನರ ನಡುವೆ ಬೆಳೆಯುತ್ತಿರುವ ಕಂದರ ಮೊದಲಾದುವೆಲ್ಲ ನಡೆದುಹೋಗಿದೆ.

ಇಪ್ಪತ್ತೊಂದನೆ ಶತಮಾನ ಪ್ರಾರಂಭವಾದದ್ದೇ ಭಯೋತ್ಪಾದನೆಯ ವಿರುದ್ಧ ಜಾಗತಿಕ ಸಮರ ಸಾರುವುದರೊಂದಿಗೆ. ಈ ಸಮರ ಘೋಷಿಸಿದ್ದು ಅಮೆರಿಕ. ಈ ಹೆಸರಿನಲ್ಲಿ ಆಫ್ಘಾನಿಸ್ತಾನ, ಇರಾಕ್‌ಗಳ ಮೇಲೆ ದುರಾಕ್ರಮಣ ಎಸಗಿದ್ದು ಅಮೆರಿಕ ಹಾಗೂ ಅದರ ಮಿಲಿಟರಿ ಕೂಟದ ಮಿತ್ರ ರಾಷ್ಟ್ರಗಳು. ಭಾರತ ಮತ್ತು ಇತರ ಕೆಲವು ರಾಷ್ಟ್ರಗಳಿಗೆ ಸೀಮಿತವಾಗಿದ್ದ ಭಯೋತ್ಪಾದಕರ ದಾಳಿ ಜಾಗತಿಕ ಮಟ್ಟ ಏರಿದ್ದು ಆಗಲೆ. ಬಂಡವಾಳಶಾಹಿ ರಾಷ್ಟ್ರಗಳ ಆರ್ಥಿಕ ಶಿಥಿಲತೆ, ಬಿಕ್ಕಟ್ಟು ಮರುಕಳಿಸಿದ್ದು ಕೂಡ ಹೊಸ ಶತಮಾನದ ಶುರುವಿನಲ್ಲೇ. ಹಾಗೆಯೇ ಇಸ್ಲಾಮಿಕ್ ರಾಷ್ಟ್ರಗಳಲ್ಲಿ ಅನಿರ್ದಿಷ್ಟವಾದ ಆಂದೋಳನವೂ ಹಬ್ಬಿತು. ಅಮೆರಿಕದಲ್ಲಿ ಆಗ ಅಧಿಕಾರದಲ್ಲಿದ್ದುದು ಜಾರ್ಜ್ ಬುಷ್. ಆನಂತರ ಅಧಿಕಾರಕ್ಕೆ ಬಂದದ್ದು ಬರಾಕ್ ಒಬಾಮ. ಎಂಟು ವರ್ಷ ಅಧಿಕಾರದಲ್ಲಿ ಈತ ಆಫ್ರಿಕನ್ ಅಮೆರಿಕನ್ ಜನಾಂಗದ ಮೊದಲ ಅಧ್ಯಕ್ಷ ಎನ್ನುವುದನ್ನು ಬಿಟ್ಟರೆ ಹೇಳಿಕೊಳ್ಳುವಂಥ ಸಾಧನೆಯನ್ನೇನೂ ಮಾಡಲು ಅವಕಾಶವಾಗಲಿಲ್ಲ. ಅದಕ್ಕೆ ಸೆನೆಟ್ ಹಾಗೂ ಕಾಂಗ್ರೆಸ್ಸಿನಲ್ಲಿ ಬಹುಮತ ಇಲ್ಲದ್ದೂ ಒಂದು ಕಾರಣ. ಬಡಜನರ ಆರೋಗ್ಯದ ಬಗ್ಗೆ ಕಾಳಜಿಹೊಂದಿದ್ದ ಈತನ ಬಹು ಚರ್ಚಿತ 'ಒಬಾಮಾ ಕೇರ್' ಎಂಬ ವಿಮಾ ಯೋಜನೆ ಕೂಡ ಅರ್ಧಂಬರ್ಧ ಜಾರಿಯಾಯಿತು. ಹಿಂದಿನ ಸರಕಾರದ ನೀತಿಗಳನ್ನೇ ಮುಂದುವರಿಸಿಕೊಂಡು ಹೋದ ಈತನ ನಂತರ ಈಗ ಅಧಿಕಾರಕ್ಕೆ ಬಂದಿರುವುದು ರಿಪಬ್ಲಿಕನ್ ಪಕ್ಷದ ರೊನಾಲ್ಡ್ ಟ್ರಂಪ್.

ಕಡಿಮೆ ಮತಗಳನ್ನು ಪಡೆದರೂ ಜಯಭೇರಿ ಬಾರಿಸಿದ ಟ್ರಂಪ್ ಈಗ ರಾಷ್ಟ್ರಪತಿಯಾಗಿ ಶ್ವೇತಭವನ ಸೇರಿ ತಿಂಗಳಾಗುತ್ತ ಬಂತು. ರಿಯಲ್ ಎಸ್ಟೇಟ್, ಎಂಟರ್‌ಟೇನ್‌ಮೆಂಟ್ ದಂಧೆಯಿಂದ ಸಾವಿರಾರು ಕೋಟಿ ಡಾಲರ್‌ಗಳನ್ನು ಸಂಪಾದಿಸಿರುವ ಈತ ದೇಶವನ್ನೂ ಹಾಗೇ ಯರ್‍ರಾಬಿರ್‍ರಿಯಾಗಿ ನಡೆಸಿಕೊಂಡು ಹೋಗಲು ಹೆಜ್ಜೆ ಇರಿಸಿದ್ದಾನೆ. ಚುನಾವಣೆಗಳ ನಂತರ ಯಾವತ್ತೂ ಅಮೆರಿಕನ್ ಸಮಾಜ ವಿಭಜಿತವೇ. ಆದರೆ ಟ್ರಂಪ್‌ಗೆ ವಿರೋಧ, ಪ್ರತಿಭಟನೆಗಳು ದಿನೇದಿನೇ ಹೆಚ್ಚಾಗುತ್ತಿವೆ. ತೆರೆಯ ಹಿಂದೆ ಅಧಿಕಾರದ ಮೇಲೆ ಪ್ರಭಾವ ಬೀರುತ್ತಿದ್ದ ಕಾರ್ಪೊರೇಟ್ ವಲಯ ಈಗ ನೇರವಾಗಿಯೇ ಅಧಿಕಾರ ಚಲಾಯಿಸಹೊರಟಿದೆ. ಪರಿಣಾಮ ಈಗಲೇ ಊಹಿಸುವುದು ಕಷ್ಟ. ಟ್ರಂಪ್ ಆಡಳಿತದಲ್ಲಿ ಉನ್ನತ ಹುದ್ದೆಗಳನ್ನು ಅಲಂಕರಿಸಿರುವ ಸಂಪುಟದ ಸದಸ್ಯರೆಲ್ಲ ಹಲವು ಸಹಸ್ರ ಕೋಟ್ಯಧಿಪತಿಗಳ ಒಡೆಯರೇ. ಬಲಾಢ್ಯ ಶ್ರೀಮಂತ ರಾಷ್ಟ್ರ ಅಮೆರಿಕದ ಅಧಿಪತಿಗೆ ಆಡಳಿತ ನಿರ್ವಹಣೆಯಲ್ಲಿ ಹೆಚ್ಚು ಅಧಿಕಾರ ಇದೆ. ದೇಶದ ಉಭಯ ಸದನಗಳಲ್ಲೂ ರಿಪಬ್ಲಿಕನ್ ಪಕ್ಷಕ್ಕೆ ಬಹುಮತ ಇರುವುದರಿಂದ ಟ್ರಂಪ್‌ಗೆ ಅನುಕೂಲ.

ಅಮೆರಿಕದ ಹಿರಿಮೆಯನ್ನು ಮತ್ತೆ ಪ್ರತಿಷ್ಠಾಪಿಸುವ, ಅಮೆರಿಕನ್ನರಿಗೇ ಉದ್ಯೋಗ ಸೃಷ್ಟಿಸುವ ಹೆಸರಿನಲ್ಲಿ ಚುನಾವಣೆ ಗೆದ್ದ ಟ್ರಂಪ್ ಅಧಿಕಾರ ವಹಿಸಿಕೊಂಡ ಮೇಲೆ ಮೊದಲು ಮಾಡಿದ್ದು ಒಬಾಮಾಗೆ ಬಹಳ ಪ್ರಿಯವಾಗಿದ್ದ 'ಒಬಾಮಾ ಕೇರ್' ಆರೋಗ್ಯ ವಿಮಾ ಯೋಜನೆಯನ್ನು ರದ್ದುಗೊಳಿಸಿದ್ದು. ಇದರಿಂದ ೧೮ ಮಿಲಿಯ ಜನ ಇನ್ನುಮುಂದೆ ಚಿಕಿತ್ಸೆಗೆ ದುಬಾರಿ ಹಣ ತೆರಬೇಕಾಗುತ್ತದೆ. ಅಮೆರಿಕದಲ್ಲಿ ವೈದ್ಯಕೀಯ ಸೌಲಭ್ಯ ಸುಲಭವಾಗಿ ಜನಸಾಮಾನ್ಯರಿಗೆ ಎಟುಕದಿರುವಂಥ ಪರಿಸ್ಥಿತಿ ಹಿಂದಿನಿಂದಲೂ ಬಂದದ್ದು. ವೈದ್ಯರನ್ನು ಸಂದರ್ಶಿಸುವುದಕ್ಕೆ, ಚಿಕಿತ್ಸೆ ಪಡೆದುಕೊಳ್ಳುವುದಕ್ಕೆ ವಿಮೆ ಇಲ್ಲದವರ ಪಾಡು ಫಜೀತಿ ಹೇಳತೀರದು. ಇಸ್ಲಾಮಿಕ್ ರಾಷ್ಟ್ರಗಳ ಪ್ರಜೆಗಳಿಗೆ ಅಮೆರಿಕ ಪ್ರವೇಶಕ್ಕೆ ವಿಪರೀತ ನಿರ್ಬಂಧಗಳನ್ನು ಹೇರಿರುವ ಅಧ್ಯಕ್ಷ ಟ್ರಂಪ್ ಏಳು ಇಸ್ಲಾಮಿಕ್ ರಾಷ್ಟ್ರಗಳು – ಇರಾಕ್, ಇರಾನ್, ಲಿಬಿಯ, ಯೆಮೆನ್, ಸೊಮಾಲಿಯ, ಸೂಡಾನ್, ಸಿರಿಯ – ನಾಗರಿಕರಿಗೆ ಅಮೆರಿಕಾಗೆ ಪ್ರವೇಶ ನಿರಾಕರಿಸುವ ಆಜ್ಞೆ ಹೊರಡಿಸಿದರು. ಅಮೆರಿಕದ ಸುಪ್ರೀಮ್ ಕೋರ್ಟ್‌ನ ಮಧ್ಯ ಪ್ರವೇಶದಿಂದ ಈ ಆಜ್ಞೆಯನ್ನು ತಡೆ ಹಿಡಿಯಲಾಗಿದೆ. ಆದರೂ ಟ್ರಂಪ್ ಪಟ್ಟುಬಿಡದೆ ಬೇರೊಂದು ರೀತಿಯಲ್ಲಿ ಅದನ್ನು ಜಾರಿಗೊಳಿಸಲು ನೋಡುತ್ತಿದ್ದಾರೆ. ಅಮೆರಿಕ ಬೆಳೆದದ್ದೇ ವಲಸೆಗಾರರ ನಾಡಾಗಿ. ಅಲ್ಲಿ ಸಾಕಷ್ಟು ಮಂದಿ ಭಾರತೀಯರು, ಚೀಣೀಯರು, ಮೆಕ್ಸಿಕನ್ನರು, ಪಾಕಿಸ್ತಾನಿಗಳು, ಹಲವು ಇಸ್ಲಾಮಿಕ್ ರಾಷ್ಟ್ರಗಳ ಜನ ಇದ್ದಾರೆ. ಈಗ ಟ್ರಂಪ್ ವಲಸೆಯನ್ನು ನಿರ್ಬಂಧಿಸಲು ಹೊರಟಿದ್ದಾರೆ. ಕಳೆದ ಶತಮಾನದ ಅರವತ್ತರ ದಶಕದಿಂದ ವೈದ್ಯರು, ಇಂಜಿನಿಯರುಗಳು, ಮುಖ್ಯವಾಗಿ ಸಾಫ್ಟ್‌ವೇರ್‌ನವರು ಹಾಗೂ ಇತರರು ಅಮೆರಿಕಕ್ಕೆ ಅಗತ್ಯವಾಗಿತ್ತು. ಈಗ ಬೇಡವಾಗಿದೆ. ಉತ್ತರ ಅಮೆರಿಕದ ದಕ್ಷಿಣದ ತುದಿಯಲ್ಲಿರುವ ಮೆಕ್ಸಿಕೊ ವಲಸೆಗಾರರು ಒಂದು ರೀತಿಯಲ್ಲಿ ಅಮೆರಿಕದ ಅಭಿವೃದ್ಧಿಗೆ ಬೆನ್ನೆಲುಬಾಗಿದ್ದಾರೆ ಎನ್ನಬಹುದು. ಅಲ್ಲಿಂದ ಅಕ್ರಮವಲಸೆಗಾರರ ಸಂಖ್ಯೆ ೫.೬ ಮಿಲಿಯ ಎಂದು ಅಂದಾಜು ಮಾಡಲಾಗಿದೆ. ಕೃಷಿ ಕ್ಷೇತ್ರದಿಂದ ಹಿಡಿದು ಎಲ್ಲ ಬಗೆಯ ಕೆಲಸಗಳಲ್ಲೂ ತೊಡಗಿಕೊಂಡಿರುವ ಇವರು ಮೂಲತಃ ಶ್ರಮಿಕರು. ಈಗ ೨೫ ಬಿಲಿಯ ಡಾಲರು ಖರ್ಚು ಮಾಡಿ ಗಡಿಯಲ್ಲಿ ವಲಸೆ ತಡೆಯಲು ಟ್ರಂಪ್ ಗೋಡೆ ನಿರ್ಮಿಸಲು ಹೊರಟಿದ್ದಾರೆ. ಬರ್ಲಿನ್ ಗೋಡೆ ಏನಾಯಿತು ಎನ್ನುವುದು ಟ್ರಂಪ್‌ಗೆ ತಿಳಿದಿರಬೇಕು. ಅಂತೂ ಟ್ರಂಪ್ ನೀತಿಯಿಂದ ಭಾರತೀಯರಿಗೆ, ಮೆಕ್ಸಿಕನ್ನರಿಗೆ, ಮುಸ್ಲಿಮರಿಗೆ ಅಮೆರಿಕ ಪ್ರವೇಶ ಮುಂದೆ ದುಸ್ತರವಾಗಲಿದೆ.

ಹನ್ನೆರಡು ದೇಶಗಳೊಂದಿಗೆ ಮಾಡಿಕೊಂಡಿದ್ದ ವಾಣಿಜ್ಯ ಒಪ್ಪಂದವನ್ನು ರದ್ದುಗೊಳಿಸಿರುವ ಟ್ರಂಪ್ ಹೊಸ ಒಪ್ಪಂದಕ್ಕೆ ಮುಂದಾಗಿದ್ದಾರೆ. ತೀವ್ರವಾದ ಪ್ರತಿಭಟನೆಯನ್ನು ಎದುರಿಸುತ್ತಿರುವ ಅಮೆರಿಕದ ಅಧ್ಯಕ್ಷ ಟ್ರಂಪ್ ಮುಂದೆ ಏನೇನು ಮಾಡುವರೋ ನೋಡಬೇಕಿದೆ.

**ಸೀಯಾರ್ಕೆ**

'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ ೩ನೇ ಬ್ಲಾಕ್, ಕತ್ತರಿಗುಪ್ಪೆ, ಬೆಂಗಳೂರು – ೫೬೦೦೮೫




# ಸಂತ ಚೋಖಾಮೇಳಾನ ಸಾಮಾಜಿಕ ಚಿಂತನೆ



ಮರಾಠಿ ಸಂತ ಚಳವಳಿಯು ೧೩ನೇ ಶತಮಾನದ ಕೊನೆಗೆ ಆರಂಭ ಗೊಂಡಿತು. ಮೂಢನಂಬಿಕೆ, ಡಾಂಭಿಕತೆ ಮತ್ತು ಜನಸಾಮಾನ್ಯರ ಧಾರ್ಮಿಕ ಬಂಧನದಿಂದ ಬಿಡುಗಡೆ ಪಡೆಯಲೆಂದೇ ಈ ಆಂದೋಲನ ಶುರುವಾಯಿತು. ಆಧ್ಯಾತ್ಮಿಕ ಉನ್ನತಿ ಮತ್ತು ಜಾತೀಯತೆಯ ನಾಶವೇ ಇದರ ಉದ್ದೇಶ. ಸಂತರು ಸಾಮಾಜಿಕ ಪ್ರಶ್ನೆಗಳನ್ನೂ ಎತ್ತಿದರು. ಪಂಢರಪುರದ ವಿಠ್ಠಲನನ್ನು ತಮ್ಮ ದೈವವೆಂದು ಸ್ವೀಕರಿಸಿ, ಅವನನ್ನೇ ಭಕ್ತಿಯ ಕೇಂದ್ರದಲ್ಲಿರಿಸಿ ತಮ್ಮ ಕಾರ್ಯಕ್ಕೆ ಚಾಲನೆ ನೀಡಿದರು. ಶಬ್ದಗಳ ಮಾತಿನ ಚಾಬೂಕು ಝಳಪಿಸಿ ಬಹುಜನ ಸಮಾಜದಲ್ಲಿ ಜಾಗೃತಿ ತಂದರು. ಸಮತೆ–ಬಂಧುತ್ವದ ಬಗೆಗೆ ಬೋಧಿಸಿದರು. ಮನುಷ್ಯನು ಜಾತಿಯಿಂದ ಶ್ರೇಷ್ಠನೆನಿಸಿಕೊಳ್ಳುವದಿಲ್ಲ, ತನ್ನ ಸದ್ಗುಣ, ಸದ್ವರ್ತನೆ, ಜ್ಞಾನದಿಂದ ಶ್ರೇಷ್ಠನೆನಿಸಿಕೊಳ್ಳುತ್ತಾನೆ ಎಂಬುದನ್ನು ಎತ್ತಿ ತೋರಿಸಿದರು.

ಸಂತ ಚೋಖಾಮೇಳಾನು ಮಹಾರ ಜಾತಿಯಲ್ಲಿ ಜನಿಸಿದನು. ವೈಚಾರಿಕ ಚಾರಿತ್ರ್ಯದ ಸಹಾಯದಿಂದ ಸಾಮಾಜಿಕ ಪ್ರತಿಷ್ಠೆಯಿಲ್ಲದಿದ್ದರೂ ಅವನು ಸಂತ ಚಳವಳಿಯ ಮುಂಚೂಣಿಯಲ್ಲಿದ್ದನು. ಅವನು ಕೈಕೊಂಡ ಕಾರ್ಯ ಅವರ್ಣನೀಯವಾದುದು. ವಿದರ್ಭದ ಬುಲ್ಡಾನಾ ಜಿಲ್ಲೆಯ ಕುಗ್ರಾಮದಲ್ಲಿ ಜನಿಸಿದ ಚೋಖೊಬಾ ತನ್ನ ವಿಚಾರ ಮತ್ತು ಕಾರ್ಯದಿಂದ ಶ್ರೇಷ್ಠ ಸಂತ ಪದವಿಗೆ ಹೋಗಿ ತಲುಪಿದನು. ಅವನ ಜೀವನ ಪರಿಶುದ್ಧವಾಗಿತ್ತು. ಒಂದೆಡೆ ಭಾಗವತ ಧರ್ಮವು ಅವನನ್ನು ಅಪ್ಪಿಕೊಂಡರೆ, ಮತ್ತೊಂದೆಡೆ ಹಿಂದೂ ಸಮಾಜ 'ಮೈಲಿಗೆ' ಎಂದು ದೂರ ಸರಿಸುತ್ತಿತ್ತು. ಈ ಬಗೆಯಲ್ಲಿ ಇಕ್ಕಟ್ಟಿನಲ್ಲಿ ಸಿಲುಕಿದ ಈ ಮಹಾಪುರುಷನು ಎಲ್ಲ ಬಗೆಯ ಅವಹೇಳನವನ್ನು ಸಹಿಸಿ, ತನ್ನ ಸಂಪೂರ್ಣ ಜೀವನವನ್ನು ವಿಠ್ಠಲನ ಪಾದಕ್ಕೆ ಅರ್ಪಿಸಿದನು. ಇದೇ ವಿಠ್ಠಲ ಭಕ್ತಿಯ ಬಲದಿಂದ ಮತ್ತು ಪಾರಮಾರ್ಥಿಕ ಅಧಿಕಾರದ ಬಲದಿಂದ ಸಂತಸಮುದಾಯದಲ್ಲಿ ಗೌರವದ ಸ್ಥಾನವನ್ನು ಪಡೆದನು. ಅವನ ಮನದಲ್ಲಿ ಸಾಮಾಜಿಕ ದುಃಖದ ಬಗೆಗೆ ಕಸಿವಿಸಿಯಿತ್ತು. ಅವನು ತನ್ನ ಅಭಂಗಗಳಲ್ಲಿ ಸಮಕಾಲೀನ ಸಮಾಜ, ಜಾತೀಯತೆ, ವಿಷಮತೆ, ಸಮಾಜದ ಅರಾಜಕತೆಯ ಬಗೆಗೆ ಬರೆದಿದ್ದಾನೆ. ಮಾನಸಿಕ ವ್ಯಥೆಯನ್ನು ತೋಡಿಕೊಂಡಿದ್ದಾನೆ.

*ನಿನ್ನ ಸೇವೆ ಹೇಗೆ ಮಾಡಲಿ, ಹೀನ ಕುಲದಲ್ಲಿ ಜನಿಸಿದೆ*
*ದೂರ ದೂರ ಸರಿ ಎನ್ನುವರು, ಹೇಗೆ ಕಾಣಲಿ ದೇವರೆ ನಿನ್ನನು.*
*ಹೀನಕುಲದವನೆಂದು ಜರಿಯುವರು. ಹೇಗೆ ಮಾಡಲಿ ಸೇವೆ*
*ಊರೂರು ಅಲೆದು ನಾಮಸ್ಮರಣೆ ಮಾಡುವದೇ ಎನ್ನ ಕಾರ್ಯ.*

ಆ ಕಾಲದ ಸಮಾಜವು ರೀತಿರಿವಾಜಿನಿಂದ ಕುರುಡಾಗಿತ್ತು. ಬೇಗ ಗುಣವಾಗುವ ರೋಗವಲ್ಲವಿದು. ಹಿಂದೂ ಧರ್ಮದ ಪ್ರಾಚೀನ ವೃಕ್ಷವು ಕೆಟ್ಟ ರೀತಿರಿವಾಜಿನಿಂದ ಪೊಳ್ಳಾಗಿದೆ. ಈ ವೃಕ್ಷದಲ್ಲಿ ಚೈತನ್ಯ ತುಂಬಿ, ಅದು ವಿಶಾಲಗೊಳ್ಳಲು ಸ್ತ್ರೀಯರಿಗೂ ಶೂದ್ರರಿಗೂ ಮಹತ್ವ ನೀಡಬೇಕೆಂದು ಅವನು ಪಾಂಡುರಂಗನಲ್ಲಿ ಬೇಡಿಕೊಳ್ಳುತ್ತಾನೆ.

ಚೋಖಾಮೇಳಾ ಜ್ಞಾನೇಶ್ವರನ ಸಮಕಾಲೀನ ಸಂತನಾಗಿದ್ದ. ಹಲವು ಕಾಲ ಪಂಢರಪುರದಲ್ಲೇ ನೆಲೆಸಿದ್ದ. ಸಂತನಾಮದೇವನೇ ಅವನಿಗೆ ಮಂತ್ರ ಉಪದೇಶ ಮಾಡಿದ್ದ. ಅವನು ಪಂಢರಪುರದಲ್ಲಿ ಲಭಿಸಿದ ಸುಖವನ್ನು ತಮ್ಮ ಅಭಂಗದಲ್ಲಿ ಬಣ್ಣಿಸಿದ್ದಾರೆ. ಸ್ವರ್ಗ, ಮೃತ್ಯು, ಪಾತಾಳದಲ್ಲಿ ಪಂಢರಪುರವೇ ಶ್ರೇಷ್ಠ. ವಿಠ್ಠಲನೇ ಭಕ್ತರ ಹಾದಿಕಾಯುತ್ತ ನಿಂತಿದ್ದಾನೆ. ಹೀಗಾಗಿ ಈ ಸುಖಕ್ಕೆ ಸೀಮೆಯಿಲ್ಲ. ಚಂದ್ರಭಾಗಾ ಎಂಬ ನದಿ ಇಲ್ಲಿದೆ. ಇಲ್ಲಿ ಎಲ್ಲರಿಗೂ ಆತ್ಮಸುಖ ಲಭಿಸುತ್ತದೆ.

ಚೋಖಾಮೇಳಾನ ಆತ್ಮನಿವೇದನೆ, ಕರುಣೆ, ನಾಮ, ಉಪದೇಶ, ಭಕ್ತಿ, ಮಡಿ–ಮೈಲಿಗೆ, ಸಾಮಾಜಿಕ ಸ್ಥಿತಿಯ ಅಭಂಗ ರಚನೆಗಳು ಉಪಲಭ್ಯವಿವೆ. ಹಗಲಿಡಿ, ಬೆವರು ಸುರಿಸಿ ದುಡಿದು, ತುಣುಕು ರೊಟ್ಟಿಗಾಗಿ ಧಣಿಯ ಬಾಗಿಲಲ್ಲಿ ನಿಂತು ಯಾಚನೆ ಮಾಡುವ ನಾಚಿಕೆಗೇಡಿನ ಸ್ಥಿತಿ ಅವರಿಗೆ ಬಂದಿತ್ತು.

*ಜೋಹಾರ ತಾಯಿ ತಂದೆ ಜೋಹಾರ*
*ನಿಮ್ಮ ಮಹಾರರ ಮಹಾರ ನಾನು*
*ತೀರ ಹಸಿದು ಕಂಗಾಲಾಗಿದ್ದೇನೆ*
*ನಿಮ್ಮ ಎಂಜಲಿಗೆ ಕೈಯೊಡ್ಡುತ್ತಿರುವೆ...*

ಚೋಖೊಬಾನ ಅಭಂಗಗಳಲ್ಲಿ ಕರುಣ ರಸ ತುಂಬಿ ತುಳುಕಿದೆ. ಪತಿತರನ್ನು ಹೇಗೆ ನಡೆಸಿಕೊಳ್ಳಲಾಗುತ್ತಿದೆ ಎಂಬ ಸೂಚನೆ 'ಜೋಹಾರ' (ಭಿಕ್ಷೆ)ದಲ್ಲಿದೆ. ಅವನು ಈ ಜಾತೀಯತೆಯನ್ನು ಹೋಗಲಾಡಿಸುವ ಪ್ರಯತ್ನವನ್ನು ಮಾಡಿದನು. ಇದಕ್ಕಾಗಿ ವಿವಿಧ ರೂಪಕ, ಪ್ರತಿಮೆಗಳನ್ನು ಬಳಸಿದ್ದಾನೆ.

ಭಕ್ತರಿಗೆ ಜಾತಿಯಿಲ್ಲ. ದೇವರಿಗೆ ಎಲ್ಲರೂ ಸಮಾನರು. ಉಚ್ಚ, ನೀಚ ಎಂಬ ಕುಲಭೇದ ಇದು ಬಾಹ್ಯಾಚರಣೆಗೆ ಸಂಬಂಧಿಸಿದ್ದು. ದೇವರು ಭಕ್ತಿ–ಭಾವವನ್ನು ಬಯಸುತ್ತಾರೆ. ಆದರೂ ತಳವರ್ಗದ ಸಂತರು ತೀರ ಉಪೇಕ್ಷೆಗೊಳಗಾಗಿದ್ದರು. ಈ ಸಂತರು ಒಂದೆಡೆ ಉದಾರ–ಉದಾತ್ತ ಧಾರ್ಮಿಕ ತತ್ವವನ್ನು ಹಸ್ತಗತ ಮಾಡಿಕೊಳ್ಳುವಲ್ಲಿ ಯಶಸ್ವಿಯಾಗಿದ್ದರೆ, ಮತ್ತೊಂದೆಡೆ ಕಠೋರ ವಾಸ್ತವವನ್ನು ಎದುರಿಸುತ್ತಿದ್ದರು. ಸಾಮಾಜಿಕ ಉಪೇಕ್ಷೆಯ ಪರಿಣಾಮವು ಚೋಖಾಮೇಳಾನ ಮನದಲ್ಲಿ ತುಂಬಿಕೊಂಡಿತ್ತು. 'ಕಬ್ಬು ಡೊಂಕಾದರೆ ಸಿಹಿ ಡೊಂಕೆ, ಬಾಹ್ಯ ಬಣ್ಣಕ್ಕೆ ಮರುಳಾಗುವದೋ !' ಎಂಬ ಪ್ರಶ್ನೆಯನ್ನು ಎದುರಿಗಿಡುತ್ತಾನೆ.

ತಳವರ್ಗದವನಾಗಿದ್ದರಿಂದ ಅವನಿಗೆ ಮಂದಿರದಲ್ಲಿ ಪ್ರವೇಶ ಸಿಗಲಿಲ್ಲ. ಆದರೂ ವಿಠ್ಠಲನನ್ನು ಕಾಣುವ ತವಕ. ಹೀಗಾಗಿ ಆತ್ಮನಿವೇದನೆ ಮಾಡಲೆಂದು ಅವನು ನೇರವಾಗಿ ಮಂದಿರವನ್ನು ಪ್ರವೇಶಿಸುತ್ತಾನೆ. ವಿಠ್ಠಲನ ಪಾದಕ್ಕೆ ತಲೆಯೂರುತ್ತಾನೆ. ಭಕ್ತಿಯ ಪ್ರಭಾವದಿಂದ ವಿಠ್ಠಲನ ಕೊರಳ ಹಾರವು, ಅವನ ಮಸ್ತಕದ ಮೇಲೆ ಬೀಳುವದನ್ನು ಕಂಡು ಪುರೋಹಿತರು ಮುನಿಯುತ್ತಾರೆ. ಆಗವನು 'ಬೇಗ ಬಾ ವಿಠ್ಠಲ, ಎನ್ನನು ರಕ್ಷಿಸು, ದೇವರು ಮೈಲಿಗೆಯಾದನೆಂದು ಅರ್ಚಕರು ಹಿಡಿಶಾಪ ಹಾಕುತ್ತಿದ್ದಾರೆ' ಎಂದು ಮೊರೆಯಿಡುತ್ತಾನೆ. ಇಲ್ಲಿ ಅವನು ಬಂಡಾಯದ ಭಾಷೆಯನ್ನು ಬಳಸಿಲ್ಲ. ಉಚ್ಚವರ್ಣದವರ ಧಾರ್ಮಿಕ ಸತ್ತೆಗೆ ಸವಾಲು ಹಾಕುವದಿಲ್ಲ. ಪರಂಪರೆಗೆ ಶರಣುಹೋಗುತ್ತಾನೆ.

ಪಾಂಡುರಂಗನ ನಾಮಸ್ಮರಣೆಯ ಹೊರತು ಜೀವನದಲ್ಲಿ ಬೇರೇನೂ ಇಲ್ಲ. ಅದರಿಂದ ತನ್ನ ಕಲ್ಯಾಣವಾಗುತ್ತದೆ ಎಂಬ ನಂಬಿಕೆ ಅವನದು. "ನನಗೆ ವೇದ, ಪುರಾಣ, ನಿಗಮ, ಶಾಸ್ತ್ರ, ಜಪ–ತಪ ಏನೂ ಗೊತ್ತಿಲ್ಲ. 'ನಾನೊಬ್ಬ ಭೋಳೆ–ಮುಗ್ಧ ಭಕ್ತ. ಕೇವಲ ನಿನ್ನ ನಾಮ ಮಾತ್ರ ಹಾಡುವೆ" ಎಂದೆನ್ನುತ್ತಾನೆ. ಸಗುಣದಿಂದ ನಿರ್ಗುಣದ ಕಡೆಗೆ ಅವನ ವೈಚಾರಿಕ ಪ್ರವಾಸ ಸಾಗಿದೆ. ಭಾಗವತ ಧರ್ಮ ಅದ್ವೈತ ತತ್ವಜ್ಞಾನವಿದೆ. ಅಂತರಂಗದಲ್ಲೇ ದೇವರಿದ್ದಾನೆ. ಅಹಂಕಾರ ತೊರೆಯಿರಿ, ಎಲ್ಲರೂ ಸಮಾನರು, ಗುರು ಮೋಕ್ಷದ ದಾರಿ ತೋರಿಸುವನು, ಭಕ್ತಿಮಾರ್ಗವೇ ಶ್ರೇಷ್ಠ ಎಂದಿದ್ದಾನೆ. ವಿಠ್ಠಲನ ಪಂಢರದ ಮಹಿಮೆ, ಆತ್ಮನಿವೇದನೆ, ಬಾಲಕ್ರೀಡೆ, ಕರುಣೆ, ನಾಮಸ್ಮರಣೆ, ಮಡಿಮೈಲಿಗೆ, ಭಕ್ತವಾತ್ಸಲ್ಯ, ಗುರು ಮಹಿಮೆ, ಸಾಮಾಜಿಕ ವಾಸ್ತವ ಇದೆಲ್ಲವೂ ಅವನ ಅಭಂಗಗಳಲ್ಲಿ ಕಾಣಸಿಗುತ್ತದೆ. ಅಸ್ಪೃಶ್ಯರ ದುಃಖದ ವರ್ಣನೆಯಿದೆ. ಸಾಮಾಜಿಕ ಬದ್ಧತೆಯಿದೆ. ಇದೇ ಅವನ ತಾತ್ವಿಕ ಚಿಂತನೆ. ಅವನಂಥ ಸಂತರಿಂದಾಗಿ ವಾರಕರಿ ಸಂಪ್ರದಾಯವು ಜನಪ್ರಿಯಗೊಂಡಿತು.

**ಚಂದ್ರಕಾಂತ ಪೋಕಳೆ**
ನಂ. ೩೫೯, ಸ್ಕೀಮ್ ನಂ. ೪೦, ೩ನೇ ಹಂತ, ೪ನೇ ಅಡ್ಡರಸ್ತೆ
ಹನುಮಾನ್ ನಗರ, ಬೆಳಗಾವಿ – ೫೯೦ ೦೦೮

# ಶ್ರೀ ಆರ್. ಎಸ್. ರಾಜಾರಾಮ್ ಅವರಿಗೆ ಅಭಿವಂದನೆ

## ‘ಸೃಷ್ಟಿಯ ಸೆಲೆ’ ಪುಸ್ತಕ ಲೋಕಾರ್ಪಣೆ

(19-2-2017)





















Printed & published by Dr. Siddanagouda Patil on behalf of Navakarnataka Publications (P) Ltd., Embassy Centre, Crescent Road, Bengaluru-1 and printed at Sri Vinayaka Printers, No. 738/10, 60th Cross, 5th Block, Rajajinagar, Bengaluru-560 010. Published at Bengaluru.
Editor : Dr. Siddanagouda Patil. 

**HOSATHU** Kannada Monthly / MARCH 2017 / ₹ 20 (No. of Pages 64) Date of Publication : 26th of every month
RNI Regd. KARKAN / 1999 / 614. Karnataka Regd. KARN/BGE/07/2015-17
Licenced to post without prepayment. WPP No.14.
Posted at BENGALURU PSO, MYSORE ROAD, BENGALURU-560 026 on the 28th of every month.